# ಕರ್ನಾಟಕ-ಆಂಧ್ರ ಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

281-285


ಸಂಶೋಧಕರು

ಗುರುರಾಜ ಎ. ಮುಗಳಿ

ಮಾರ್ಗದರ್ಶಕರು

ಡಾ. ಹರಿಶ್ಚಂದ್ರ ದಿಗ್ಸಂಗಿಕರ

ಹಿ.ಶ್ರೇ. ಅಧ್ಯಾಪಕರು

ಜಾನಪದ ಅಧ್ಯಯನ ವಿಭಾಗ


285

285




ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಕರ್ನಾಟಕ-ಆಂಧ್ರ ಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಗುರುರಾಜ ಅ. ಮುಗಳಿ

ಮಾರ್ಗದರ್ಶಕರು
ಡಾ. ಹರಿಶ್ಚಂದ್ರ ದಿಗ್ಸಂಗಿಕರ
ಹಿ.ಶ್ರೇ. ಅಧ್ಯಾಪಕರು
ಜಾನಪದ ಅಧ್ಯಯನ ವಿಭಾಗ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ಪ್ರಮಾಣ ಪತ್ರ

"ಕರ್ನಾಟಕ-ಆಂಧ್ರಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಹರಿಶ್ಚಂದ್ರ ದಿಗ್ಸಂಗಿಕರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 26/09/08

ಗು. ಅ. ಮುಗಳಿ

**ಗುರುರಾಜ ಅ. ಮುಗಳಿ**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

ಗುರುರಾಜ ಅ. ಮುಗಳಿ ಅವರು "ಕರ್ನಾಟಕ-ಆಂಧ್ರಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

ಡಾ. ಹರಿಶ್ಚಂದ್ರ ದಿಗ್ಗಾಂವಿಕರ
ಮಾರ್ಗದಶಕರು ಮತ್ತು ಹಿ.ಶ್ರೇ. ಅಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬



ಗುಲ್ಬರ್ಗ ಜಿಲ್ಲೆಯ ನಕ್ಷೆ.

 ಕರ್ನಾಟಕ-ಆಂಧ್ರದ ಗಡಿರೇಖೆ

ಅಧ್ಯಯನದ ವ್ಯಾಪ್ತಿಗೊಳಪಟ್ಟ ಕರ್ನಾಟಕ-ಆಂಧ್ರ ಗಡಿಭಾಗದ ನಕ್ಷೆ.

 ಕರ್ನಾಟಕ-ಆಂಧ್ರದ ಗಡಿರೇಖೆ



# ಪರಿವಿಡಿ

ಇತ್ತೀಚಿನ ದಿನಗಳಲ್ಲಿ ಗಡಿಭಾಗದ ಜನರ ಸ್ಥಿತಿಗತಿಗಳ ಅಧ್ಯಯನಗಳು ತುಂಬಾ ಮಹತ್ವ ಪಡೆದುಕೊಂಡಿವೆ. ಒಂದಾನೊಂದು ಕಾಲದಲ್ಲಿ ಆಳಿದ ರಾಜಮಹಾರಾಜರು ತಮ್ಮ ರಾಜ್ಯದ ಮೇರೆಗಳನ್ನು ದೂರ ದೂರದವರೆಗೆ ವಿಸ್ತರಿಸಿಕೊಂಡಿದ್ದರು. ಆದರೆ ಬದಲಾದ ಪರಿಸ್ಥಿತಿಯು ಏಕೀಕರಣದ ನಂತರ ಭಾಷಾವಾರು ಪ್ರಾಂತ್ಯಗಳ ರಚನೆಗೆ ಒಳಪಟ್ಟಿತು. ಈ ಮೊದಲು ಒಂದೇ ಸಾಂಸ್ಕೃತಿಕ ಪರಿಧಿಯಲ್ಲಿ ಜೀವನ ನಡೆಸುತ್ತಿದ್ದವರನ್ನು ಮೊದಲ ಬಾರಿಗೆ ಅವರಾಡುವ ಭಾಷೆಯ ಆಧಾರದ ಮೇಲೆ ಭೌಗೋಳಿಕ ರೇಖೆಗಳನ್ನು ಕೊರೆದು, ಅವರಲ್ಲಿದ್ದ ಸೌಹಾರ್ದತೆಯನ್ನು ಸ್ವಲ್ಪ ದ್ವೇಷಕ್ಕೆ ತಿರುಗುವಂತೆ ಮಾಡಿತಾದರೂ ಉತ್ತಮ ಆಡಳಿತದ ಸಮಗ್ರ ಅಭಿವೃದ್ಧಿಯ ಕಲ್ಪನೆಯಲ್ಲಿ ಈ ಏಕೀಕರಣದ ಪ್ರಕ್ರಿಯೆ ಫಲಕಾರಿಯಾಯಿತು ಎನ್ನಬಹುದು. ಹೀಗೆ ಏಕೀಕರಣದಲ್ಲಿ ಭಾಷೆಯನ್ನು ಮುಖ್ಯವಾಗಿರಿಸಿಕೊಂಡು, ಒಂದು ಭಾಷೆಯನ್ನಾಡು ವವರನ್ನೆಲ್ಲ ಒಂದು ಭೌಗೋಳಿಕ ನೆಲೆಯಲ್ಲಿ ಒಗ್ಗೂಡಿಸುವ ಭರದಲ್ಲಿ ಅನೇಕರು ಈ ಭೌಗೋಳಿಕ ನೆಲೆಯಿಂದ ಹೊರಗುಳಿದರು. ಹೀಗೆ ಗಡಿಯಿಂದ ಹೊರಗುಳಿದ ನಮ್ಮ ಸಹೋದರರಿಗೆ ಇವತ್ತಿಗೂ ನಾವು ನ್ಯಾಯ ಕೊಡಲಾಗುತ್ತಿಲ್ಲ. ಇದಕ್ಕೆ ಆಡಳಿತಾತ್ಮಕ, ತಾಂತ್ರಿಕ ಕಾರಣಗಳಿವೆ. ಇದಕ್ಕೆ ಹೊರತಾಗಿಯೂ ನಮ್ಮೊಂದಿಗೆ ಇವರೆಲ್ಲ ಭಾವನಾತ್ಮಕ, ಸಾಂಸ್ಕೃತಿಕ ಸಂಬಂಧವನ್ನಿರಿಸಿಕೊಂಡಿದ್ದಾರೆ. ಇಂತವರು ನಮ್ಮ ರಾಜ್ಯದ ಗಡಿಗೆ ಹೊಂದಿಕೊಂಡಿರುವ ಅಕ್ಕಪಕ್ಕದ ರಾಜ್ಯಗಳಲ್ಲಿ ವಾಸಿಸುತ್ತಿದ್ದಾರೆ. ಪ್ರಸ್ತುತ ಇಂತಹ ಗಡಿನಾಡಿನಲ್ಲಿನ ಕನ್ನಡಿಗರ ಸ್ಥಿತಿಗತಿ ನೋಡುವುದೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

### ಉದ್ದೇಶ

ಚರಿತ್ರೆ ಮತ್ತು ಭಾಷೆಗಳಿಂದ ನಾಡನ್ನು ಕಟ್ಟಬಹುದು ಎಂದು ಇದುವರೆಗೂ ತಿಳಿದುಕೊಂಡಿದ್ದು, ಇಂದಿನ ಸಂದರ್ಭದಲ್ಲಿ ಕೇವಲ ಚರಿತ್ರೆ ಮತ್ತು ಭಾಷೆಗಳಿಂದ ನಾಡನ್ನು ಕಟ್ಟಲು ಸಾಧ್ಯವಿಲ್ಲ. ಇವೆರಡನ್ನು ಬಿಟ್ಟು ಇನ್ನೂ ಅನೇಕ ಅಂಶಗಳು ನಾಡನ್ನು ಕಟ್ಟಲು ಪೂರಕವಾಗುತ್ತವೆ. ಅಂತಲೇ ಚರಿತ್ರೆ ಮತ್ತು ಭಾಷೆಗಳಿಂದ ಹೊರತಾದ ಅನ್ಯ ಪೂರಕ ಅಂಶಗಳ ಹುಡುಕಾಟವೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ನಮಗೆ ಇಂದು ಎದುರಾಗುವ ಮುಖ್ಯ ಮೂಲಭೂತ ಪ್ರಶ್ನೆ ಎಂದರೆ ಕರ್ನಾಟಕ, ಕನ್ನಡ, ಕನ್ನಡಿಗ. ಇಲ್ಲಿಯವರೆಗೂ ನಾವು ಕರ್ನಾಟಕ, ಕನ್ನಡ, ಕನ್ನಡಿಗರ ಬಗ್ಗೆ ತಿಳಿದುಕೊಂಡಿದ್ದು ಸರಿಯಿದ್ದರೂ ಸದ್ಯದ ಪರಿಸ್ಥಿತಿಯಲ್ಲಿ ಈ ಮೊದಲಿನ ನಿಲುವುಗಳಲ್ಲಿ ಬದಲಾವಣೆಯನ್ನು ಕಂಡುಕೊಳ್ಳುತ್ತಿದ್ದೇವೆ.

ಕ್ರಿ.ಶ. ಸುಮಾರು ೬ನೇ ಶತಮಾನದಲ್ಲಿ ಚಾಲುಕ್ಯರು ಮೊಟ್ಟಮೊದಲ ಬಾರಿಗೆ ಕನ್ನಡ ನಾಡನ್ನು ಕಾವೇರಿಯಿಂದ ನರ್ಮದಾ ನದಿಯವರೆಗೂ ಸ್ಥಾಪಿಸಿದ್ದರು ಎಂಬುದಕ್ಕೆ ಚರಿತ್ರೆ ಆಧಾರ ನೀಡುತ್ತದೆ. ಇಮ್ಮಡಿ ಪುಲಕೇಶಿಯು ನರ್ಮದಾ ನದಿಯನ್ನು ಸಾಕ್ಷಿಯಾಗಿರಿಸಿಕೊಂಡು ಉತ್ತರದ ಶ್ರೀಹರ್ಷ

ಚಕ್ರವರ್ತಿಯನ್ನು ಸೋಲಿಸಿ 'ಪರಮೇಶ್ವರ', 'ದಕ್ಷಿಣಾಪಥೇಶ್ವರ' ಎಂಬ ಬಿರುದಿನೊಂದಿಗೆ ಸಮಸ್ತ ಭಾರತವನ್ನು ಉತ್ತರ ಮತ್ತು ದಕ್ಷಿಣ ಭಾಗಗಳೆಂದು ವಿಭಾಗಿಸಿದನು. ಅಂತಲೇ ಡಾ.ಎಂ.ಎಚ್. ಕೃಷ್ಣ "ದಕ್ಷಿಣ ಪಥದ ಇತಿಹಾಸವೆಂದರೆ ಅದು ಕರ್ನಾಟಕದ ಇತಿಹಾಸ"ವೆಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ನಂತರ ೯ನೇ ಶತಮಾನದಲ್ಲಿ "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್" ಎಂದು ಕವಿರಾಜಮಾರ್ಗಕಾರನು ಕನ್ನಡ ನಾಡಿನ ವಿಸ್ತಾರ, ಕನ್ನಡಿಗರ ವರ್ಣನೆ, ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ವಿವರಣೆ ನೀಡುತ್ತಾನೆ. ಗೋದಾವರಿ ಪ್ರದೇಶದ ನಾಂದೇಡ, ನಿಜಾಮಬಾದ, ಕರೀಮನಗರ, ಮೇದಕ ಇವು ಕವಿರಾಜಮಾರ್ಗಕಾರನ ಪ್ರಕಾರ ಕನ್ನಡ ನಾಡಿನ ಭಾಗಗಳು. ಚಾಲುಕ್ಯ ಮತ್ತು ರಾಷ್ಟ್ರಕೂಟ ಅರಸರ ಕಾಲದ ಕನ್ನಡ ನಾಡು ಮುಂದೆ ರಾಜಕೀಯ ಕಾರಣಗಳಿಂದಾಗಿ ತನ್ನ ವ್ಯಾಪ್ತಿಯನ್ನು ಕಳೆದುಕೊಂಡಿತು. ಹಾಗಾದರೆ ಇಲ್ಲಿ ನಮಗೆ ಎದುರಾಗುವ ಪ್ರಶ್ನೆ ಎಂದರೆ ಭೌಗೋಳಿಕ ಗಡಿಗಳ ಮೂಲಕ ನಾಡನ್ನು(ಕರ್ನಾಟಕ) ಕಟ್ಟಲು ಸಾಧ್ಯವೇ? ಹಿಂದಿನ ಗಡಿ ಇಂದಿಲ್ಲ, ಇಂದಿನ ಗಡಿ ನಾಳೆ ಇರುವುದೇ? ಇಂದಿನ ನಮ್ಮ ಮಕ್ಕಳಿಗೆ ನಾವು ಕರ್ನಾಟಕ ಎಂಬುದಾಗಿ ಹೇಳಿಕೊಟ್ಟಿರುವುದು ಸಮಂಜಸವೇ? ನಮ್ಮಲ್ಲಿ ಎಷ್ಟು ಜನರಿಗೆ ನಾಂದೇಡ್, ನಿಜಾಮಾಬಾದ್, ಕರೀಮನಗರ, ಮೇದಕ ಜಿಲ್ಲೆಗಳ ಪರಿಚಯವಿದೆ. ಕವಿರಾಜಮಾರ್ಗಕಾರ ಹೇಳಿದಂತೆ ಇಲ್ಲಿ ಇವತ್ತು ಕನ್ನಡಿಗರಿದ್ದಾರೋ ಇಲ್ಲವೋ ಎಂಬುದು ಬಹುತೇಕರಿಗೆ ತಿಳಿದಿಲ್ಲ. ಆದರೆ ವಾಸ್ತವದ ಸಂಗತಿಯೆಂದರೆ ಇಲ್ಲಿಯೂ ಕನ್ನಡಿಗರಿದ್ದಾರೆ. ಕನ್ನಡ ನಾಡಿನ ಆಗುಹೋಗುಗಳೊಡನೆ ತೆರೆಮರೆಯಲ್ಲಿ ಸಕ್ರಿಯ ಪಾತ್ರವಹಿಸುತ್ತ, ತಮ್ಮ ಮೂಲ ಭೌಗೋಳಿಕ ನೆಲೆಯಿಂದ ಹೊರಗುಳಿದು, ಪರೋಕ್ಷವಾಗಿ ಅವರಿಂದು ನಮ್ಮೊಂದಿಗಿದ್ದಾರೆ. ಈ ರೀತಿ ಇವರನ್ನೆಲ್ಲ ಭೌತಿಕವಾಗಿ ಹೊರಗಿಟ್ಟ ಮೇಲೆ ನಾವು **ಭೌಗೋಳಿಕ ಗಡಿರೇಖೆಯಿಂದ ನಾಡನ್ನು, ಸಮೃದ್ಧ ಕರ್ನಾಟಕವನ್ನು ಕಟ್ಟಲು ಸಾಧ್ಯವೇ?** ಎಂಬಂತಹ ಮೂಲಭೂತ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪರಿಯೇ ಈ ಅಧ್ಯಯನದ ಉದ್ದೇಶವಾಗಿದೆ.

ಇನ್ನು **ಕನ್ನಡ ಭಾಷೆಯಿಂದ ಕರ್ನಾಟಕವನ್ನು ಕಟ್ಟಲು ಸಾಧ್ಯವೇ?** ಎಂಬ ಪ್ರಶ್ನೆ ಇವತ್ತು ಎಲ್ಲರಿಗೂ ಮುಖ್ಯವಾಗಬೇಕಾಗಿದೆ. ನಮ್ಮ ಮಾತೃಭಾಷೆ ಕನ್ನಡ. ಭಾಷೆ ಹುಟ್ಟಿನೊಂದಿಗೆ ಬಂದಿರುತ್ತದೆ. ನಮ್ಮ ಮಾತೃಭಾಷೆ ಕನ್ನಡವಾದ್ದರಿಂದ ನಾವು ಕನ್ನಡಿಗರು. ಹಾಗಾದರೆ ಅನ್ಯ ಮಾತೃಭಾಷಿಕರು ಕನ್ನಡಿಗರಲ್ಲವೇ? ಈ ಪ್ರಶ್ನೆಯ ಉತ್ತರ ನಮ್ಮಲ್ಲಿಯೇ ಇದೆ. ಟಿಪ್ಪು ಸುಲ್ತಾನನ ಮಾತೃಭಾಷೆ ಉರ್ದು ಮಿಶ್ರಿತ, ದ.ರಾ. ಬೇಂದ್ರೆಯವರ ಮಾತೃಭಾಷೆ ಮರಾಠಿ, ಗೋವಿಂದ ಪೈಗಳ ಮಾತೃಭಾಷೆ ತುಳು, ಅಷ್ಟೇ ಏಕೆ ಖ್ಯಾತ ಸಂಶೋಧಕ ಶಂಬಾ ಜೋಶಿಯವರ ಮಾತೃಭಾಷೆ ಮರಾಠಿ ಆದ್ದರಿಂದ ಈ ಅಧ್ಯಯನದ ಮತ್ತೊಂದು ಮುಖ್ಯವಾದ ಪ್ರಶ್ನೆ ಎಂದರೆ, **ಮಾತೃಭಾಷೆ ಆಧಾರದ ಮೇಲೆ ಇವತ್ತು ನಾವು ಕನ್ನಡ ನಾಡನ್ನು ಕಟ್ಟಲು ಸಾಧ್ಯವೇ?** ಈ ನಿಲುವನ್ನು ಬದಲಿಸಿಕೊಳ್ಳಬೇಕೆ ಎಂಬುದು. ಟಿಪ್ಪುಸುಲ್ತಾನ, ಗೋವಿಂದ ಪೈ, ದ.ರಾ. ಬೇಂದ್ರೆ, ಶಂಬಾ ಜೋಶಿ - ಇವರೆಲ್ಲರ ಮಾತೃಭಾಷೆ ಕನ್ನಡವಲ್ಲದಿದ್ದರೂ ಅವರು ದುಡಿದದ್ದು ಈ ನಾಡಿಗಾಗಿ, ನಮ್ಮ ಕನ್ನಡಕ್ಕಾಗಿ. ಅವರ ಮಾತೃಭಾಷೆ ಕನ್ನಡವಲ್ಲದಿದ್ದರೂ ಅವರೆಲ್ಲರ ಮನಸ್ಸು

ಕನ್ನಡಿಗರವು. ಸದ್ಯದ ಸಂದರ್ಭದಲ್ಲಿ ಕೇವಲ ಕನ್ನಡ ಮಾತೃಭಾಷೆಯ ಜನರಿಂದ ಸಮೃದ್ಧ ಕನ್ನಡ ನಾಡನ್ನು ಕಟ್ಟುವುದು ಸಾಧ್ಯವಿಲ್ಲ. ಆದ್ದರಿಂದಲೆ ಭಾಷೆಗಿಂತ ಮನಸ್ಸು ಇಲ್ಲಿ ಮುಖ್ಯವಾಗುತ್ತದೆ. ಕರ್ನಾಟಕದಲ್ಲಿನ ಕನ್ನಡಮನಸ್ಸಿನ ಎಲ್ಲ ಅನ್ಯಭಾಷಿಕರನ್ನು ನಾವು ಇವತ್ತು ನಮ್ಮೊಂದಿಗೆ ಜೊತೆಮಾಡಿಕೊಳ್ಳಬೇಕಾಗಿದೆ. ಅವರಿಗೆ ಕನ್ನಡಕ್ಕಾಗಿ ದುಡಿಯುವಂತಹ ಸೌಹಾರ್ದತೆಯನ್ನು ನಾವು ಬೆಳೆಸಿಕೊಡಬೇಕಾಗಿದೆ. ಹೀಗಾದಾಗ ಮಾತ್ರ ಸಮೃದ್ಧ ಕನ್ನಡ ನಾಡನ್ನು ಕಟ್ಟಲು ಸಾಧ್ಯವಾಗುತ್ತದೆ.

ಗಡಿರೇಖೆಗಳಿಂದ ಮತ್ತು ಮಾತೃಭಾಷೆ ಆಧಾರದಿಂದ ಕನ್ನಡ ನಾಡನ್ನು ಕಟ್ಟಲು ಸಾಧ್ಯವಿಲ್ಲದಿದ್ದರೆ ನಮಗೆ ಎದುರಾಗುವ ಮತ್ತೊಂದು ಪ್ರಶ್ನೆ, ಕನ್ನಡಿಗರೆಂದರೆ ಯಾರು? ಕನ್ನಡಿಗರನ್ನು ಗುರುತಿಸುವಲ್ಲಿ ಕನ್ನಡ ಭಾಷೆಯನ್ನು ಪರಿಗಣಿಸಿದರೆ ಸಮೃದ್ಧ ಕರ್ನಾಟಕ ಕಟ್ಟುವಲ್ಲಿ ಅನ್ಯ ಭಾಷಿಕರ ಪಾತ್ರ ಏನು? ಭಾಷಿಕವಾಗಿ, ಕರ್ನಾಟಕದಲ್ಲಿ ಕನ್ನಡ ಮಾತನಾಡುವವರು ಬಹುಸಂಖ್ಯಾತರು. ಈ ಬಹುಸಂಖ್ಯಾತ ಕನ್ನಡ ಭಾಷಿಕರು ಅಲ್ಪಸಂಖ್ಯಾತ ಇತರ ಭಾಷಿಕರನ್ನು ಕೀಳಾಗಿ ಕಾಣುವಂತಾದರೆ, ಇಂತಹುದೆ ಪರಿಸ್ಥಿತಿ ಏಕೀಕರಣದ ನಂತರ ಇಂದಿನ ಕರ್ನಾಟಕದಿಂದ ಹೊರಗುಳಿದ ಕನ್ನಡಿಗರ ಮೇಲೆ ಅಲ್ಲಿನ ಬಹುಭಾಷಿಕರಿಂದಾಗುವುದಾದರೆ? ಕಾಸರಗೋಡು, ಸೊಲ್ಲಾಪುರ, ನಾಂದೇಡ, ತಾಂಡೂರು, ನಾರಾಯಣಪೇಟೆ, ಮುಕ್ತಲ, ಆದೋನಿ, ಅನಂತಪುರಗಳಲ್ಲಿ ನಮ್ಮ ಕನ್ನಡಿಗರು ಅಲ್ಪಸಂಖ್ಯಾತರಾಗಿರುವುದರಿಂದ ಅಲ್ಲಿನ ಭಾಷಿಕ ಬಹುಸಂಖ್ಯಾತರು ಕನ್ನಡದ ಅಲ್ಪಸಂಖ್ಯಾತರನ್ನು ಕೀಳರಿಮೆಯಿಂದ ಕಾಣುವುದಿಲ್ಲವೇ? ಆದುದರಿಂದಲೇ ಇಂದು ನಾವು ಕನ್ನಡಿಗ, ಕರ್ನಾಟಕ ಎಂಬುದರ ಕುರಿತಾಗಿ ಇಲ್ಲಿಯವರೆಗೂ ಇದ್ದಂತಹ ಸಂಕುಚಿತ ಮನೋಭಾವವನ್ನು ಬಿಟ್ಟು, ಭೌಗೋಳಿಕ, ಭಾಷಿಕ ಈ ಎರಡರ ಹೊರತಾಗಿ ಸಾಂಸ್ಕೃತಿಕ ಕರ್ನಾಟಕವನ್ನು ಕಟ್ಟಬೇಕಾಗಿದೆ. ಹೀಗೆ ಸಾಂಸ್ಕೃತಿಕ ಕರ್ನಾಟಕವನ್ನು ಕಟ್ಟಲು ಪ್ರಾರಂಭಿಸಿದಾಗಲೇ ಕರ್ನಾಟಕದಿಂದ ಹೊರಗುಳಿದ ನಮ್ಮ ಕನ್ನಡಿಗರನ್ನು ನಾವು ಪರಿಗಣಿಸಿದಂತೆ. ಇವತ್ತಿಗೂ ಕರ್ನಾಟಕದ ಗಡಿಯಿಂದ ಹೊರಗುಳಿದ ಕನ್ನಡಿಗರು ಭೌತಿಕವಾಗಿ ಅಲ್ಲದಿದ್ದರೂ ಮಾನಸಿಕವಾಗಿ ನಮ್ಮೊಂದಿಗಿದ್ದಾರೆ. ಅವರು ಕನ್ನಡ ನಾಡು-ನುಡಿ, ಸಂಸ್ಕೃತಿ, ಸಂಪ್ರದಾಯಗಳನ್ನು, ಆಚರಣೆಗಳನ್ನು ಇವತ್ತಿಗೂ ಬಿಟ್ಟಿಲ್ಲ. ಇಲ್ಲಿ ಹೇಳಹೊರಟಿರುವುದೇನೆಂದರೆ, ಈ ಅಧ್ಯಯನವು ಗುಲಬರ್ಗಾ ಜಿಲ್ಲೆಯ ಕರ್ನಾಟಕ-ಆಂಧ್ರ ಗಡಿಯಲ್ಲಿನ ಕನ್ನಡಿಗರ ಬಗ್ಗೆ ಅಂದರೆ, ಈ ಹಿಂದೆ ಕರ್ನಾಟಕದ ಗಡಿಯೊಳಗೆ ಇದ್ದು ಏಕೀಕರಣದ ನಂತರ ಆಂಧ್ರದ ಗಡಿಯೊಳಗೆ ಸೇರಿರುವ ಎಲ್ಲ ಕನ್ನಡಿಗರು ಸಾಂಸ್ಕೃತಿಕವಾಗಿ ನಮ್ಮೊಂದಿಗೆ ಇರುವರೋ ಇಲ್ಲವೋ ಎಂಬುದನ್ನು ಖಚಿತಪಡಿಸುವುದಾಗಿದೆ. ಮಾನಸಿಕವಾಗಿ ಕರ್ನಾಟಕದೊಂದಿಗೆ ಇದ್ದು ಒಂದು ವಿಚಿತ್ರ ಸನ್ನಿವೇಶದಲ್ಲಿ ಇವರೆಲ್ಲ ಬದುಕುತ್ತಿದ್ದಾರೆ. ಇತ್ತ ಕರ್ನಾಟಕದೊಂದಿಗೂ ಬಹಿರಂಗವಾಗಿ ಗುರುತಿಸಿಕೊಳ್ಳಲಾಗದೆ, ಅತ್ತ ಆಂಧ್ರದೊಂದಿಗೂ ಮನಸ್ಸಿನಿಂದ ಇರಲಾಗದ ಪರಿಸ್ಥಿತಿ ಇವರದಾಗಿದೆ. ಇದರಲ್ಲಿ ಅವರ ತಪ್ಪೇನು ಎಂಬುದು ಅವರಿಗೆ ಇಂದಿಗೂ ತಿಳಿದಿಲ್ಲ. ಇಂತಹ ಡೊಲಾಯಮಾನದ ಸ್ಥಿತಿಯಲ್ಲಿ ಬದುಕು ಸಾಗಿಸುತ್ತಿರುವ ಗಡಿಗ್ರಾಮಗಳ ಜನರು, ತಮ್ಮದೇ ಆದಂತಹ ಒಂದು ವಿಶಿಷ್ಟ ಗುರುತನ್ನು ಅಲ್ಲೆಲ್ಲ ಬೆಳೆಸಿಕೊಂಡಿದ್ದಾರೆ. ಇವರ ಈ ಮನೋವ್ಯಥೆಯ ಅಧ್ಯಯನವನ್ನು ಸಾಂಸ್ಕೃತಿಕವಾಗಿ ಕಟ್ಟಲು ಇಲ್ಲಿ ಪ್ರಯತ್ನಿಸಲಾಗಿದೆ.

ಗಡಿಭಾಗದಲ್ಲಿನ ಅನೇಕ ಸಮಸ್ಯೆಗಳು ಇಂದು ನಮಗೆ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗುತ್ತಿವೆ. ಈ ಪ್ರಶ್ನೆಗಳ ಆಧಾರದ ಮೇಲೆಯೇ "ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿ-ಗತಿ"ಯ ಈ ಅಧ್ಯಯನ ತನ್ನ ಹಂದರವನ್ನು ಹರಡಿಸಿಕೊಂಡಿದೆ. ಈ ಅಧ್ಯಯನದಲ್ಲಿ 'ಸ್ಥಿತಿ-ಗತಿ' ಎಂಬುದನ್ನು ಸಾಂಸ್ಕೃತಿಕ ಪರಿಭಾಷೆಯಲ್ಲಿ ಬಳಸಿದ್ದೇನೆಯೇ ಹೊರತು ಸಂಖ್ಯಾಶಾಸ್ತ್ರದ ದೃಷ್ಟಿಯಿಂದ ಅಲ್ಲ. ಅಂದರೆ ಬೀದರದಿಂದ ಕೋಲಾರದವರೆಗಿನ ಕರ್ನಾಟಕ-ಆಂಧ್ರದ ಗಡಿಯಲ್ಲಿ ಗಡಿ ತಕರಾರು, ಭಾಷಾ ಸಮಸ್ಯೆ, ಕೋಮುಗಲಭೆಗಳು ದೊಡ್ಡ ಮಟ್ಟದಲ್ಲಿ ಘಟಿಸಿರುವುದು ನಮಗೆ ಕಂಡು ಬಂದಿರುವುದಿಲ್ಲ. ಅದೇ ಇತರೇ ಕರ್ನಾಟಕದ ಗಡಿಭಾಗಗಳನ್ನು ತೆಗೆದುಕೊಂಡಾಗ, ಗಡಿ ತಕರಾರು, ಭಾಷಾ ತಕರಾರು, ನದಿ ನೀರಿನ ತಂಟೆಗಳು ದೊಡ್ಡ ಮಟ್ಟದಲ್ಲಿ ಘಟಿಸುತ್ತಿರುವುದು ಕಂಡು ಬರುತ್ತದೆ. ಆದರೆ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ಇಂತಹ ಯಾವುದೇ ರೀತಿಯ ಅಹಿತಕರ ಘಟನೆಗಳು ಎಲ್ಲಿಯೂ ಪದೇ ಪದೇ ನಡೆದಿರುವುದಿಲ್ಲ. ಕರ್ನಾಟಕ-ಆಂಧ್ರ ಗಡಿಯಲ್ಲಿನ ಕನ್ನಡ-ತೆಲುಗರ ನಡುವಿನ ಈ ಸೌಹಾರ್ದತೆಗೆ ಕಾರಣಗಳೇನು? ಕನ್ನಡಿಗರಿಂದಲೇ ಸೌಹಾರ್ದತೆ ಉಳಿದುಕೊಂಡಿದೆಯೋ ಅಥವಾ ತೆಲುಗರಿಂದ ಈ ಸೌಹಾರ್ದತೆ ಉಳಿದುಕೊಂಡಿದೆಯೋ ಎಂಬುದನ್ನು ನೋಡುವುದಾದರೆ, ಕನ್ನಡಿಗರು ಮತ್ತು ತೆಲುಗ ಎರಡು ಭಾಷಿಕರಿಂದಾಗಿ ಈ ಗಡಿಭಾಗದಲ್ಲಿ ಸೌಹಾರ್ದತೆ ಉಳಿದುಕೊಂಡು ಬಂದಿದೆ. ಇದನ್ನು ಕನ್ನಡಿಗರ ಮತ್ತು ತೆಲುಗರ ಒಪ್ಪಿತ ಮನಸ್ಸುಗಳು ಈ ಕೆಲಸ ಮಾಡಿವೆ. ಈ ಒಪ್ಪಿತ ಮನಸ್ಸುಗಳು ಯಾವ ರೀತಿಯ ಸಂಬಂಧಗಳನ್ನು ಗಡಿಗಳಲ್ಲಿ ಉಳಿಸಿ ಬೆಳೆಸಿಕೊಂಡು ಬಂದಿವೆ ಎಂಬುದನ್ನು ತಿಳಿಸುವುದಕ್ಕಾಗಿಯೇ ಗುಲಬರ್ಗಾ ಜಿಲ್ಲೆಯ ಕರ್ನಾಟಕ-ಆಂಧ್ರ ಗಡಿಯನ್ನು ಅಧ್ಯಯನಕ್ಕಾಗಿ ಬಳಸಿಕೊಳ್ಳಲಾಗಿದೆ.

ಒಂದು ಸಂದರ್ಭದಲ್ಲಿ ದಕ್ಷಿಣ ಭಾಗದಲ್ಲೆಲ್ಲ ಪಸರಿಸಿದ ಕನ್ನಡಿಗರು, ಭಾಷಾವಾರು ಪ್ರಾಂತ್ಯ ರಚನೆಯ (ಕರ್ನಾಟಕದ ಏಕೀಕರಣ) ಸಮಯದಲ್ಲಿ ಮೂಲ ಕನ್ನಡ ನಾಡನ್ನು ಕಳೆದುಕೊಳ್ಳಬೇಕಾಯಿತು. ಇಂದಿನ ಸರ್ಕಾರಗಳು ಸಮಗ್ರ ರೀತಿಯಲ್ಲಿ ಅಖಂಡ ಕರ್ನಾಟಕ ಒಂದೇ ಎಂದು, ಎಲ್ಲ ಪ್ರದೇಶಗಳಿಗೆ ಅವಶ್ಯಕವಿರುವ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳದೆ ಹೋದರೆ ಇನ್ನೂ ಬಹಳಷ್ಟು ಕನ್ನಡಿಗರನ್ನು, ಕನ್ನಡ ನಾಡನ್ನು ಕಳೆದುಕೊಳ್ಳಬೇಕಾಗುತ್ತದೆ. ಈಗಾಗಲೇ ಮಹಾರಾಷ್ಟ್ರವು ಕರ್ನಾಟಕದ ಖಾನಾಪುರ, ಬೆಳಗಾವಿ, ಭಾಲ್ಕಿ, ಔರಾದ್‌ಗಳನ್ನು ತನ್ನಲ್ಲಿ ವಿಲೀನಗೊಳಿಸಿಕೊಳ್ಳುವ ವಾತಾವರಣ ನಿರ್ಮಿಸುತ್ತಿದೆ. ಈಗಾಗಲೇ ತಾಂಡುರು, ನಾರಾಯಣಪೇಟೆ, ಆದೋನಿ, ಆಲೂರು, ಗುಂತಕಲ್ಲು, ರಾಯದುರ್ಗ, ಕಲ್ಯಾಣದುರ್ಗಗಳನ್ನು ಆಂಧ್ರಪ್ರದೇಶ ಕರ್ನಾಟಕದಿಂದ ಪಡೆದುಕೊಂಡಿದೆ. ಈ ನಿಟ್ಟಿನಲ್ಲಿ ಈಗಿರುವಂತಹ ಕರ್ನಾಟಕ ಮತ್ತು ಗಡಿಕನ್ನಡಿಗರನ್ನು ಹೇಗೆ ಉಳಿಸಿ, ಬೆಳೆಸಿಕೊಳ್ಳಬೇಕೆಂಬುದು ಪ್ರಸ್ತುತವಾಗಿ ನಮ್ಮ ಮೇಲಿನ ಜವಾಬ್ದಾರಿಯಾಗಿದೆ.

ಈ ಅಧ್ಯಯನದಲ್ಲಿ ಪ್ರಮುಖವಾಗಿ ಇಲ್ಲಿನ ಕರ್ನಾಟಕ-ಆಂಧ್ರದ ಭೌಗೋಳಿಕತೆ, ಚಾರಿತ್ರಿಕತೆ, ಧಾರ್ಮಿಕ ತಾಣಗಳ ಸಾಂಸ್ಕೃತಿಕ ಸಾಮರಸ್ಯ, ಜನಪದ ಸಾಹಿತ್ಯ, ಭಾಷಿಕ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮತ್ತು ಇಲ್ಲಿನ ಜನರು ಕನ್ನಡಿಗ, ಕರ್ನಾಟಕ ಎಂಬುದನ್ನು ಹೇಗೆ ಕಂಡುಕೊಂಡಿದ್ದಾರೆ. ಕನ್ನಡಿಗರ-ತೆಲುಗರ ಸಂಬಂಧ, ಇಲ್ಲಿರುವ ಕನ್ನಡಿಗರ ಮೇಲಿನ ಒತ್ತಡಗಳು-ಆಕರ್ಷಣೆಗಳಾವುವು ಮತ್ತು ಇವುಗಳಿಗೆ ಅವರು ಹೇಗೆ ಪರಿಹಾರೋಪಾಯಗಳನ್ನು ಕಂಡುಕೊಂಡಿದ್ದಾರೆ ಎಂಬ ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಈ ಅಧ್ಯಯನ ಮುಂದುವರೆಯುತ್ತದೆ.

ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿಗತಿಯ ಅಧ್ಯಯನವನ್ನು ಇಲ್ಲಿ ಮುಖ್ಯವಾಗಿ ಏಕೆ ತೆಗೆದುಕೊಳ್ಳಲಾಯಿತು ಎಂಬ ಪ್ರಶ್ನೆಯನ್ನು ಮುಂದಿರಿಸಿಕೊಂಡಾಗ ನಮ್ಮ ರಾಜ್ಯಕ್ಕೆ ಮಹಾರಾಷ್ಟ್ರ, ಕೇರಳ, ತಮಿಳುನಾಡು, ಗೋವಾ, ಆಂಧ್ರ ರಾಜ್ಯಗಳ ಗಡಿಗಳು ಅಂಟಿಕೊಂಡಿವೆ. ಈ ಎಲ್ಲ ರಾಜ್ಯಗಳು ಕರ್ನಾಟಕದೊಂದಿಗೆ ನೆಲ, ಜಲಗಳ ತಂಟೆ ತಕರಾರನ್ನು ಇರಿಸಿಕೊಂಡಿವೆ. ಕೇರಳದ ಗಡಿಯಲ್ಲಿ ಕಾಸರಗೋಡಿನ ಸಮಸ್ಯೆ, ಮಹಾರಾಷ್ಟ್ರದ ಗಡಿಯಲ್ಲಿ ಬೆಳಗಾವಿ ಸಮಸ್ಯೆ, ಗೋವಾದಲ್ಲಿನ ಕನ್ನಡಿಗರ ಸಮಸ್ಯೆ, ತಮಿಳುನಾಡಿನ ಗಡಿಯಲ್ಲಿ ಕಾವೇರಿ ನದಿಯ ಸಮಸ್ಯೆ ಈ ರೀತಿಯ ನೆಲ-ಜಲ ಸಮಸ್ಯೆಗಳು ಕರ್ನಾಟಕ-ಆಂಧ್ರದ ಗುಲಬರ್ಗಾ ಗಡಿಯಲ್ಲಿ ಕಂಡುಬರುವುದಿಲ್ಲ. ಅಂತೆಯೇ ಇಲ್ಲಿನ ಗಡಿಬಾಂಧವ್ಯ ದಿಂದಾಗಿ ಇದನ್ನು ಈ ಅಧ್ಯಯನಕ್ಕಾಗಿ ಗುರುತಿಸಿಕೊಳ್ಳಲಾಯಿತು. ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಸೌಹಾರ್ದತೆಯನ್ನು ಮುಖ್ಯವಾಗಿರಿಸಿಕೊಂಡು ಇಲ್ಲಿನ ಸ್ಥಿತಿಗತಿಗಳ ಅಧ್ಯಯನವನ್ನು ಅಧ್ಯಯನಕ್ಕೊಳ ಪಡಿಸಲಾಗಿದೆ.

ಪ್ರಸ್ತುತವಾಗಿ 'ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿಗತಿ' ಈ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನಗಳನ್ನು ಹೇಳಲಾಗಿದೆ. ಈ ಅಧ್ಯಯನದಲ್ಲಿ ಅಧ್ಯಯನದ ಉದ್ದೇಶ ಹೇಳುತ್ತಾ, ಕನ್ನಡಿಗರನ್ನು ಚರಿತ್ರೆ, ಭೌಗೋಳಿಕ ನೆಲೆ ಮತ್ತು ಮಾತೃಭಾಷೆಯ ಆಧಾರದ ಮೇಲೆ ಗುರುತಿಸಲು ಸಾಧ್ಯವೇ? ಅಥವಾ ಇವುಗಳನ್ನು ಮೀರಿ ಗಡಿರೇಖೆ ದಾಟಿ, ಗಡಿಯಿಂದ ಹೊರಗುಳಿದವರು, ಮಾತೃಭಾಷೆಯಿಂದ ಕನ್ನಡಿಗರಾಗದೆ ಕರ್ನಾಟಕದಲ್ಲಿ ಹಲವು ವರ್ಷಗಳಿಂದ ವಾಸವಿರುವವರು ಹೇಗೆ ಕನ್ನಡಿಗರಾಗುತ್ತಾರೆ ಎಂಬುದರ ಕುರಿತಾಗಿ ಇಲ್ಲಿ ವಿವೇಚಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಅಧ್ಯಯನದ ವ್ಯಾಪ್ತಿಯಲ್ಲಿ ಕರ್ನಾಟಕ-ಆಂಧ್ರದ ಗುಲಬರ್ಗಾ ಜಿಲ್ಲೆಗೆ ಹೊಂದಿಕೊಂಡಿರುವ ಗಡಿಗ್ರಾಮಗಳು ಹಾಗೂ ಇದಕ್ಕೆ ಹೊಂದಿಕೊಂಡಿರುವ ಆಂಧ್ರದ ಗಡಿಗ್ರಾಮಗಳ ವ್ಯಾಪ್ತಿಯನ್ನು ಇಲ್ಲಿ ಗುರುತಿಸಲಾಗಿದೆ. ಈ ಗಡಿಯ ಎರಡು ಪ್ರದೇಶಗಳು ಏಕೀಕರಣಕ್ಕಿಂತ ಮುಂಚೆ ಕರ್ನಾಟಕದ ಭಾಗಗಳಾಗಿದ್ದು, ಇವತ್ತು ಆಂಧ್ರ ಪ್ರದೇಶಕ್ಕೆ ಸೇರಿರುವುದು ಇಲ್ಲಿನ ಮುಖ್ಯ ಅಂಶವಾಗಿದೆ. ಇದಲ್ಲದೇ ಒಟ್ಟಾರೆಯಾಗಿ ಅಧ್ಯಯನದಲ್ಲಿ ಯಾವ ಯಾವ ವಿಧಾನಗಳನ್ನು ಅಧ್ಯಯನಕ್ಕಾಗಿ ಬಳಸಿಕೊಂಡಿದೆ ಎಂಬುದನ್ನು ಅಧ್ಯಯನದ ವಿಧಾನದಲ್ಲಿ ತಿಳಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಭೌಗೋಳಿಕತೆ, ಚಾರಿತ್ರಿಕತೆ ಮತ್ತು ಪ್ರಮುಖ ಗಡಿಗ್ರಾಮಗಳ ಪರಿಚಯವನ್ನು ಹೇಳಲಾಗಿದೆ. ಭೌಗೋಳಿಕ ಪರಿಚಯದಲ್ಲಿ ಇಲ್ಲಿನ ಹವಾಮಾನ, ನೀರಿನ ಮೂಲ, ಖನಿಜ ಸಂಪತ್ತುಗಳನ್ನು ಮುಖ್ಯವಾಗಿ ನೋಡಲಾಗಿದೆ. ಚಾರಿತ್ರಿಕವಾಗಿ ಈ ಪ್ರದೇಶ ವನ್ನಾಳಿದ ಪ್ರಮುಖ ಅರಸು ಮನೆತನಗಳಾದ ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ಯಾದವರು, ದೇವಗಿರಿಯ ಸೇವುಣರು, ವಾರಂಗಲ್ಲಿನ ಕಾಕತೀಯರು, ಉತ್ತರದ ಮುಸ್ಲಿಂ ಅರಸರು, ಬಹುಮನಿ ಸುಲ್ತಾನರು ಮತ್ತು ಹೈದರಾಬಾದಿನ ನಿಜಾಮರು - ಹೇಗೆ ಈ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದರು. ಈ ಎಲ್ಲ ಅರಸು ಮನೆತನಗಳ ಆಳ್ವಿಕೆ,

ಇಲ್ಲಿನ ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳ ಮೇಲೆ ಹೇಗೆ ಭೌಗೋಳಿಕವಾಗಿ ಮತ್ತು ಚಾರಿತ್ರಿಕವಾಗಿ ಪ್ರಭಾವ ಬೀರಿವೆ ಎಂಬುದನ್ನು ಸವಿಸ್ತಾರವಾಗಿ ನೋಡಲಾಗಿದೆ. ಅಲ್ಲದೆ ಪ್ರತಿಯೊಂದು ಹಂತಗಳಲ್ಲಿ ಇಲ್ಲಿನ ಸ್ಥಿತಿಗತಿಗಳಿಗೆ ಪ್ರಮುಖ ಪಾತ್ರ ವಹಿಸುತ್ತಿರುವ ಚಿಂಚೋಳಿ, ಮಿರ್‍ಯಾಣ, ಚಂದ್ರಂಪಳ್ಳಿ, ಸೇಡಂ, ಆಡಕಿ, ಮುಧೋಳ, ಎಲೇರಾಜೋಳ, ಯಾದಗಿರಿಗಳಂತಹ ಗಡಿಗ್ರಾಮ, ಗಡಿಪಟ್ಟಣ ಗಳ ಪರಿಚಯ ಮತ್ತು ಅವುಗಳ ಪ್ರಾಮುಖ್ಯತೆಯನ್ನು ಇಲ್ಲಿ ಪರಿಶೀಲಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ 'ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಸೌಹಾರ್ದತೆ'ಯನ್ನು ಅಲ್ಲಿನ ಧಾರ್ಮಿಕ ತಾಣಗಳಾದ ಯಾಕಾಂಬರಿ, ಮೈಲಾಪುರ, ಯಾನಗುಂದಿ, ಗಾಜರಕೋಟ, ಗುರುಮಠಕಲ್ಲುಗಳ ಪರಿಚಯ ಮಾಡಿಕೊಡುವುದರೊಂದಿಗೆ, ಈ ಧಾರ್ಮಿಕ ತಾಣಗಳು ಗಡಿಯಲ್ಲಿರುವುದರಿಂದ ಕನ್ನಡಿಗರು ಮತ್ತು ತೆಲುಗರು ಇಲ್ಲಿಗೆ ಬಂದು ಹೋಗುತ್ತಾರೆ. ಹೀಗೆ ಬಂದು ಹೋಗುವವರಿಗೆ ಗಡಿರೇಖೆ, ಭಾಷೆ ಮುಖ್ಯವಾಗುವುದಿಲ್ಲವೆ ಎಂದು ನೋಡಿದಾಗ ಇವರಿಗೆ ಗಡಿರೇಖೆಗಿಂತ ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳು ಮುಖ್ಯವಾಗುತ್ತವೆ. ಕನ್ನಡಿಗರು ಮತ್ತು ತೆಲುಗರು ನಡೆದುಕೊಳ್ಳುವ ಆರಾಧನಾ ಕ್ಷೇತ್ರಗಳಲ್ಲಿ 'ಕೂಡು ಸಂಸ್ಕೃತಿ' ಏರ್ಪಟ್ಟಿರುವುದು ಇಲ್ಲಿ ಎದ್ದು ಕಾಣುತ್ತದೆ. ಈ ಸೌಹಾರ್ದತೆ ಗಡಿಯಲ್ಲಿ ಹೇಗೆ ಬೆಸೆದುಕೊಂಡಿದೆ? ಇದಕ್ಕೆ ಪ್ರೇರಣೆಗಳೇನು? ಎಂಬುದನ್ನು ಇಲ್ಲಿ ಕಂಡುಕೊಳ್ಳುವುದರ ಜೊತೆಗೆ, ಇಲ್ಲಿಂದ ಗಡಿ ಆಚೆಗಿನ ಮತ್ತು ಆಚೆಗಿನ ಗಡಿಯಿಂದ ಇಲ್ಲಿಗೆ ಪ್ರಸರಣಗೊಳ್ಳುವ ಹಾಗೂ ಧಾರ್ಮಿಕ ತಾಣಗಳು ಮತ್ತು ಸಾಂಸ್ಕೃತಿಕ ಸಾಮರಸ್ಯದ ಜೊತೆಗೆ ಇಲ್ಲಿನ ಜನಪದ ಸಾಹಿತ್ಯ ಹೇಗೆ ಕನ್ನಡಿಗರ ಮತ್ತು ತೆಲುಗರಲ್ಲಿ ಬೆರೆತುಕೊಂಡಿದೆ, ಈ ಕೂಡುವಿಕೆಗೆ ತತ್ವಪದಕಾರರು ಹೇಗೆ ಗಡಿಯಲ್ಲಿ ಪ್ರಮುಖ ಪಾತ್ರ ವಹಿಸಿದರು ಮತ್ತು ಈ ತತ್ವಪದಕಾರರು ಎಲೇರಾಜೋಳ, ಬಳಿಚಕ್ರ, ಐನೂಲಿ, ಕೂಡಲೂರು, ಇಟಗಾ, ಕಲ್ಕಂಬ, ಕೋನಾಪುರ, ಕೋಲಕುಂದಾಗಳಂತಹ ಗಡಿಗ್ರಾಮಗಳಲ್ಲಿ ನೆಲೆಸಿ ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಲ್ಲಿ ಒಟ್ಟೊಟ್ಟಿಗೆ ತತ್ವಪದ ಸಾಹಿತ್ಯ ರಚಿಸುವುದರೊಂದಿಗೆ ಕನ್ನಡಿಗರ ಮತ್ತು ತೆಲುಗರ ನಡುವಿನ ಸೌಹಾರ್ದತೆಗೆ ಸೇತುವೆಯಾಗಿದ್ದರು ಎಂಬುದು ಗೊತ್ತಾಗುತ್ತದೆ. ಇಂದಿಗೂ ಇವರ ಸಮಾಧಿ, ದೇವಸ್ಥಾನ ಗಳಿಗೆ ಕನ್ನಡಿಗರು, ತೆಲುಗರು ಗಡಿರೇಖೆ, ಭಾಷೆ ಎನ್ನದೇ ಬಂದು ಹೋಗುತ್ತಾರೆ. ಇಂತಹ ಸೌಹಾರ್ದತೆಗೆ ವೇದಿಕೆ ನಿರ್ಮಿಸಿದ ತತ್ವಪದಕಾರರನ್ನು ಮತ್ತು ಅವರು ರಚಿಸಿದ ಕನ್ನಡ, ತೆಲುಗು ತತ್ವಪದ ಸಾಹಿತ್ಯವನ್ನು ಇಲ್ಲಿ ಅವಲೋಕಿಸಿ ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಇಲ್ಲಿನ 'ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿಗತಿ'ಗೆ ಸಂಬಂಧಿಸಿದೆ. ಒಂದು ಪ್ರದೇಶದ ಸ್ಥಿತಿಗತಿಗಳನ್ನು ಅರಿಯುವುದು ಅಲ್ಲಿನ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಂಶಗಳ ಮೂಲಕ. ಸಾಮಾಜಿಕ ಅಂಶಗಳಲ್ಲಿ ಮನುಷ್ಯ ಸಂಘಜೀವಿ. ಅವನ ಜೀವನಾವರ್ತನ ಆಚರಣೆಗಳಾದ ಗರ್ಭಾವಸ್ಥೆ, ಮಗುವಿನ ಜನನ, ಋತುಮತಿ, ವಿವಾಹ, ಶವಸಂಸ್ಕಾರ ಮತ್ತು ಸೂತಕಗಳ ಕುರಿತಾದ ಆಚರಣೆಗಳು ಮತ್ತು ಇವು ಒಂದೇ ಭೌಗೋಳಿಕ ವಲಯದಲ್ಲಿ ಹೇಗೆ ಭಿನ್ನ ಭಿನ್ನ ರೀತಿ-ನೀತಿಯ ಆಚಾರ-ವಿಚಾರಗಳನ್ನು ಬೆಳೆಸಿಕೊಂಡಿವೆ ಹಾಗೂ ಇವು ಯಾವಾಗ ಮತ್ತು ಯಾವ ಯಾವ

ಸಂದರ್ಭದಲ್ಲಿ ಇತರ ಸಮಾಜದೊಂದಿಗೆ ಹತ್ತಿರವಾಗುತ್ತವೆ ಎಂಬುದರ ಕುರಿತಾದ ಮಾಹಿತಿಗಳ ವಿಶ್ಲೇಷಣೆ ಯನ್ನು ಇಲ್ಲಿ ಮಾಡಲಾಗಿದೆ. ಶೈಕ್ಷಣಿಕ ಅಂಶಗಳಲ್ಲಿ ಈ ಭಾಗವು ಪ್ರಾಚೀನ ಕಾಲದಲ್ಲಿ ಶೈಕ್ಷಣಿಕವಾಗಿ ಮುಂದುವರೆದಿದ್ದರೂ ಪ್ರಸ್ತುತ ಈಗ ಯಾಕೆ ಹಿಂದುಳಿದಿದೆ? ಯಾವ ಕಾರಣಗಳಿಂದಾಗಿ ಹಿಂದುಳಿದಿದೆ ಎಂಬುದನ್ನು ಚಾರಿತ್ರಿಕ ಮತ್ತು ಪ್ರಸ್ತುತ ಮಾಹಿತಿಗಳ ಮುಖಾಂತರ ನೋಡಲಾಗಿರುವುದರ ಜೊತೆಗೆ ಮೈಸೂರು ಕರ್ನಾಟಕ, ಬಾಂಬೆ ಕರ್ನಾಟಕ, ಬ್ರಿಟಿಷ್ ಪ್ರೆಸಿಡೆನ್ಸಿಗಳೊಡನೆ ಹೈದರಾಬಾದ್ ಕರ್ನಾಟಕವನ್ನು ಹೋಲಿಸಿ ಇವುಗಳಲ್ಲಿನ ತೌಲನಿಕ ಭಿನ್ನತೆಯನ್ನು ಕಂಡುಕೊಳ್ಳಲಾಗಿದೆ. ಹಾಗೂ ಸರ್ಕಾರದ ಕೆಲವು ಇಲಾಖೆಗಳು ಜಾರಿಗೊಳಿಸಿದ ಅನುದಾನಗಳು ಎಷ್ಟರಮಟ್ಟಿಗೆ ವಿದ್ಯಾರ್ಥಿಗಳಿಗೆ ಮತ್ತು ಶೈಕ್ಷಣಿಕ ಚಟುವಟಿಕೆ ಗಳಿಗೆ ಉಪಯೋಗವಾಗುತ್ತಿವೆ ಎಂಬುದನ್ನು ಅಂಕಿ-ಅಂಶಗಳ ಉದಾಹರಣೆಯೊಂದಿಗೆ ದಾಖಲಿಸಲಾಗಿದೆ. ಇದಲ್ಲದೆ ಅತೀ ಮುಖ್ಯವಾಗಿ ಈ ಗಡಿಪ್ರದೇಶ ಆರ್ಥಿಕ ಚಟುವಟಿಕೆಗಳಲ್ಲಿ ಏಕೆ ಹಿಂದುಳಿದಿದೆ ಎಂಬುದನ್ನು ಇಲ್ಲಿನ ನೈಸರ್ಗಿಕ ಸಂಪತ್ತು, ಕೃಷಿ, ಕೈಗಾರಿಕೆಗಳಂತಹ ಆರ್ಥಿಕವಲಯಗಳಿಂದ ಅಳೆಯಲಾಗಿದ್ದು, ಇಲ್ಲಿನ ತಲಾ ಆದಾಯ, ಕೃಷಿಯಲ್ಲಿನ ಸುಧಾರಣೆ, ಭೂಗರ್ಭದಲ್ಲಿನ ಕಚ್ಚಾವಸ್ತುಗಳಿಗನುಗುಣವಾಗಿ ಸ್ಥಾಪಿಸಬಹು ದಾದ ಕೈಗಾರಿಕೆಗಳ ಕುರಿತಾಗಿ ವಿವೇಚಿಸಲಾಗಿದೆ. ಒಟ್ಟಾರೇ ಇಲ್ಲಿನ ಸ್ಥಿತಿಗತಿಗಳಿಗೆ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಂಶಗಳು ಹೇಗೆ ಕಾರಣವಾಗುತ್ತವೆ ಎಂಬುದರ ಬಗ್ಗೆ ಮಾಹಿತಿ ಕಲೆಹಾಕಿ ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯವು 'ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ನಿಲುವು' ಎಂಬುದಕ್ಕೆ ಸಂಬಂಧಿಸಿದ್ದಾಗಿದ್ದು ಇಲ್ಲಿ ಗಡಿಭಾಗದ ಜನರನ್ನು(ಅವರು ಕನ್ನಡಿಗರೇ ಆಗಿರಲಿ, ಇಲ್ಲವೇ ತೆಲುಗರೇ ಆಗಿರಲಿ)ಮುಖ್ಯವಾಗಿರಿಸಿಕೊಂಡು ಅವರು ತಳೆದ ಕನ್ನಡ ಮತ್ತು ತೆಲುಗರ ಪರಿಕಲ್ಪನೆಯನ್ನು ಎತ್ತಿಕೊಳ್ಳ ಲಾಗಿದೆ. ಇಲ್ಲಿನ ಜನರು ಕನ್ನಡ ಮತ್ತು ತೆಲುಗು ಎರಡೂ ತೀರಾ ಬೇರೆ ಬೇರೆ ಭಾಷೆಗಳು ಎಂಬುದನ್ನು ಸಾಮಾನ್ಯವಾಗಿ ಒಪ್ಪುವುದಿಲ್ಲ(ಸಹಜ ಪ್ರಕ್ರಿಯೆಗಳಲ್ಲಿ). ಎರಡನ್ನು ಒಟ್ಟೊಟ್ಟಿಗೆ ಬಳಸುತ್ತಾರೆ. ಇದಕ್ಕೆ ಚಾರಿತ್ರಿಕ, ಭೌಗೋಳಿಕ, ಭಾಷಿಕ ಕಾರಣಗಳಿರಬಹುದು. ಇವುಗಳನ್ನು ಪರಿಶೀಲಿಸುವುದರೊಂದಿಗೆ ಇಲ್ಲಿನ ಸಾಮಾನ್ಯ ಜನರು ತಳೆದ ನಿಲುವನ್ನು ಅಧ್ಯಾಯದಲ್ಲಿ ಎತ್ತಿ ಹಿಡಿಯಲಾಗಿದೆ. ಇದರೊಂದಿಗೆ ಕರ್ನಾಟಕ-ಕನ್ನಡಿಗ-ಕನ್ನಡ ಎಂಬುದನ್ನು ಇಲ್ಲಿನ ಜನರು ತಾಳುವ ನಿಲುವುಗಳನ್ನಾಧರಿಸಿ ಇಲ್ಲಿ ವಿಶ್ಲೇಷಿಸಲಾಗಿದೆ. ತದನಂತರ ಈ ಅಂಶಗಳನ್ನೊಳಗೊಂಡಂತೆ ಕರ್ನಾಟಕ-ಆಂಧ್ರಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿಗತಿಗಳ ಮೇಲಿನ ಒತ್ತಡಗಳು ಮತ್ತು ಸಮಸ್ಯೆಗಳನ್ನು ಗುರುತಿಸುತ್ತಾ, ಚಾರಿತ್ರಿಕ ಒತ್ತಡಗಳು, ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಗಳು, ಆರ್ಥಿಕ ಒತ್ತಡಗಳು, ವಲಸೆಯ ಒತ್ತಡಗಳು ಮತ್ತು ಪ್ರಾದೇಶಿಕ ಅಸಮಾನತೆಯ ಹಿನ್ನೆಲೆಯಲ್ಲಿನ ಪ್ರತ್ಯೇಕ ರಾಜ್ಯ ಬೇಡಿಕೆಯ ಒತ್ತಡ ಮತ್ತು ಸಮಸ್ಯೆಗಳನ್ನು ಗುರುತಿಸಿ ಅವುಗಳಿಗೆ ಅಂತಿಮವಾಗಿ ಪರಿಹಾರೋಪಾಯಗಳನ್ನು ಕಂಡುಕೊಳ್ಳಲಾಗಿದೆ.

ಕೊನೆಯ ಮತ್ತು ಆರನೆಯ ಅಧ್ಯಾಯವು 'ಉಪಸಂಹಾರ'ವಾಗಿದ್ದು, ಒಟ್ಟಾರೆ ಈ ಅಧ್ಯಯನ ಪ್ರಾರಂಭಿಸುವ ಮೊದಲು ಇಟ್ಟುಕೊಂಡಿದ್ದ ರೂಪುರೇಷೆಗಳು ಅಧ್ಯಯನಕ್ಕೆ ಒಳಗಾದಾಗ ಕಂಡುಕೊಂಡಂತಹ

ಅಂಶಗಳಿಗೆ ಸಂಬಂಧಿಸಿದಂತೆ ಉಪಸಂಹಾರ ಹೇಳುತ್ತಾ ಅಧ್ಯಯನ ತನ್ನ ನಿರ್ದಿಷ್ಟ ಗುರಿ ತಲುಪಿದೆಯೋ ಇಲ್ಲವೋ ಎಂಬುದನ್ನು ಇಡೀ ಅಧ್ಯಯನ ಪೂರ್ಣಗೊಳಿಸುವುದರೊಂದಿಗೆ ಅಂತಿಮ ವಿಶ್ಲೇಷಣೆಗಳನ್ನು ವಿಶ್ಲೇಷಿಸಲಾಗಿದೆ. ತದನಂತರ ಕೊನೆಯದಾಗಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನುಬಂಧಗಳು, ಪರಾಮರ್ಶನ ಗ್ರಂಥಗಳು, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿ ನೀಡಿದ ವಕ್ತೃಗಳ ಪಟ್ಟಿ, ನಕ್ಷೆಗಳು, ಛಾಯಾಚಿತ್ರಗಳು ಇವುಗಳನ್ನೆಲ್ಲ ಸಂಗ್ರಹಿಸಿ ದಾಖಲಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನದ ವಿಷಯ “ಕರ್ನಾಟಕ-ಆಂಧ್ರ ಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ” ಎಂಬುದಾಗಿದೆ. ಕರ್ನಾಟಕಕ್ಕೆ ಹೊಂದಿಕೊಂಡಂತೆ ಆಂಧ್ರದ ಗಡಿ ಬೀದರನಿಂದ ಕೋಲಾರದವರೆಗೆ ವ್ಯಾಪಿಸಿದೆ. ಆದರೆ ಇಡಿಯಾಗಿ ಬೀದರನಿಂದ ಕೋಲಾರದವರೆಗಿನ ಕರ್ನಾಟಕಾಂಧ್ರ ಗಡಿಭಾಗದಲ್ಲಿನ ಕನ್ನಡಿಗರನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿರುವುದಿಲ್ಲ. ಬದಲಾಗಿ ಗುಲಬರ್ಗಾ ಜಿಲ್ಲೆಗೆ ಹೊಂದಿಕೊಂಡಿರುವ ಕರ್ನಾಟಕ-ಆಂಧ್ರ ಗಡಿಯ ಚಿಂಚೋಳಿ, ಸೇಡಂ, ಯಾದಗೀರ(ಕರ್ನಾಟಕ) ತಾಲೂಕುಗಳು ಮತ್ತು ಇವುಗಳಿಗೆ ಅಂಟಿಕೊಂಡ ತಾಂಡೂರು, ಕೊಡಂಗಲ್, ನಾರಾಯಣಪೇಟೆ(ಆಂಧ್ರ) ಮಂಡಲಗಳ ಗಡಿಗ್ರಾಮಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಬಳಸಿಕೊಂಡ ಆಂಧ್ರದ ಗಡಿಗ್ರಾಮಗಳು ಏಕೀಕರಣಕ್ಕಿಂತ ಮುಂಚೆ ಕರ್ನಾಟಕದ ಗುಲಬರ್ಗಾ ಜಿಲ್ಲೆಯಲ್ಲಿದ್ದವು ಎಂಬುದು ಮುಖ್ಯವಾಗಿ ಕಂಡುಬರುವ ಅಂಶವಾಗಿದೆ.

ಹೈದರಾಬಾದ್ ನಿಜಾಮನ ಆಡಳಿತದಲ್ಲಿನ ಏರುಪೇರುಗಳನ್ನು ಗಮನಿಸಿದಾಗ, ನಿಜಾಂ ಸಂಸ್ಥಾನದ ಮುಖ್ಯಮಂತ್ರಿಯಾಗಿದ್ದ ಸಾಲಾರ್‌ಜಂಗ್ ಕೈಗೊಂಡ ಆಡಳಿತ ಸುಧಾರಣೆಗಳಿಂದ ಕ್ರಿ.ಶ. ೧೮೭೩ರಲ್ಲಿ ಗುಲಬರ್ಗಾ ಜಿಲ್ಲಾ ವ್ಯಾಪ್ತಿಗೆ ಗುಲಬರ್ಗಾ, ಚಿಂಚೋಳಿ, ಸೇಡಂ, ಕೋಡಂಗಲ್, ಗುರುಮಿಠಕಲ್ ಮತ್ತು ಮಹಾಗಾಂವ ತಾಲೂಕುಗಳು ಒಳಗೊಂಡಿದ್ದವು. ಇದಾದ ನಂತರ ನಿಜಾಮನ ಆಡಳಿತ ವಿಭಾಗಗಳ ಪುನರ್‌ವಿಂಗಡಣೆಯಿಂದಾಗಿ ಯಾದಗೀರ ತಾಲೂಕನ್ನು ರಾಯಚೂರು ಜಿಲ್ಲೆಯಿಂದ ಗುಲಬರ್ಗಾ ಜಿಲ್ಲೆಗೆ ಹಸ್ತಾಂತರಿಸಲಾಯಿತು. ಇದೇ ಸಂದರ್ಭದಲ್ಲಿ ಮೆಹಬೂಬನಗರ ಜಿಲ್ಲೆಯ ೭೩ ಗ್ರಾಮಗಳನ್ನು ಗುಲಬರ್ಗಾ ಜಿಲ್ಲೆಯಲ್ಲಿನ ಕೋಡಂಗಲ್ ಮತ್ತು ಯಾದಗೀರ ತಾಲೂಕುಗಳಿಗೆ ಸೇರಿಸಲಾಯಿತು. ಕ್ರಿ.ಶ. ೧೯೦೫ರಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಗುಲಬರ್ಗಾ, ಆಂದೋಲಾ, ಚಿಂಚೋಳಿ, ಕೋಡಂಗಲ್, ಸೇಡಂ, ಯಾದಗೀರ, ಶಹಾಪುರ ಮತ್ತು ಸುರಪುರ - ಈ ಎಂಟು ತಾಲೂಕುಗಳು ಆಳಂದ, ಫಿರೋಜಾಬಾದ್, ಅಫಜಲ್‌ಪುರ, ಕಾಳಗಿ, ಚಿತ್ತಾಪುರ - ಈ ಐದು ಪೈಗಾ ತಾಲೂಕುಗಳು ಅಲ್ಲದೇ ಹಾಗೂ ತಾಂಡೂರು ಮತ್ತು ಕೋಸಗಿ ಈ ಎರಡು ಜಹಗೀರುಗಳು ಸೇರಿದ್ದವು.

ಏಕೀಕರಣಕ್ಕಿಂತ ಮೊದಲು (ಕ್ರಿ.ಶ. ೧೯೨೧ರಲ್ಲಿ) ಗುಲಬರ್ಗಾ ಜಿಲ್ಲೆಯಲ್ಲಿದ್ದ ಉಪವಿಭಾಗಗಳು, ತಾಲೂಕುಗಳು ಮತ್ತು ಗ್ರಾಮಗಳ ವಿವರ

| ವಿಭಾಗಗಳು | ತಾಲೂಕುಗಳು | ಪಟ್ಟಣದ ಸಂಖ್ಯೆ | ಗ್ರಾಮಗಳ ಸಂಖ್ಯೆ |
|---|---|---|---|
| ೧. ಸೇಡಂ ವಿಭಾಗ | ೧. ಸೇಡಂ | ೦ | ೯೭ |
| | ೨. ಗುಲಬರ್ಗಾ | ೧ | ೨೪೬ |
| | ೩. ಕೋಡಂಗಲ್ | ೨ | ೧೭೮ |
| | ೪. ಚಿಂಚೋಳಿ | ೦ | ೧೩೫ |
| ೨. ಸುರಪುರ ವಿಭಾಗ | ೧. ಸುರಪುರ | ೧ | ೧೭೫ |
| | ೨. ಶಹಾಪುರ | ೦ | ೧೫೬ |
| | ೩. ಆಂದೋಲಾ | ೦ | ೧೬೨ |
| | ೪. ಯಾದಗೀರಿ | ೧ | ೧೩೩ |
| ೩. ಜಹಗೀರು ತಾಲೂಕುಗಳು | ೧. ಕಲ್ಯಾಣಿ | ೧ | ೭೧ |
| | ೨. ಚಿತ್ತಾಪುರ | ೧ | ೫೦ |
| | ೩. ತಾಂಡೂರು | ೧ | ೭೫ |
| | ೪. ಶಹಾಬಾದ್ | ೧ | ೨೬ |
| | ೫. ಆಳಂದ | ೧ | ೬೮ |
| | ೬. ಬಷೀರಾಬಾದ್ | ೦ | ೪೨ |
| | ೭. ಅಫಜಲಪುರ | ೧ | ೫೬ |

ಕ್ರಿ.ಶ. ೧೯೫೬ರ ಏಕೀಕರಣದ ಸಮಯದಲ್ಲಿ ಗುಲಬರ್ಗಾ, ಚಿಂಚೋಳಿ, ಸೇಡಂ, ಕೋಡಂಗಲ್, ಶಹಾಪುರ, ಸುರಪುರ, ಆಂದೋಲಾ, ಆಳಂದ, ಚಿತ್ತಾಪುರ, ಅಫಜಲ್‌ಪುರ, ತಾಂಡೂರು ಮತ್ತು ಯಾದಗೀರ - ಇವು ೧೨ ತಾಲೂಕುಗಳು. ಗುಲಬರ್ಗಾ, ತಾಂಡೂರು, ಯಾದಗೀರಿ - ಇವು ೩ ಉಪ ವಿಭಾಗಗಳು ಗುಲಬರ್ಗಾ ಜಿಲ್ಲೆಯಲ್ಲಿದ್ದವು. ಈ ೧೨ ತಾಲೂಕುಗಳ ಪೈಕಿ ಕೋಡಂಗಲ್ ಮತ್ತು ತಾಂಡೂರು ತಾಲೂಕು ಗಳನ್ನು ಆಂಧ್ರ ಪ್ರದೇಶಕ್ಕೆ ಬಿಟ್ಟುಕೊಟ್ಟ ನವೆಂಬರ್ ೧, ೧೯೫೬ ರಂದು ಉಳಿದ ೧೦ ತಾಲೂಕುಗಳನ್ನೊಳಗೊಂಡ ಗುಲಬರ್ಗಾ ಜಿಲ್ಲೆಯನ್ನು ವಿಶಾಲ ಮೈಸೂರು ರಾಜ್ಯಕ್ಕೆ ವರ್ಗಾಯಿಸಲಾಯಿತು. ಏಕೀಕರಣದ ಸಂದರ್ಭದಲ್ಲಿ ಗುಲಬರ್ಗಾ ಜಿಲ್ಲೆಯಿಂದ ಕೋಡಂಗಲ್ ಮತ್ತು ತಾಂಡೂರು ತಾಲೂಕು ಕೇಂದ್ರಸ್ಥಳಗಳು ಮತ್ತು ಅವುಗಳಲ್ಲಿನ ಒಟ್ಟು ೨೫೩ ಗ್ರಾಮಗಳ ಕನ್ನಡಿಗರ ಜನಾಭಿಪ್ರಾಯಕ್ಕೆ ಯಾವುದೇ ರೀತಿಯ ಮಹತ್ವ ಕೊಡದೆ ಇವರನ್ನೆಲ್ಲ ಕನ್ನಡ ನಾಡಿನಿಂದ ಆಂಧ್ರಪ್ರದೇಶಕ್ಕೆ ವರ್ಗಾಯಿಸಲಾಯಿತು. ಹೀಗೆ ಕನ್ನಡ ನಾಡಿನಿಂದ ಹೊರಗುಳಿದ ಈ ಕನ್ನಡಿಗರನ್ನು ಈ ಅಧ್ಯಯನ ವ್ಯಾಪ್ತಿಗೆ ಒಳಪಡಿಸುತ್ತಿದ್ದೇನೆ.

ಒಟ್ಟಾರೆ ಚಿಂಚೋಳಿ, ಸೇಡಂ, ಯಾದಗೀರಿ ತಾಲೂಕುಗಳಲ್ಲಿ ಸುಮಾರು ೧೦೦ ಗಡಿಗ್ರಾಮಗಳನ್ನು, ಈ ಗ್ರಾಮಗಳಲ್ಲಿ ಸುಮಾರು ೩೫,೫೫೬ ಕುಟುಂಬಗಳನ್ನು ಮತ್ತು ಒಟ್ಟು (ಗಂಡು+ಹೆಣ್ಣು) ೧,೯೫೦೪೫ ಜನರನ್ನು ಕರ್ನಾಟಕದಿಂದ ಮತ್ತು ಈ ಗಡಿಗೆ ಹೊಂದಿಕೊಂಡಿರುವ ಆಂಧ್ರದ ಕೋಡಂಗಲ್, ನಾರಾಯಣಪೇಟೆ, ತಾಂಡೂರು, ಬಷಿರಾಬಾದ್ ಮಂಡಲಗಳ ಒಟ್ಟು ೪೫ ಹಳ್ಳಿಗಳು, ಸುಮಾರು ೩,೫೬೦ (ಗಂಡು+ಹೆಣ್ಣು) ಜನರನ್ನು ಅಧ್ಯಯನದ ವ್ಯಾಪ್ತಿಗೆ ನಿಗದಿಯಾಗಿಸಿಕೊಂಡು ಇಲ್ಲಿನ ಜನರ ಸ್ಥಿತಿಗತಿಗಳನ್ನು ಸಾಂಸ್ಕೃತಿಕವಾಗಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

**"ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿ-ಗತಿ" ಈ ಅಧ್ಯಯನ ವ್ಯಾಪ್ತಿಗೆ ಬರುವ ಸುಮಾರು ೧೦೦ ಗಡಿಗ್ರಾಮಗಳು ಇಂತಿವೆ.**

**ಚಿಂಚೋಳಿ ತಾಲೂಕಿನ ಗಡಿಗ್ರಾಮಗಳು**

| | | |
|---|---|---|
| ೧. ಇರಗಪಲ್ಲಿ | ೨. ಕರಚಖೇಡ | ೩. ಕಲ್ಲೂರು ರೋಡ |
| ೪. ಕುಸ್ರಮಪಳ್ಳಿ | ೫. ಕೊಂಚಾವರಂ | ೬. ಕೊರಡಂಪಲ್ಲಿ |
| ೭. ಗರಗಪಲ್ಲಿ | ೮. ಗಂಗನಪಲ್ಲಿ | ೯. ಚಂದ್ರಂಪಳ್ಳಿ |
| ೧೦. ಚಿಂತಗುಂಟ | ೧೧. ಜಟ್ಟೂರು | ೧೨. ಜಿಲ್ವಾರಶಾ |
| ೧೩. ಪೋಚಾವರಂ | ೧೪. ಪೋತಂಗಲ್ಲು | ೧೫. ಬುರುಗಪಲ್ಲಿ |
| ೧೬. ಬೇಡಿಗಪಲ್ಲಿ | ೧೭. ಭೈರಂಪಳ್ಳಿ | ೧೮. ಮುರಗಾಪುರ |
| ೧೯. ಮಿರ್‍ಯಾಣ | ೨೦. ವೆಂಕಟಾಪುರ | ೨೧. ಶಾದಿಪುರ |
| ೨೨. ಶಿವರೆಡ್ಡಿಪಲ್ಲಿ | ೨೩. ಸೋಮಲಿಂಗದಹಳ್ಳಿ | ೨೪. ಭೋಗಲಿಂಗದಹಳ್ಳಿ |
| ೨೫. ತುಮಕುಂಟಾ | ೨೬. ಅನವಾರ್ | ೨೭. ಪೂಲಕ್‌ಪಲ್ಲಿ |
| ೨೮. ಚಿಕ್ಕಲಿಂಗದಹಳ್ಳಿ | ೨೯. ನೀರಚೆಲಾಮ್ | ೩೦. ಐನೋಳ್ಳಿ |

**ಸೇಡಂ ತಾಲೂಕಿನ ಗಡಿಗ್ರಾಮಗಳು**

| | | |
|---|---|---|
| ೧. ಇರನಪಲ್ಲಿ | ೨. ಕಡಚರ್ಲಾ | ೩. ಕಾನಾಗಡ್ಡಿ |
| ೪. ಆಡಕಿ | ೫. ಕೊಂತನಪಲ್ಲಿ | ೬. ಕುರಕುಂಟಾ |
| ೭. ಕೋಲಕುಂದಾ | ೮. ಮಲಕಪಲ್ಲಿ | ೯. ಗಂಗರಾವಲಪಲ್ಲಿ |
| ೧೦. ಖಂಡೇರಾಯನಪಲ್ಲಿ | ೧೧. ಗೋಪನಪಲ್ಲಿ | ೧೨. ಚಂದಾಪುರ |
| ೧೩. ಚಿಲಕನಪಲ್ಲಿ | ೧೪. ಜಾಕನಪಲ್ಲಿ | ೧೫. ಜೀಲ್ಲರಪಲ್ಲಿ |
| ೧೬. ತಾಕೇನಪಲ್ಲಿ | ೧೭. ನಾಡೇಪಲ್ಲಿ | ೧೮. ಬಲಗೇರಾ |
| ೧೯. ಬೀದರಚೇಡ | ೨೦. ಬುರುಗಪಲ್ಲಿ | ೨೧. ಬೊಮ್ಮಡೆಪಲ್ಲಿ |
| ೨೨. ಭೂತಪೂರ | ೨೩. ಮಾಧ್ವಾರ | ೨೪. ಮುಧೋಳ |

| | | |
|---|---|---|
| ೨೫. ಮೇದಕ | ೨೬. ಮೈಲವಾರಂ | ೨೭. ಮೋತಕಪಲ್ಲಿ |
| ೨೮. ಯಾನಾಗುಂದಿ | ೨೯. ರಾಘಾಪುರ | ೩೦. ರಿಬ್ಬನಪಲ್ಲಿ |
| ೩೧. ಲಿಂಗಂಪಲ್ಲಿ | ೩೨. ವೆಂಕಟಾಪುರ | ೩೩. ಶಕಲೇಷಪಲ್ಲಿ |
| ೩೪. ಸೀಲಾರಕೋಟ | ೩೫. ಸೋಮಪಲ್ಲಿ | ೩೬. ಹಾಬಾಳ |
| ೩೭. ಮದಕಲ್ | ೩೮. ಹಯ್ಯಾಳ | ೩೯. ಎಲೇರಾಜೋಳ |
| ೪೦. ಮಲ್ಲಾಬಾದ್ | ೪೧. ಕೃಷ್ಣಾಪುರ | ೪೨. ಗಾಡದಾನ |
| ೪೩. ಇಕ್ಬಾಲ್ | | |

**ಯಾದಗೀರ ತಾಲೂಕಿನ ಗಡಿಗ್ರಾಮಗಳು**

| | | |
|---|---|---|
| ೧. ಕಂದಕೂರ | ೨. ಕಾಕಲವಾರ | ೩. ಚಪೆಟ್ಲಾ |
| ೪. ಎಡ್ಲಾಪುರ | ೫. ಎಂಪೆಡ್ಲಾ | ೬. ಪಸಪೊಲ |
| ೭. ಚಂಡ್ರಕಿ | ೮. ಪುಟಪಾಕ | ೯. ಮೈಲಾಪುರ |
| ೧೦. ಮಾದವಾರಂ | ೧೧. ಬಳಿಚಕ್ರ | ೧೨. ಮಿನಾಸ್ಪುರ |
| ೧೩. ಮಸ್ಲಪಲ್ಲಿ | ೧೪. ಇಡ್ಲೂರು | ೧೫. ಚಂದಾಪುರ |
| ೧೬. ಗುರಮಿಠಕಲ್ | ೧೭. ಗಾಜರಕೋಟ | ೧೮. ಕೂಡಲೂರು |
| ೧೯. ಬಾಚವಾರ | ೨೦. ಎಲಸತ್ತಿ | ೨೧. ರಾಮಸಮುದ್ರ |

**ಅಧ್ಯಯನದ ವಿಧಾನ**

"ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿ-ಗತಿ"ಯ ಈ ಅಧ್ಯಯನವು ಲೇಖನ ಸಾಮಗ್ರಿ ಗಿಂತ ಮುಖ್ಯವಾಗಿ ಕ್ಷೇತ್ರಕಾರ್ಯ ಅವಲಂಬಿತವಾಗಿರುವುದರ ಜೊತೆಗೆ ಇದು ಅಂತರ್‌ಶಿಸ್ತಿಯ ಅಧ್ಯಯನ ವಾಗಿದೆ. ಬಹಳ ಮುಖ್ಯವಾಗಿ ಕರ್ನಾಟಕ-ಆಂಧ್ರಗಡಿಭಾಗದಲ್ಲಿನ ಜನರ ಸೌಹಾರ್ದತೆಯ ಜೀವನವನ್ನು ಎತ್ತಿ ತೋರಿಸುವ ಉದ್ದೇಶದಿಂದ ಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿಗತಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗಾಗಿ ಈ ಅಧ್ಯಯನ ಕೇವಲ ಒಂದೇ ಒಂದು ಶಿಸ್ತಿಗೆ ಮಾತ್ರ ಸೀಮಿತಗೊಳ್ಳದೆ, ಭೌಗೋಳಿಕ, ಚಾರಿತ್ರಿಕ, ಸಾಂಸ್ಕೃತಿಕ, ಜಾನಪದೀಯ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ಅಲ್ಲಿನ ಒಳಬಾಂಧವ್ಯಗಳನ್ನು ಮುಖ್ಯವಾಗಿ ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಒಂದು ಪ್ರದೇಶದ ಜನರ ಸ್ಥಿತಿಗತಿಗಳು (ಸಾಂಸ್ಕೃತಿಕವಾಗಿ) ಅಲ್ಲಿನ ಧಾರ್ಮಿಕ ತಾಣಗಳು ಸಾಂಸ್ಕೃತಿಕ ಆಚರಣೆಗಳು, ಅಲ್ಲಿನ ಜನಪದ ಸಾಹಿತ್ಯ, ಅಲ್ಲಿ ಘಟಿಸಿದ ಚರಿತ್ರೆಯ ಅಂಶಗಳು ಮತ್ತು ಸಾಮಾಜಿಕ ಆಗುಹೋಗುಗಳು ಈ ಮುಂತಾದ ಅಂಶಗಳ ಫಲಿತಾಂಶಗಳ ಮೇಲೆಯೆ ನಿರ್ಧರಿಸಲ್ಪಟ್ಟಿರುತ್ತವೆ. ಈ ಎಲ್ಲ ಅಂಶಗಳು ಇಲ್ಲಿನ ಜನಸಮೂಹಗಳು ನೀಡಿದ ಮಾಹಿತಿಗಳ ಮೇಲೆ ಅವಲಂಬಿತವಾಗಿರುತ್ತವೆ. ಪ್ರಸ್ತುತ ಅಧ್ಯಯನವು ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಗಳನ್ನು ಒಳಗೊಂಡಿದ್ದು, ಅಗತ್ಯವಿದ್ದಲ್ಲಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಇದೊಂದು ಕ್ಷೇತ್ರ ಕಾರ್ಯ ಆಧಾರಿತ ಅಧ್ಯಯನವಾದ್ದರಿಂದ, ವಿಶ್ಲೇಷಣೆಗಿಂತ ಮಾಹಿತಿಗಳನ್ನು ದಾಖಲಿಸುವುದರ ಕಡೆಗೆ

ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಡಿಗ್ರಾಮಗಳ ಭೌಗೋಳಿಕ ಪರಿಸರವನ್ನು, ಚಾರಿತ್ರಿಕ ಸಂಗತಿಗಳನ್ನು, ಸ್ಥಳನಾಮಗಳನ್ನು, ಶಾಸನಗಳನ್ನು, ವೀರಗಲ್ಲುಗಳನ್ನು, ಹಸ್ತಪ್ರತಿಗಳನ್ನು ಅಧ್ಯಯನಕ್ಕೆ ಪೂರಕ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಮುಖ್ಯವಾಗಿ ಅವಲೋಕನ, ಪ್ರಶ್ನಾವಳಿ ಹಾಗೂ ಸಂದರ್ಶನ ವಿಧಾನಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ. ವಕ್ತೃಗಳಿಗೆ ಪ್ರಶ್ನೆಗಳನ್ನು ಕೇಳುವ ಹಾಗೂ ಅವರೊಂದಿಗೆ ಚರ್ಚಿಸುವ ಮುಖಾಂತರ ಮಾಹಿತಿ ಸಂಗ್ರಹಿಸಿ, ಕ್ರೋಢೀಕರಿಸಿಕೊಳ್ಳಲಾಗಿದೆ. ಕೆಲವೊಂದು ವಿವಾದಾಸ್ಪದ ಹೇಳಿಕೆಗಳನ್ನು, ಮಾಹಿತಿಗಳನ್ನು ಇಲ್ಲಿ ಪರಿಗಣಿಸಲಾಗಿಲ್ಲ. ಅಲ್ಲದೇ ಸಂಘ-ಸಂಸ್ಥೆ, ಸರಕಾರಿ ಇಲಾಖೆಗಳ, ಅಂಕಿ-ಅಂಶಗಳ ಸಹಾಯ ಪಡೆದು ಅವುಗಳನ್ನು ಸೂಕ್ತವಾಗಿ ಬಳಸಿಕೊಳ್ಳಲಾಗಿದೆ.

ಒಟ್ಟಾರೆಯಾಗಿ ಈ ಅಧ್ಯಯನವು ಕ್ಷೇತ್ರಕಾರ್ಯ ಮತ್ತು ಬಹುಶಿಸ್ತಿಯ ನೆಲೆಯ ಮೇಲೆ ಆಧಾರಿತವಾಗಿರುವುದರಿಂದ ಕೌಟುಂಬಿಕ ಮಾಹಿತಿಯನ್ನು, ಕುಟುಂಬಗಳ ವೈಯಕ್ತಿಕ, ಸಾಮಾಜಿಕ ವಿಷಯಗಳನ್ನು ಅನುಭವಿ ಹಿರಿಯ ವಕ್ತೃಗಳಿಂದ ಮತ್ತು ಜನಪದ ಕಲಾವಿದರು, ಮಠಾಧೀಶರು, ಅಧಿಕಾರಿಗಳು, ಬುದ್ಧಿಜೀವಿಗಳಿಂದ ಪಡೆದುಕೊಳ್ಳಲಾಗಿದೆ. ಈ ಕ್ಷೇತ್ರಕಾರ್ಯದ ಮಾಹಿತಿಗಳೊಂದಿಗೆ ಇಲ್ಲಿಯವರೆಗೆ ನಡೆದ ಅಧ್ಯಯನಗಳು, ಪ್ರಕಟಿತ ಸಾಹಿತ್ಯಕೃತಿಗಳು, ಪಿಎಚ್.ಡಿ. ಎಂ.ಫಿಲ್, ಸಂಶೋಧನಾ ಪ್ರಬಂಧಗಳು, ನಿಘಂಟುಗಳು, ವಿಶ್ವಕೋಶಗಳು, ಗೆಜೆಟಿಯರ್ಸ್‌ಗಳು, ಪತ್ರಿಕೆಗಳು, ಸ್ಮರಣ ಸಂಚಿಕೆಗಳು, ಅಭಿನಂದನಾ ಗ್ರಂಥಗಳು ಮತ್ತು ನಕ್ಷೆಗಳನ್ನು ಬಳಸಿಕೊಂಡು ಅಧ್ಯಯನಕ್ಕೆ ನ್ಯಾಯ ಒದಗಿಸಲಾಗಿದೆ.

• • •

ಅಧ್ಯಾಯ : ಎರಡು

# ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಪ್ರಮುಖ ಅಂಶಗಳು

೨.೧. ಪ್ರಾಕೃತಿಕ ಅಂಶಗಳು

೨.೨. ಚಾರಿತ್ರಿಕ ಅಂಶಗಳು

೨.೩. ಪ್ರಮುಖ ಗಡಿಗ್ರಾಮಗಳು

## ೨.೧. ಪ್ರಾಕೃತಿಕ ಅಂಶಗಳು

ಒಂದು ಪ್ರದೇಶದ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವ ಮುನ್ನ ಅಲ್ಲಿನ ಸಾಹಿತ್ಯಿಕ ಆಧಾರಗಳು, ಘಟಿಸಿದ ಚಾರಿತ್ರಿಕ ಘಟನೆಗಳು, ಸಾಂಸ್ಕೃತಿಕ ಮತ್ತು ಧಾರ್ಮಿಕ ಅಂಶಗಳನ್ನು ತಿಳಿದುಕೊಳ್ಳುವುದು ಮುಖ್ಯವೆನಿಸುತ್ತದೆ. ಆದರೆ ಕೇವಲ ಈ ಅಂಶಗಳನ್ನಷ್ಟೇ ಪರಿಗಣಿಸಿದರೆ ಸಂಪೂರ್ಣವಾಗಿ ಆ ಪರಿಸರವನ್ನು ತಿಳಿದುಕೊಳ್ಳಲಿಕ್ಕಾಗಲಿಕ್ಕಿಲ್ಲ. ಆದ್ದರಿಂದ ಇವುಗಳ ಜೊತೆಗೆ ಅಲ್ಲಿನ ಪ್ರಾಕೃತಿಕ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳುವುದು ಮುಖ್ಯವಾಗುತ್ತದೆ. ನಮ್ಮ ಸುತ್ತಮುತ್ತ ಕಂಡು ಬರುವ ನಿಸರ್ಗದತ್ತವಾದ ಅಂಶಗಳೇ ಒಂದೊಮ್ಮೆ ಅಲ್ಲಿನ ಎಲ್ಲ ರೀತಿಯ ಸ್ಥಿತಿಗತಿಗಳ ಮೇಲೆ ಪ್ರಭಾವ ಬೀರಿರುವ ಸಾಧ್ಯತೆಗಳು ಹೆಚ್ಚಾಗಿರುತ್ತದೆ. ಅಂತಲೇ ಎಲ್ಲಕ್ಕಿಂತ ಮುಖ್ಯವಾಗಿ ಕ್ಷೇತ್ರಕಾರ್ಯದ ಅಧ್ಯಯನಗಳಿಗೆ ತೊಡಗುವ ಪೂರ್ವದಲ್ಲಿ ಮೊಟ್ಟ ಮೊದಲು ಆ ಪ್ರದೇಶದಲ್ಲಿನ ನೈಸರ್ಗಿಕ ಸಂಪತ್ತು, ಹವಾಗುಣ, ನಿಸರ್ಗದತ್ತ ಪ್ರಾದೇಶಿಕ ಮೇರೆಗಳು, ಅಲ್ಲಿ ಸಿಗುವ ನೀರಿನ ಮೂಲ, ಜನಸಾಂದ್ರತೆ, ಸಾರಿಗೆ, ಸಂಪರ್ಕ, ಔದ್ಯೋಗಿಕರಣ ಮುಂತಾದ ಅಂಶಗಳನ್ನು ಅವಲೋಕಿಸಲೇಬೇಕಾಗುತ್ತದೆ. ಇವುಗಳ ಮೇಲೆಯೇ ಅಲ್ಲಿನ ಜನರ ಸಂಸ್ಕೃತಿ, ಭಾಷೆ, ಜನಜೀವನ ಅಸ್ತಿತ್ವಗೊಂಡಿರುತ್ತದೆ.

### ೨.೧.೧. ಭೌಗೋಳಿಕತೆ :

ಒಂದು ಪ್ರದೇಶದ ಗುಣಲಕ್ಷಣಗಳನ್ನು ಅರಿಯಬೇಕಾದರೆ ಅಲ್ಲಿನ ಭೌಗೋಳಿಕ ಪರಿಸರವನ್ನು ಗಮನಿಸುವುದು ಮುಖ್ಯವಾಗುತ್ತದೆ. ಈ ಭೌಗೋಳಿಕ ಅಂಶಗಳ ಮೇಲೆಯೇ ಅಲ್ಲಿನ ಜನರ ಆಗುಹೋಗುಗಳು ಅವಲಂಬಿತವಾಗಿರುತ್ತವೆ. ಇಲ್ಲಿ ಭೌಗೋಳಿಕ ಅಂಶಗಳೆಂದರೆ ನೈಸರ್ಗಿಕ ಸಂಪತ್ತು, ಹವಾಗುಣ, ಪ್ರಾದೇಶಿಕ ಮೇರೆಗಳು, ವೃತ್ತಿ, ಜನಸಾಂದ್ರತೆ, ಸಾರಿಗೆ ಸಂಪರ್ಕ, ಔದ್ಯೋಗಿಕತೆ ಮೊದಲಾದವುಗಳು ಇವು ಅಲ್ಲಿನ ಜನರ ಸಂಸ್ಕೃತಿ, ಭಾಷೆ ಮತ್ತು ಜೀವನದ ಮೇಲೆ ಪ್ರಭಾವ ಬೀರಿರುತ್ತವೆ.

ಚಿಂಚೋಳಿ ತಾಲ್ಲೂಕು ೭೭.೦೪°-೭೭.೪೩° ಉತ್ತರ ಮತ್ತು ೧೭.೧೨°-೧೭.೩೮° ಪೂರ್ವ ಅಕ್ಷಾಂಶಗಳ ನಡುವೆ ಇದ್ದು, ಈ ತಾಲ್ಲೂಕಿನಲ್ಲಿ ಮುಲ್ಲಾಮಾರಿ ನದಿ ಹರಿಯುತ್ತದೆ. ಸೇಡಂ ತಾಲ್ಲೂಕು ೭೭.೦೮°-೭೭.೨೯° ಉತ್ತರ ಮತ್ತು ೧೬.೫೨°-೧೭.೧೩° ಪೂರ್ವ ಅಕ್ಷಾಂಶಗಳ ನಡುವೆಯಿದ್ದು, ಈ ತಾಲ್ಲೂಕಿನಲ್ಲಿ ಭೀಮೆಯ ಉಪನದಿ ಕಾಗಿಣಾ ಹರಿಯುತ್ತದೆ. ಯಾದಗೀರ ತಾಲ್ಲೂಕು ೭೬.೫೮°-೭೬.೨೮° ಉತ್ತರ ಮತ್ತು ೧೬.೨೭°-೧೬.೫೬° ಪೂರ್ವ ಅಕ್ಷಾಂಶಗಳ ನಡುವೆಯಿದ್ದು, ಈ ತಾಲ್ಲೂಕಿನಲ್ಲಿ ಭೀಮಾ ನದಿ ಹರಿಯುತ್ತದೆ. ಈ ಮೂರು ತಾಲ್ಲೂಕುಗಳ ಭೌಗೋಳಿಕ ವಿಸ್ತೀರ್ಣ ಕ್ರಮವಾಗಿ ಚಿಂಚೋಳಿ ೧.೫೬೯, ಸೇಡಂ ೧.೦೨೫ ಮತ್ತು ಯಾದಗೀರ ೧.೭೦೯ ಚದುರ ಕಿಲೋಮೀಟರ್‌ಗಳಷ್ಟಿದೆ.

### ೨.೧.೨. ಹವಾಮಾನ :

ಈ ಮೂರು ತಾಲ್ಲೂಕುಗಳ ಹವಾಮಾನವು ದಖ್ಖನ್ ಪ್ರದೇಶದ ಇತರ ಸ್ಥಳಗಳಂತೆಯೇ ಸಾಮಾನ್ಯವಾಗಿ ಒಣಹವೆಯಿಂದ ಕೊಡಿರುತ್ತದೆ. ವರ್ಷದಿಂದ ವರ್ಷಕ್ಕೆ ಬೀಳುವ ಮಳೆಯಲ್ಲಿನ ಆಗಾಧ ವ್ಯತ್ಯಾಸವು ಜನರ ಜೀವನಮಟ್ಟದ ಮೇಲೆ ಆಗಾಧ ಪ್ರಭಾವ ಬೀರುತ್ತಿದೆ. ಇದರಿಂದಾಗಿ ಬೇಸಿಗೆ ಕಾಲವು ಅತೀ ದೀರ್ಘವಾಗಿದ್ದು, ಫೆಬ್ರವರಿ ಮಧ್ಯಭಾಗದಿಂದ ಮೇ ತಿಂಗಳ ಕೊನೆಯವರೆಗೂ ಹಾಗೂ ಕೆಲವೊಮ್ಮೆ ಜೂನ್ ತಿಂಗಳವರೆಗೂ ವಿಸ್ತರಿಸುತ್ತದೆ. ಇಲ್ಲಿಯ ಉಷ್ಣತಾಪಮಾನ ಅತೀ ಹೆಚ್ಚಾಗಿದ್ದು ಅದು ೪೩°-೪೬°ವರೆಗೂ ತಲುಪಿದ ದಾಖಲೆಗಳಿವೆ. ಮುಂಗಾರು ಮಳೆಗಾಲದ ಅವಧಿ ಜೂನ್ ತಿಂಗಳಿನಿಂದ ಸೆಪ್ಟೆಂಬರ್ ತಿಂಗಳ ಕೊನೆಯವರೆಗೆ ಇರುತ್ತದೆ. ಮಳೆಯ ಮೋಡಗಳು ಡಿಸೆಂಬರ್‌ನಿಂದ ಮಾರ್ಚ್ ತಿಂಗಳವರೆಗೆ ಆಕಾಶದಲ್ಲಿ ಕಾಣಿಸಲಾರದೆ ಆಕಾಶ ಶುಭ್ರವಾಗಿರುತ್ತದೆ. ಈ ಪ್ರದೇಶಗಳಲೆಲ್ಲಾ ಹೆಚ್ಚಾಗಿ ವರ್ಷದ ಎಲ್ಲ ಕಾಲಗಳಲ್ಲಿಯೂ ಅತೀ ವೇಗವಾಗಿ ಗಾಳಿ ಬೀಸುತ್ತದೆ. ಮತ್ತು ಬೇಸಿಗೆಯಲ್ಲಿ ತೀವ್ರವಾದ ಉಷ್ಣ ಹವೆ ಎಲ್ಲ ಕಡೆ ಅತಿಯಾಗಿ ಹಬ್ಬಿರುತ್ತದೆ. ಈ ಬಿಸಿಲಿನ ಪ್ರಖರತೆಗೆ ದೇಹ ಸುಸ್ತಾಗಿ ಕೆಲಸ ಮಾಡದಂತಾಗುತ್ತದೆ. ಅಲ್ಲದೆ ಅತಿಯಾದ ಬಿಸಿಲು ಮತ್ತು ಉಷ್ಣ ಹವೆಯಿಂದಾಗಿ ಪ್ರತಿ ವರ್ಷ ಇಲ್ಲಿ ಸಾವುಗಳು ಸಂಭವಿಸುತ್ತವೆ.

### ೨.೧.೩. ನೀರಿನ ಮೂಲ :

ಈ ಪ್ರದೇಶವು ಡೆಕ್ಕನ್ ಪ್ರಸ್ಥಭೂಮಿಯ ಒಂದು ಭಾಗವಾಗಿದ್ದು, ಸಮುದ್ರ ಮಟ್ಟದಿಂದ ಸುಮಾರು ೭೦೦ ಮೀ. ಎತ್ತರದಲ್ಲಿದ್ದು, ಇಲ್ಲಿನ ಗಟ್ಟಿ ಶಿಲಾಪದರುಗಳಿಂದ ಅಂತರ್ಜಲದ ಮಟ್ಟ ಬಹಳ ಆಳದಲ್ಲಿದೆ. ಅಲ್ಲದೇ ಮಳೆಯ ಸರಾಸರಿ ಪ್ರಮಾಣ ಕಡಿಮೆಯಾಗಿರುವುದರಿಂದ ಇಲ್ಲಿ ನೀರಿನ ಮೂಲಗಳು ಕಡಿಮೆಯಾಗಿದೆ. ಮುಲ್ಲಾಮಾರಿ ನದಿಯು ಚಿಂಚೋಳಿ ತಾಲ್ಲೂಕಿನಲ್ಲಿ ಸುಮಾರು ೨೫ ಕಿ.ಮೀ. ಹರಿದು ಕಾಗಿಣಾ ನದಿಯನ್ನು ಸೇರುತ್ತದೆ. ಇದನ್ನು ಕೃಷಿ ನೀರಾವರಿಗಾಗಿ ಸಮರ್ಪಕವಾಗಿ ಬಳಸಿಕೊಳ್ಳಲಾಗಿಲ್ಲ. ಕಾಗಿಣಾ ನದಿಯು ಆಂಧ್ರಪ್ರದೇಶದ ಕೋಹಿರ್ ಎಂಬಲ್ಲಿ ಹುಟ್ಟಿ ಆಂಧ್ರದ ತಾಂಡೂರ ಮೂಲಕ(ಈ ನದಿಗೆ ಆಂಧ್ರದಲ್ಲಿ ತಾಂಡೂರು ನದಿ ಎಂದು ಕರೆಯುತ್ತಾರೆ)ಸೇಡಂ ಭಾಗದಲ್ಲಿ ಹರಿಯುತ್ತದೆ. ಕರ್ನಾಟಕ ದಲ್ಲಿ ಈ ನದಿಯ ಒಟ್ಟು ಹರಿವಿನ ಉದ್ದ ೬೪ ಕಿ.ಮೀ. ಈ ನದಿಗೆ ಮುಲ್ಲಾಮಾರಿ, ಬೆಣ್ಣೆತೊರೆ ಮತ್ತು ಕಮಲಾವತಿ ಉಪನದಿಗಳು. ಅಲ್ಲಲ್ಲಿ ಸಣ್ಣ ಪ್ರಮಾಣಗಳಲ್ಲಿ ಬ್ಯಾರೇಜ್‌ಗಳನ್ನು ಕಟ್ಟಿ ಗ್ರಾಮಗಳಿಗೆ ಕುಡಿಯುವ ನೀರೊದಗಿಸಲಾಗುತ್ತಿದೆ. ಇನ್ನು ಕೃಷಿಗೆ ಈ ನೀರನ್ನು ಬಳಸಿಕೊಳ್ಳಲಾಗುತ್ತಿಲ್ಲ. ಭೀಮಾನದಿ ಈ ಪ್ರದೇಶದಲ್ಲಿನ ದೊಡ್ಡ ನದಿಯಾಗಿದ್ದು, ಇದು ಕೃಷ್ಣೆಯ ಉಪನದಿಯಾಗಿದೆ. ಭೀಮಾ ನದಿ ಹರಿಯುವ ಪ್ರದೇಶ ಬಹುಪಾಲು ಡೆಕ್ಕನ್(ದಕ್ಷಿಣ)ಶಿಲೆಯ ಪದರಿನಿಂದ ಕೂಡಿದ್ದು, ಈ ಪದರಿನ ಮೇಲೆ ದಪ್ಪನೆಯ ಫಲವತ್ತಾದ ಕಪ್ಪು ಮೆಕ್ಕಲು ಮಣ್ಣಿನ ಪದರಿದೆ. ಪ್ರತಿ ವರ್ಷ ಪ್ರವಾಹ ಕಾಲದಲ್ಲಿ ನದಿ ಹೊತ್ತು ತಂದ ಫಲವತ್ತಾದ ಮಣ್ಣು ನದಿ ತೀರದ ವ್ಯವಸಾಯಕ್ಕೆ ಫಲವತ್ತಾಗಿದೆ. ಕೃಷಿ ನೀರಾವರಿಗಾಗಿ ಯಾದಗೀರ ತಾಲ್ಲೂಕು ಈ ಭೀಮಾ ನದಿಯನ್ನೇ ಅವಲಂಬಿಸಿದೆ. ಈ ಭಾಗದಲ್ಲಿ ಭೀಮಾ ನದಿಗೆ ಆಣೆಕಟ್ಟನ್ನು ನಿರ್ಮಿಸಿ, ಆ ನೀರನ್ನು ಕೃಷಿಗೆ ಬಳಸಬೇಕಾಗಿರುವುದು ಅವಶ್ಯವಾಗಿದೆ. ಈ ನೀರು ಇಲ್ಲಿಯ ಜನರಿಗೆ ಸಿಗದೇ ಹೋದರೆ ಮುಂದೆ ನದಿ ನೀರು ಹರಿದು ಆಂಧ್ರದ ಪಾಲಾಗುತ್ತದೆ.

### ೨.೧.೪. ಭೂಗರ್ಭ ಸಂಪತ್ತು :

"ಸಾಮಾನ್ಯವಾಗಿ ಭೂಮಿಯಿಂದ ಗಣಿಯಿಟ್ಟು ತೆಗೆದ ಎಲ್ಲ ಸ್ವಾಭಾವಿಕ ವಸ್ತುಗಳನ್ನು ಖನಿಜ ಗಳೆಂದು ಕರೆಯುವುದು ವಾಡಿಕೆಯಿದೆ. ಈ ಜನಜನಿತ ಭಾವನೆಯ ಪ್ರಕಾರ ಲೋಹಗಳು, ಅದಿರುಗಳು, ಕಲ್ಲಿದ್ದಲು, ಕಲ್ಲೆಣ್ಣೆ, ಸುಣ್ಣದ ಶಿಲೆ ಇವುಗಳಲ್ಲದೆ ಕಟ್ಟಡದ ಮತ್ತು ಜಲ್ಲಿಕಲ್ಲುಗಳೂ ಕೂಡಾ ಖನಿಜ ಗಳೆಂದು ಪರಿಗಣಿಸಲಾಗಿದೆ."[೧] ಈ ಎಲ್ಲ ವೈವಿಧ್ಯಮಯ ಖನಿಜ ನಿಕ್ಷೇಪಗಳು ಈ ಭಾಗದಲ್ಲಿ ಸಂಪದ್ಭರಿತ ವಾಗಿವೆ. ಯಾದಗೀರ ತಾಲ್ಲೂಕಿನ ಅನೇಕ ಕಡೆಗಳಲ್ಲಿ ಅಚ್ಚ ಬಿಳಿಯ ಬೆಣಚುಕಲ್ಲು ಸಿಗುತ್ತದೆ. ಇದನ್ನು ಕುಟ್ಟಿ, ಶುದ್ಧೀಕರಿಸಿದ ಪುಡಿಯನ್ನು ಗಾಜು, ಕುಂಭ, ಪಿಂಗಾಣಿ ವಸ್ತುಗಳ ತಯಾರಿಕೆಗೆ ಮತ್ತು ಕೆಲವು ಕೈಗಾರಿಕೆಗಳಲ್ಲಿ ಇವುಗಳಿಗೆ ಮೆರಗು ಕೊಡುವುದಕ್ಕೆ ಉಪಯೋಗಿಸಲಾಗುತ್ತದೆ. ಸಿಮೆಂಟ್ ತಯಾರಿಕೆಗೆ ಅಗತ್ಯವಾದ ಮೂಲವಸ್ತುಗಳಾದ ಸುಣ್ಣದ ಶಿಲೆ ಮತ್ತು ಜೇಡಮಣ್ಣು, ಸುಣ್ಣ, ಸಿಮೆಂಟ್ ಕ್ಯಾಲ್ಸಿಯಂ ಕಾರ್ಬೈಡ್‌ಗಳು ಸಿಗುತ್ತವೆ. ಸುಣ್ಣದ ಕಲ್ಲನ್ನು ಸಿಮೆಂಟ್ ತಯಾರಿಕೆಗೆ ಪ್ರಮುಖವಾಗಿ ಉಪಯೋಗಿ ಸಲಾಗುತ್ತದೆ. ಇದಲ್ಲದೆ ಕಬ್ಬಿಣ ಮತ್ತು ಉಕ್ಕು ಹಾಗೂ ರಾಸಾಯನಿಕ ಕೈಗಾರಿಕೆಗಳಲ್ಲಿ ಸುಣ್ಣದ ಕಲ್ಲನ್ನು ದ್ರವೀಕರಣ ವಸ್ತುವನ್ನಾಗಿ ಬಳಸಲಾಗುತ್ತದೆ. ಜೊತೆಗೆ ಅದನ್ನು ಕಟ್ಟಡ ಹಾಗೂ ನೆಲಗಟ್ಟು ಶಿಲೆಯಾಗಿಯೂ ಉಪಯೋಗಿಸುತ್ತಾರೆ. ಈ ಸುಣ್ಣದ ಅದಿರು ಹೇರಳವಾಗಿ ಚಿಂಚೋಳಿ ಮತ್ತು ಸೇಡಂ ತಾಲ್ಲೂಕುಗಳಲ್ಲಿ ದೊರೆಯುವುದರಿಂದ ಇಲ್ಲಿ ಸುಮಾರು ಈಗಾಗಲೇ ೫ ದೊಡ್ಡ ೧೫ ಸಣ್ಣ ಸಿಮೆಂಟು ಕಾರ್ಖಾನೆಗಳು ಕಾರ್ಯನಿರ್ವಹಿಸುತ್ತಿವೆ. ಇದಲ್ಲದೆ ಇಲ್ಲಿ ಹಾಸುಕಲ್ಲಿನ ಅನೇಕ ಗಣಿಗಳಿದ್ದು, ಮಿರ್ಯಾಣ, ಕಲ್ಲೂರು, ಗಾಣಾಪುರ, ಬಟಗೇರಾ, ಕೋಡ್ಲಾ, ಆಡಕಿಗಳಲ್ಲಿ ಒಳ್ಳೆಯ ಗುಣಮಟ್ಟದ ಹಾಸುಕಲ್ಲುಗಳು ದೊರೆಯುತ್ತವೆ. ೧೯೯೭ರಲ್ಲಿ ಚಿಂಚೋಳಿ ತಾಲ್ಲೂಕಿನಲ್ಲಿ ೨೦೦, ಸೇಡಂ ತಾಲ್ಲೂಕಿನಲ್ಲಿ ೮೦೦ ಇಂತಹ ಹಾಸುಗಲ್ಲಿನ ಗಣಿಗಳಿದ್ದು, ಇವು ಸ್ಥಳೀಯರಿಗೆ ಉದ್ಯೋಗದ ಮೂಲವೂ ಆಗಿವೆ.

### ೨.೨. ಚಾರಿತ್ರಿಕ ಅಂಶಗಳು

ನಾವು ನಡೆದಾಡುವ ಈ ನೆಲದಲ್ಲಿ ಅನೇಕಾನೇಕ ಸಂಸ್ಕೃತಿಗಳು ಜನ್ಮ ತಳೆದಿವೆ. ಒಂದೊಂದು ಸಂಸ್ಕೃತಿಯು ಒಂದೊಂದು ಬಗೆಯಲ್ಲಿ ಒಟ್ಟುಗೂಡಿ ತಮ್ಮದೇ ಆದ ವಿಶಿಷ್ಟ ಸಮುದಾಯಗಳನ್ನು ನಿರ್ಮಿಸಿಕೊಂಡಿವೆ. ಆದರೆ ಬದಲಾಗುತ್ತಿರುವ ಇಂದಿನ ಸಂಸ್ಕೃತಿ-ಉಪಸಂಸ್ಕೃತಿ, ಮಿಶ್ರ ಸಂಸ್ಕೃತಿಗಳು ತಾವು ತಳೆದಿರುವ ಮೊದಲಿನ ಪ್ರಣಾಳಿಕೆಯನ್ನು ದಿನದಿಂದ ದಿನಕ್ಕೆ ಬದಲಾಯಿಸಿಕೊಳ್ಳುತ್ತಿವೆ. ಇಲ್ಲಿನ ಮೂಲ ಸಂಸ್ಕೃತಿಯೊಂದಿಗೆ ಎಲ್ಲಿಂದಲೋ ಆಗಮಿಸಿದ ಎನ್ನುವ ಬೇರೊಂದು ಸಂಸ್ಕೃತಿಯು ದೀರ್ಘ ಸಮಯದವರೆಗೆ ಕಾದಾಡಿ ಕಾದಾಡಿ ಕೊನೆಗೆ ಆ ಭಿನ್ನ ಭಿನ್ನ ಸಂಸ್ಕೃತಿಗಳೆಲ್ಲವು ತಮಗರಿವಿಲ್ಲದಂತೆಯೇ ಪರಸ್ಪರ ಮೊದಲಿನ ದ್ವೇಷ ಬಿಟ್ಟು ಸ್ನೇಹವನ್ನು ಬೆಳೆಸಿಕೊಂಡಿರುವುದಕ್ಕೆ ಅನೇಕಾನೇಕ ಉದಾಹರಣೆಗಳು ನಮಗೆ ಕಾಣಸುತ್ತವೆ. ಹೊರಗಿನಿಂದ ಬಂದವೆಂದು ಹೇಳಲಾಗುವ ಕ್ರೈಸ್ತ, ಫಾರಸಿ, ಇಸ್ಲಾಂ ಮೊದಲಾದ ಸಂಸ್ಕೃತಿಗಳು ಇಲ್ಲಿಯ ಸಂಸ್ಕೃತಿಯೊಂದಿಗಿನ ಕೊಡು-ಕೊಳ್ಳುವಿಕೆಯಿಂದಾಗಿಯೇ ಇಲ್ಲಿದ್ದ ಸಂಸ್ಕೃತಿ ಸರಳಗೊಂಡಿತು. ಹೀಗೆ ಭಿನ್ನ ಭಿನ್ನ ಸಂಸ್ಕೃತಿಗಳು ಬೇರೆ ಬೇರೆ ಹಲವು ಹತ್ತು ವಿಷಯಗಳಿಗೆ ಸಂಬಂಧಿಸಿದಂತೆ ಒಂದೇ ವೇದಿಕೆಯಡಿಯಲ್ಲಿ ಬಂದು ನಿಂತು ಒಂದು ಹೊಸ ಸಂಸ್ಕೃತಿ ಹುಟ್ಟಲು ಕಾರಣೀಭೂತವಾದವು. ಈ ರೀತಿ ಹುಟ್ಟಿದ ಸಂಸ್ಕೃತಿ ಸಮ್ಮಿಶ್ರ ಸಂಸ್ಕೃತಿಯಾಗಿ ಬೆಳೆದುಬಂದಿತು.

ಸಮ್ಮಿಶ್ರ ಸಂಸ್ಕೃತಿಯೊಂದು ಬೆಳೆದು ಬರಲು ಪರಿಸರ, ಕಾಲ, ಸಂದರ್ಭಗಳು ಮಹತ್ವದ ಪಾತ್ರ ವಹಿಸುತ್ತವೆ. ಆದ್ದರಿಂದಲೇ ಕರ್ನಾಟಕ-ಆಂಧ್ರ ಗಡಿ, ಅದರಲ್ಲೂ ಹೈದರಾಬಾದ್-ಕರ್ನಾಟಕಕ್ಕೆ ಸಂಬಂಧಿಸಿದಂತೆ ಭಿನ್ನ ಭಿನ್ನ ಸಂಸ್ಕೃತಿಗಳು ಪರಸ್ಪರ ಕೊಡು-ಕೊಳ್ಳುವಿಕೆ ನಡೆಸಿದ್ದರಿಂದಲೇ ಬೇರೆಲ್ಲಿಯೂ ಕಾಣದ ಚಾರಿತ್ರಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ, ಭಾಷಿಕ ಸಮ್ಮಿಶ್ರ ಸಂಸ್ಕೃತಿಯೊಂದು ಈ ಭಾಗದಲ್ಲಿ ಉದಯಿಸಿ ವಿಶಿಷ್ಟತೆಯನ್ನು ಪಡೆಯಿತು. ಈ ರೀತಿಯ ಸಮ್ಮಿಶ್ರ ಸಂಸ್ಕೃತಿಯಲ್ಲಿನ "ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿ-ಗತಿ"ಗಳನ್ನು ನೋಡುವುದಕ್ಕಿಂತಲೂ ಪೂರ್ವದಲ್ಲಿ ಇಲ್ಲಿನ ಚರಿತ್ರೆ ಮತ್ತು ಚರಿತ್ರೆಯ ಕೆಲವು ಚಾರಿತ್ರಿಕ ಅಂಶಗಳನ್ನು ನೋಡುವುದು ಮುಖ್ಯವಾಗುತ್ತದೆ.

ಒಂದು ಪ್ರದೇಶದ ಸ್ಥಿತಿಗತಿಗಳು ಅನೇಕಾನೇಕ ಕಾರಣಗಳಿಂದ ನಿರ್ಧರಿಸಲ್ಪಡುತ್ತವೆ. ಅವುಗಳಲ್ಲಿ ಚಾರಿತ್ರಿಕ ಅಂಶಗಳು ಕೂಡಾ ಪ್ರಮುಖ ಸ್ಥಾನ ಪಡೆದಿರುತ್ತವೆ. ಅಂತಲೇ ಆ ಪ್ರದೇಶದ ಸ್ಥಿತಿಗಳನ್ನು ಅರಿಯುವಾಗ ಅಲ್ಲಿ ಘಟಿಸಿದ ಚಾರಿತ್ರಿಕ ಸಂಗತಿಗಳನ್ನು ಪರಿಗಣಿಸಬೇಕಾಗುತ್ತದೆ. ಚರಿತ್ರೆಯ ಹುಟ್ಟು ಇಂತಹ ವರ್ಷದಿಂದಲೇ ಪ್ರಾರಂಭವಾಯಿತು ಎಂದು ಹೇಳುವುದು ಕಷ್ಟ ಅಸಾಧ್ಯ. ಆದರೆ ಅಲ್ಲಿ ಘಟಿಸುವ ಘಟನೆಯಿಂದ ಹುಟ್ಟು ಪಡೆದುಕೊಳ್ಳುವ ಚರಿತ್ರೆಯನ್ನು ನಿಖರವಾಗಿ, ಸ್ಪಷ್ಟವಾಗಿ ಹೇಳಲು ಸಾಧ್ಯವಾಗುತ್ತದೆ. ಒಬ್ಬರ ಮೇಲೆ ಒಬ್ಬರು, ಒಂದು ಸಮೂಹ ಇನ್ನೊಂದು ಸಮೂಹದ ಮೇಲೆ ಹಿಡಿತ ಸಾಧಿಸುವ ಘಟನೆಗಳು ಹೆಚ್ಚಾಗಿ ಬಲಪ್ರಯೋಗದಿಂದ ಕೂಡಿರುವುದು ಇಲ್ಲಿನ ವಿಶೇಷ. ಬಲ ಇದ್ದವರು, ಬಲಹೀನರ ಮೇಲೆ ಹಿಡಿತ ಸಾಧಿಸುವುದು ಇಲ್ಲಿ ಕಂಡು ಬರುತ್ತದೆ. ಒಮ್ಮೆ ಹೀಗೆ ಹಿಡಿತ ಪಡೆದುಕೊಂಡ ಮೇಲೆ ತನ್ನ ಮತ್ತು ತನ್ನವರ ರಕ್ಷಣೆಗಾಗಿ ಗುಂಪೊಂದು ಜನ್ಮತಾಳಿ, ಆ ಗುಂಪಿಗೊಬ್ಬ ನಾಯಕ ಹುಟ್ಟಿಕೊಳ್ಳುತ್ತಾನೆ. ಇಂತಹ ಸಮೂಹಗಳು ತಮ್ಮ ಅಸ್ತಿತ್ವ, ಗುರುತಿಗಾಗಿ ಆ ಸಮೂಹಕ್ಕೊಂದು ಹೆಸರನ್ನಿಟ್ಟುಕೊಳ್ಳುತ್ತವೆ. ಹೀಗೆ ಹೆಸರೊಂದನ್ನು ಇಟ್ಟುಕೊಂಡ ಎಲ್ಲ ಸಮೂಹಗಳು ಸಾಮ್ರಾಜ್ಯ ಸ್ಥಾಪಿಸದಿದ್ದರೂ ಕೆಲವಂತೂ ತಮ್ಮ ಹೆಸರಿನಿಂದ ಸಾಮ್ರಾಜ್ಯ ಸ್ಥಾಪಿಸಿಕೊಂಡು ಮುಂದೊಮ್ಮೆ ಚರಿತ್ರೆಯಲ್ಲಿ ದಾಖಲಾಗುತ್ತವೆ. ಇಂತಹ ಚಾರಿತ್ರಿಕ ದಾಖಲೆಗಳಲ್ಲಿ ಗುರುತಿಸಿಕೊಂಡ ಅನೇಕಾನೇಕ ಅರಸು ಮನೆತನಗಳು ಕರ್ನಾಟಕ-ಆಂಧ್ರದ ಗಡಿ ಪ್ರದೇಶಗಳನ್ನೊಳಗೊಂಡಂತೆ ಆಳ್ವಿಕೆ ನಡೆಸಿದವು.

ಪ್ರಸ್ತುತ ಈ ಅಧ್ಯಯನದ ವ್ಯಾಪ್ತಿಗೊಳಪಡುವ ಪ್ರದೇಶದಲ್ಲಿ ಶಾತವಾಹನರು, ಬಾದಾಮಿ ಚಾಲುಕ್ಯರು, ಮಳಖೇಡದ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು ಮತ್ತು ಸೇವುಣರು, ವಾರಂಗಲ್ಲಿನ ಕಾಕತೀಯರು, ದೆಹಲಿ ಮತ್ತು ಬಹಮನಿ ಸುಲ್ತಾನರು, ಹೈದರಾಬಾದಿನ ನಿಜಾಂ ಅರಸರು ಕ್ರಿ.ಪೂ. ಸುಮಾರು ೨೩೫ರಿಂದ ಕ್ರಿ.ಶ. ೧೯೪೮ರವರೆಗೆ ಕ್ರಮವಾಗಿ ಆಳ್ವಿಕೆ ನಡೆಸಿದರು. ಈ ಅರಸು ಮನೆತನಗಳ ಅವಧಿಯಲ್ಲಿ ಕರ್ನಾಟಕ ಮತ್ತು ಆಂಧ್ರದ ಗಡಿಪ್ರದೇಶಗಳು ಇವರ ಆಳ್ವಿಕೆಯಲ್ಲಿ ಒಳಗೊಂಡಿದ್ದವು. ಈ ಅರಸು ಮನೆತನಗಳು ಇಂದಿಗೂ ಇಲ್ಲಿನ ಪ್ರಾಕೃತಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ, ಭಾಷಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳ ಮೇಲೆ ಪ್ರಭಾವ ಬೀರಿವೆ. ಅಂತಲೆ ಈ ಮೇಲೆ ಹೇಳಿದ ಎಲ್ಲ ಅರಸು ಮನೆತನಗಳನ್ನು ಈ ಮುಂದೆ ನೋಡಲಾಗುತ್ತದೆ.

## ೨.೨.೧. ಶಾತವಾಹನರು :

ಕನ್ನಡಿಗರು ಸ್ವತಂತ್ರ ಆಳ್ವಿಕೆ ಪ್ರಾರಂಭಿಸುವುದಕ್ಕೂ ಪೂರ್ವದಲ್ಲಿ ಕರ್ನಾಟಕ-ಆಂಧ್ರದ ಗಡಿ (ಗುಲಬರ್ಗಾ ಜಿಲ್ಲೆಗೆ ಸಂಬಂಧಿಸಿದಂತೆ) ಭಾಗ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಸನ್ನತಿಯಲ್ಲಿ ದೊರೆತ ಶಾಸನಗಳಿಂದ ದೃಢಪಡುತ್ತದೆ. ಶಾತವಾಹನರ ಮೂಲಪುರುಷ ಸಿಮುಖ. ಶಾತವಾಹನನಿಂದ ಈ ವಂಶಕ್ಕೆ ಶಾತವಾಹನರು ಎಂಬ ಹೆಸರು ಬಂದಂತಿದೆ. ಪುರಾಣಗಳಲ್ಲಿ ಈ ವಂಶದ ಮೂಲಪುರುಷರು ಆಂಧ್ರ ಜಾತಿಗೆ ಸೇರಿದ್ದರಿಂದ ಇವರನ್ನು ಆಂಧ್ರರೆಂದು ಹೆಸರಿಸಲಾಗಿದೆ. ಗೌತಮಿಪುತ್ರ ಶಾತಕರ್ಣಿಯು ಋಷಿಕ (ಕೃಷ್ಣಾ ನದಿ ದಂಡೆ ಮೇಲಿರುವ ಋಷಿಕ ನಗರ ಪ್ರದೇಶ), ಅಷ್ಮಕ (ಬೋಧನಾ ಪ್ರಾಂತ), ಮುಳಕ (ಗೋದಾವರಿ ದಂಡೆ ಮೇಲಿರುವ ಪೈಠಣ) ಮತ್ತು ವಿದರ್ಭಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದ್ದನು. ಇವುಗಳಲ್ಲಿನ ಋಷಿಕವೆಂದರೆ ಕರ್ನಾಟಕದ ಬಳ್ಳಾರಿ, ರಾಯಚೂರು ಮತ್ತು ಗುಲಬರ್ಗಾ ಜಿಲ್ಲೆಯ ಪ್ರದೇಶಗಳಾಗಿದ್ದು ಇವುಗಳನ್ನು 'ಶಾತವಾಹ ನೀಹಾರ' 'ಶಾತವಾಹನ ರಾಷ್ಟ್ರ' ಎಂದು ಕರೆಯುತ್ತಿದ್ದುದ್ದಕ್ಕೆ ಸನ್ನತಿಯಲ್ಲಿ ದೊರೆತ ಶಿಲಾಶಾಸನಗಳು ಸಾಕ್ಷಿಯಾಗಿವೆ. ಈ 'ಶಾತವಾಹ ನೀಹಾರ' 'ಶಾತವಾಹನ ರಾಷ್ಟ್ರ'ದ ಭಾಗಗಳು ಒಟ್ಟಾರೆ ಬಳ್ಳಾರಿ, ರಾಯಚೂರು, ಗುಲಬರ್ಗಾ ಮತ್ತು ಇವುಗಳಿಗೆ ಹೊಂದಿಕೊಂಡ ಆಂಧ್ರದ ಭಾಗಗಳು. ಇದಲ್ಲದೆ ಈ ಕಾಲದ ಅರಸರಾದ ಸದಕಣ ಕಲಲಾಯ, ಸದಕನ್ನ ಮಹಾರಠಿಪುತ, ಸದಕನ ಚುಟುಕನ್ನ ಮಹಾರಠಿಯ ಕಾಲದ ನಾಣ್ಯಗಳು ಈ ಭಾಗದಲ್ಲೆಲ್ಲ ಅನೇಕ ಕಡೆ ಸಿಕ್ಕಿವೆ. ಸನ್ನತಿಯು ಶಾತವಾಹನರ ಕಾಲದ ಪ್ರಮುಖ ಆಡಳಿತ ಕೇಂದ್ರದ ಒಂದು ಭಾಗವೆಂಬುದು ಇವುಗಳಿಂದ ತಿಳಿಯುತ್ತದೆ. ಗೌತಮಿಪುತ್ರ ಶಾತಕರ್ಣಿಯು ತನ್ನ ಕೊನೆಯ ದಿನಗಳನ್ನು ಅನಾರೋಗ್ಯದಿಂದ ಬಳಲುತ್ತಿದ್ದ, ಪ್ರಾಯಶಃ ಈ ರಾಜನು ಅನಾರೋಗ್ಯದಿಂದ ಬಳಲುತ್ತಿದ್ದ ಸನ್ನಿವೇಶವನ್ನು ಸನ್ನತಿಯ ಚಿತ್ರಫಲಕದಲ್ಲಿ ಬಹು ಮಾರ್ಮಿಕವಾಗಿ ಕೆತ್ತಿಸಲಾಗಿದೆ.

ಈ ರೀತಿ ಕರ್ನಾಟಕ-ಆಂಧ್ರದ ಚರಿತ್ರೆಯ ಪ್ರಾರಂಭವನ್ನು ನಾವು ಶಾತವಾಹನರ ಪುಟಗಳಲ್ಲಿ ಕಾಣಬಹುದು. ಶಾತವಾಹನ ಅರಸು ಮನೆತನದ ಕೊನೆಯ ಅರಸ ಪುಲೋಮನು ಮತ್ತು ಇವನ ನಂತರ ಸುಮಾರು ಮೂರನೆಯ ಶತಮಾನದ ನಂತರ ಆಂಧ್ರ ಭಾಗದಲ್ಲಿ ಅಭೀರರು, ಇಕ್ಷ್ವಾಕುಗಳು ಮತ್ತು ಕರ್ನಾಟಕದಲ್ಲಿ ಚುಟುಗಳು ತಮ್ಮ ಸ್ವತಂತ್ರ ಆಡಳಿತವನ್ನು ಆರಂಭಿಸಿ ಪ್ರಾದೇಶಿಕ ಅರಸು ಮನೆತನಗಳಿಗೆ ನಾಂದಿಯಾದರು.

ಬನವಾಸಿ ನಾಗಪ್ರತಿಮೆ ಶಾಸನದಲ್ಲಿ ವಿಣ್ಹುಕಡ ಚುಟುಕುಲಾನಂದ ಶಾತಕರ್ಣಿ, ಇವನ ಮಗಳು ಶಿವಸ್ಕಂದ ನಾಗಶ್ರೀ ಮತ್ತು ಹೆಸರು ಹೇಳದ ಯುವರಾಜನಾದ ಇವಳ ಮಗ, ಇವರ ಉಲ್ಲೇಖವಿದೆ. ಈ ಚುಟು ವಂಶಾವಳಿಯನ್ನು ಹೀಗೆ ನೋಡಬಹುದು.

೧ನೇ ವಿಣ್ಹು ಚುಟುಕುಲಾನಂದ ಶಾತಕರ್ಣಿ

↓

ಶಿವಸ್ಕಂದ ನಾಗಶ್ರೀಯ ಮಗ ಯುವರಾಜ

↓

(ಈ ಯುವರಾಜನೇ) ೨ನೇ ವಿಣ್ಹು ಚುಟುಕುಲಾನಂದ ಶಾತಕರ್ಣಿ.

ಈ ಚುಟುವಂಶದ ಶಿವಸ್ಕಂದವರ್ಮನ ಕೈಕೆಳಗೆ ಕದಂಬರು ಮಾಂಡಲಿಕರಾಗಿದ್ದರು. ಪಲ್ಲವರು ಚುಟುಅರಸರ ರಾಜ್ಯವನ್ನು ವಶಪಡಿಸಿಕೊಂಡಾಗ ಕದಂಬರು ಪಲ್ಲವರನ್ನು ಸೋಲಿಸಿದರು. ಹೀಗೆ ಚುಟು ವಂಶದ ಮುಂದುವರೆದ ವಂಶಾವಳಿಯಲ್ಲಿಯೇ ಕದಂಬರು ಮುಂದುವರೆಯುತ್ತಾರೆ. ೧ನೇ ಚುಟುಕುಲಾನಂದ ಶಾತಕರ್ಣಿಗೆ ಗಂಡು ಮಕ್ಕಳಿಲ್ಲದಿರುವುದರಿಂದ ಅವಳ ಮಗಳು ಮತ್ತು ಅಳಿಯನಿಗೆ ರಾಜ್ಯ ಹಸ್ತಾಂತರವಾಗಿ ೧ನೇ ಚುಟುಕುಲಾನಂದನ ಮಗಳ ಸಂತತಿ ಮುಂದುವರೆಯುತ್ತದೆ. ಇವಳ ಸಂತತಿಯಲ್ಲಿಯೇ ಕದಂಬರು ಬರುತ್ತಾರೆ. ಶಿವಸ್ಕಂದವರ್ಮ ೧ನೇ ವಿಣ್ಹ ಚುಟುಕುಲಾನಂದ ಶಾತಕರ್ಣಿಯ ಅಳಿಯ, ಇವರ ವಂಶಾವಳಿ ಹೀಗಿದೆ ಎನ್ನಬಹುದು.

ಶಿವಸ್ಕಂದವರ್ಮ

↓

ವೀರಶರ್ಮ

↓

ಬಂದುಷೇಣ

↓

ಮಯೂರಶರ್ಮ

↓

ಕಂಗವರ್ಮ

ಕರ್ನಾಟಕ-ಆಂಧ್ರ ಭಾಗದಲ್ಲಿನ 'ಶಾತವಾಹ ನಿಹಾರ', 'ಶಾತವಾಹನ ರಾಷ್ಟ್ರ'ಗಳನ್ನು ಆಳುತ್ತಿದ್ದ ಶಾತವಾಹನರಿಗೂ ಚುಟುಗಳಿಗೂ ಮತ್ತು ಕದಂಬರಿಗೂ ಸಂಬಂಧವಿರುವುದನ್ನು ಈ ಮೇಲಿನಂತೆ ನೋಡ ಬಹುದು. ಹೀಗೆ ಶಾತವಾಹನರ ಕಾಲದಿಂದ ಬೆಳೆದು ಬಂದ ಕರ್ನಾಟಕ-ಆಂಧ್ರದ ಸಂಬಂಧ ಇಂದಿಗೂ ಮುಂದುವರೆದುಕೊಂಡು ಬಂದಿದೆ. ಇವರ ಕಾಲಕ್ಕಾಗಲೇ 'ಆಂಧ್ರ-ಕರ್ನಾಟಕ' ಎಂಬ ಹೆಸರು ಪ್ರಚಲಿತಕ್ಕೆ ಬಂದಿತ್ತು.

**೨.೨.೨. ಬನವಾಸಿ ಕದಂಬರು :**

ಉತ್ತರದಲ್ಲಿ ಬನವಾಸಿ ಕದಂಬ ಮತ್ತು ದಕ್ಷಿಣದಲ್ಲಿ ಗಂಗರಿಂದ ಕನ್ನಡ ನಾಡು ಸ್ವತಂತ್ರ ಚರಿತ್ರೆ ಯನ್ನು ಪ್ರಾರಂಭಿಸಿತು. ರವಿವರ್ಮನ ವಿಜಯಯಾತ್ರೆ ಹಾಗೂ ಬೇಡಿಕೆಹಾಳದ ತಾಮ್ರಪಟದಲ್ಲಿನ ವಿಷಯ ವನ್ನು ಗಮನಿಸಿದಾಗ ಕದಂಬರ ರಾಜ್ಯವು ಪಶ್ಚಿಮ ಸಮುದ್ರದಿಂದ ಶ್ರೀಶೈಲ ಪರ್ವತದವರೆಗೂ ಉತ್ತರದ ಮಲಪ್ರಭಾ ನದಿಯಿಂದ ದಕ್ಷಿಣದ ಹಾಸನ, ತುಮಕೂರು ಜಿಲ್ಲೆಗಳ ಉತ್ತರ ಭಾಗದವರೆಗೆ ವಿಸ್ತರಿಸಿತ್ತು. ಇದರಲ್ಲಿ ಶಾತವಾಹನರ 'ಶಾತವಾಹ ನೀಹಾರ' 'ಶಾತವಾಹನ ರಾಷ್ಟ್ರ'ದಲ್ಲಿನ ಗುಲಬರ್ಗಾ ಪ್ರದೇಶವು, ಮುಖ್ಯವಾಗಿ ಇದರ ದಕ್ಷಿಣ ಭಾಗವು ಕದಂಬರ ರಾಜ್ಯದಲ್ಲಿ ಇದ್ದು ಅವರ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದು. ಆದರೆ ಗುಲಬರ್ಗಾ ಪ್ರದೇಶದ ಈ ಭಾಗದಲ್ಲಿ ಕದಂಬ ಅರಸು ಮನೆತನದ ಇಲ್ಲವೇ ಆ ಕಾಲದ ವಿಶಿಷ್ಟವಾದ ಯಾವುದೇ ಪುರಾತತ್ವದ ಅವಶೇಷಗಳು ಇದುವರೆಗೆ ಬೆಳಕಿಗೆ ಬಂದಿರುವುದಿಲ್ಲ.

### ೨.೨.೩. ಬಾದಾಮಿ ಚಾಲುಕ್ಯರು :

ಕ್ರಿ.ಶ. ಸುಮಾರು ೬ನೇ ಶತಮಾನದಲ್ಲಿ ಚಾಲುಕ್ಯರು ಮೊಟ್ಟಮೊದಲ ಬಾರಿಗೆ ಕನ್ನಡ ನಾಡನ್ನು ಕಾವೇರಿಯಿಂದ ನರ್ಮದಾ ನದಿಯವರೆಗೆ ವಿಸ್ತರಿಸಿದರು ಎಂಬುದಕ್ಕೆ ಚರಿತ್ರೆ ಆಧಾರ ನೀಡುತ್ತದೆ. ಚಾಲುಕ್ಯರ ಇಮ್ಮಡಿ ಪುಲಕೇಶಿ ನರ್ಮದಾ ನದಿಯನ್ನು ಸಾಕ್ಷಿಯಾಗಿರಿಸಿಕೊಂಡು ಶ್ರೀಹರ್ಷ ಚಕ್ರವರ್ತಿಯನ್ನು ಸೋಲಿಸಿ 'ಪರಮೇಶ್ವರ', 'ದಕ್ಷಿಣಾಪಥೇಶ್ವರ' ಎಂಬ ಗೌರವ, ಬಿರುದಿನೊಂದಿಗೆ ಸಮಸ್ತ ಭಾರತವನ್ನು ಉತ್ತರ ಮತ್ತು ದಕ್ಷಿಣಗಳೆಂದು ವಿಭಾಗಿಸಿದ. ನರ್ಮದಾ ನದಿಯ ಮೇಲಿನ ಭಾಗ ಉತ್ತರ ಭಾರತವೆಂದು, ದಕ್ಷಿಣದ ಭಾಗ ಕನ್ನಡ ನಾಡೆಂದು ಕರೆದು, ಅಂತೆಲೇ ಡಾ.ಎಂ.ಎಚ್. ಕೃಷ್ಣ 'ದಕ್ಷಿಣ ಪಥದ ಇತಿಹಾಸವೆಂದರೆ ಅದು ಕರ್ನಾಟಕದ ಇತಿಹಾಸ'ವೆಂದು ಘೋಷಿಸಿದ್ದಾರೆ. ಇಮ್ಮಡಿ ಪುಲಕೇಶಿಗಿಂತ ಮುಂಚೆಯೇ ಶಾತವಾಹನರ ಗೌತಮಿಪುತ್ರ ಶಾತಕರ್ಣಿಯು 'ದಕ್ಷಿಣಾಪಥಪತಿ' ಎಂಬ ಬಿರುದು ಪಡೆದುಕೊಂಡಿದ್ದನೆಂಬುದಕ್ಕೆ ಅವನ ಮಹಾರಾಣಿ ನಗನ್ನಿಕಾಳ ಒಂದು ಶಾಸನವೇ ಸಾಕ್ಷಿಯಾಗಿದ್ದು, ಈ ಶಾಸನದಲ್ಲಿ ತನ್ನ ಗಂಡನನ್ನು ದಕ್ಷಿಣಾಪಥಪತಿ, ಇವನನ್ನು ಯಾರು ಪ್ರಶ್ನಿಸಲಾಗದ ಪ್ರಭುತ್ವವನ್ನುಳ್ಳ ಯೋಧನೆಂದು ವರ್ಣಿಸಿದ್ದಾಳೆ. ಇವಳು ಅಂಗಿಕ ವಂಶದ ಮಹಾರಠಿಯ ಮಗಳು. ಈ ಮಹಾರಠಿಗಳು ಶಾತವಾಹನರ ಮಾಂಡಲಿಕರು. ಹೀಗಾಗಿ ಗೌತಮಿಪುತ್ರ ಶಾತಕರ್ಣಿಯ 'ದಕ್ಷಿಣಾಪಥಪತಿ' ಎಂಬ ಬಿರುದು ಮುಂದೆ ಚಾಲುಕ್ಯರ ೨ನೇ ಪುಲಕೇಶಿಯ 'ದಕ್ಷಿಣಾಪಥೇಶ್ವರ' ಎಂಬುದು ಶಾತವಾಹನರ ಪರಂಪರೆಯಲ್ಲಿಯೇ ಮುಂದುವರೆದುಕೊಂಡು ಬಂದಿರುವುದು ಇಲ್ಲಿ ಗಮನಿಸಬಹುದಾಗಿದೆ.

ಕದಂಬರ ಆಳ್ವಿಕೆಗೆ ಒಳಪಟ್ಟ ಭಾಗಗಳಲ್ಲಿ ಒಂದಾದ ಗುಲಬರ್ಗಾ ಪ್ರದೇಶದಲ್ಲಿ ಅವರು ಸಮರ್ಥವಾಗಿ ಆಡಳಿತ ನಡೆಸದಿರುವುದರಿಂದ ನಿರ್ಲಕ್ಷ್ಯಕ್ಕೊಳಗಾಗಿತ್ತು. ಆದರೆ ಬಾದಾಮಿ ಚಾಲುಕ್ಯರು ತಮ್ಮ ವಿಸ್ತಾರವಾದ ಭೂಪ್ರದೇಶಗಳಲ್ಲಿ ಪ್ರಾಂತೀಯ ಆಡಳಿತಗಾರರನ್ನು ನೇಮಿಸಿದ್ದರು. ೨ನೇ ಪುಲಕೇಶಿ ತನ್ನ ಇಬ್ಬರು ತಮ್ಮಂದಿರಲ್ಲಿ ಕುಬ್ಜ ವಿಷ್ಣುವರ್ಧನನನ್ನು ವೆಂಗಿ ಪ್ರದೇಶದಲ್ಲಿ, ಇನ್ನೊಬ್ಬ ತಮ್ಮ ಬುದ್ಧವರಸನನ್ನು ಉತ್ತರದ ಕೊಂಕಣ ಅಪರಾಂತದಲ್ಲಿ ಮತ್ತು ಮಗ ಜಯಸಿಂಹವರ್ಮನನ್ನು ಗುಜರಾತಿನಲ್ಲಿ ಆಡಳಿತ ನೋಡಿಕೊಳ್ಳಲು ನೇಮಿಸಿದ್ದನು. ಇವು ಮುಂದೆ ಸ್ವತಂತ್ರ ಚಾಲುಕ್ಯ ಅರಸು ಮನೆತನಗಳ ಕವಲುಗಳಾಗಿ ಮಾರ್ಪಟ್ಟವು. ಈ ಪ್ರದೇಶಗಳನ್ನು ಬಿಟ್ಟು ಉಳಿದ ಭಾಗಗಳನ್ನು ೨ನೇ ಪುಲಕೇಶಿ ತನ್ನ ನೇರ ಆಡಳಿತದಲ್ಲಿರಿಸಿಕೊಂಡಿದ್ದನು. ಇದರಲ್ಲಿಯೇ ಗುಲಬರ್ಗಾ ಪ್ರದೇಶ ಒಳಗೊಂಡಿತ್ತೆಂಬುದಕ್ಕೆ ಇಲ್ಲಿ ಸಿಕ್ಕ ಶಾಸನಗಳು ಆಧಾರ ಒದಗಿಸುತ್ತವೆ. ಇದು ೨ನೇ ಪುಲಕೇಶಿಯ ಅಧಿಕಾರ ವಿಕೇಂದ್ರಿಕರಣದ ಫಲವಾಗಿತ್ತು. ಒಂದು ವೇಳೆ ಆಡಳಿತವನ್ನು ಹೀಗೆ ವಿಕೇಂದ್ರೀಕರಣಗೊಳಿಸದಿದ್ದರೆ ಕಾವೇರಿಯಿಂದ ನರ್ಮದಾ ನದಿಯವರೆಗಿನ ವಿಶಾಲವಾದ ಪ್ರದೇಶಗಳನ್ನು ಸರಿಯಾಗಿ ನೋಡಿಕೊಳ್ಳಲಾಗುತ್ತಿರಲಿಲ್ಲವೇನೋ, ಹೀಗಾಗದೆ ಅವರು ಬನವಾಸಿ ಕದಂಬರಂತೆ ಎಲ್ಲ ಭೂಭಾಗಗಳನ್ನು ತಮ್ಮ ನೇರ ಆಡಳಿತಕ್ಕೊಳಪಡಿಸಲಿಲ್ಲ. ಸ್ಥಳೀಯ ಅವಶ್ಯಕತೆಗಳಿಗೆ ತಕ್ಕಂತೆ ಅಧಿಕಾರಗಳನ್ನು ಚಾಲುಕ್ಯರು ಹಂಚಿದ್ದರು. ಇದರಿಂದಲೇ ಗುಲಬರ್ಗಾ

ಪ್ರದೇಶದಲ್ಲಿ ಚಾಲುಕ್ಯರ ಅವಶೇಷಗಳು, ಸ್ಮಾರಕಗಳು, ಶಾಸನ ಮುಂತಾದವುಗಳು ಸಾಕ್ಷಿಗಳಾಗಿ ಕಂಡು ಬರುತ್ತವೆ.

ಬಾದಾಮಿ ಚಾಲುಕ್ಯರು ತಮ್ಮ ಆಡಳಿತದ ಅನುಕೂಲಕ್ಕಾಗಿ ರಾಷ್ಟ್ರ, ಮಹಾರಾಷ್ಟ್ರ, ದೇಶ, ನಾಡು, ಮಂಡಳ, ವಿಷಯ, ಭೋಗ, ಅಹರ, ಗ್ರಾಮಗಳೆಂಬ ಘಟಕಗಳನ್ನು ವಿಂಗಡಿಸಿಕೊಂಡಿದ್ದರು. ರಾಷ್ಟ್ರ, ಮಹಾರಾಷ್ಟ್ರದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಯನ್ನು 'ರಾಷ್ಟ್ರಕೂಟ' ಎಂದು, ಈ ಪ್ರಾಂತ್ಯದಲ್ಲಿ ೯೯,೦೦೦ ಹಳ್ಳಿಗಳಿದ್ದವು. ನಾಡು ಎಂಬುದು ಪ್ರಾದೇಶಿಕ ವಿಭಾಗ, ಮಂಡಳವನ್ನು ಗವರ್ನರ್ ನೋಡಿಕೊಳ್ಳುತ್ತಿದ್ದ. ವಿಷಯ ಎಂದರೆ ಜಿಲ್ಲೆ, ಭೋಗ ಎಂದರೆ ತಾಲೂಕು, ಅಹರ ಎಂದರೆ ಹೋಬಳಿ ಮತ್ತು ಕೊನೆಯ ಹಂತದಲ್ಲಿ ಗ್ರಾಮ ಇರುತ್ತಿತ್ತು. 'ರಾಷ್ಟ್ರಕೂಟ'ರು ಮೊದಲು ಬಾದಾಮಿ ಚಾಲುಕ್ಯರ ಒಂದು ಭಾಗವನ್ನು ನೋಡಿಕೊಳ್ಳುತ್ತಿದ್ದರು.

**೨.೨.೪. ಮಳಖೇಡದ ರಾಷ್ಟ್ರಕೂಟರು :**

ದಂತಿದುರ್ಗನು ಬಾದಾಮಿ ಚಾಲುಕ್ಯರ ಒಬ್ಬ ಅಧಿಕಾರಿ. ಮುಂದೆ ಅವನು ಬಾದಾಮಿ ಚಾಲುಕ್ಯರ ಅಧಿಕಾರ ತೊಡೆದು ಹಾಕಿ ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಾಪನೆಯನ್ನು ಮಾಡಿದನು. ರಾಷ್ಟ್ರಕೂಟ ಎಂಬುದು ಮೊದಲು ಅಧಿಕಾರ ಹುದ್ದೆಯಾಗಿದ್ದು, ಕಾಲಕ್ರಮೇಣ ಒಂದು ಕುಟುಂಬದ, ಒಂದು ಸಾಮ್ರಾಜ್ಯದ ಹೆಸರಾಯಿತು. ನಂತರದಲ್ಲಿ ಬಂದ ರಾಷ್ಟ್ರಕೂಟರ ಪ್ರಸಿದ್ಧ ದೊರೆ ಅಮೋಘವರ್ಷ ನೃಪತುಂಗನ ವಿದ್ವತ್ತನ್ನು, ಜ್ಞಾನವನ್ನು ಅವನ ಸಮಕಾಲೀನರು ಮತ್ತು ಮುಂದಿನವರು ಮುಕ್ತಕಂಠದಿಂದ ಹೊಗಳಿದ್ದಾರೆ. ಇವನ ಕಾಲದಲ್ಲಿಯೇ ಕನ್ನಡದ ಪ್ರಥಮ ಉಪಲಬ್ಧ 'ಕವಿರಾಜಮಾರ್ಗ' ಕೃತಿಯನ್ನು ಶ್ರೀವಿಜಯನು ಬರೆದನು. ಈ ಕೃತಿಯ 'ದೋಷಾನುವರ್ಣನೆ ನಿರ್ಣಯ' (ಮೊದಲ ಪರಿಚ್ಛೇದ)ದಲ್ಲಿ ಕನ್ನಡ ನಾಡಿನ ವಿಸ್ತಾರ, ಕನ್ನಡಿಗರ ವರ್ಣನೆ, ಕನ್ನಡ ನಾಡು-ನುಡಿ, ಸಾಹಿತ್ಯ-ಸಂಸ್ಕೃತಿಗಳ ಬಗ್ಗೆ ಹೇಳುತ್ತಾ ಇವುಗಳಿಗೆ ಉದಾಹರಣೆಗಳನ್ನು ನೀಡುತ್ತಾನೆ. ಮಾರ್ಗಕಾರನು 'ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್' ಎಂದು ಕನ್ನಡ ನಾಡಿನ ಮೇರೆಗಳನ್ನು, ಗಡಿಗಳನ್ನು ಗುರುತಿಸುತ್ತಾನೆ. ಇಂದಿನ ಗೋದಾವರಿ ಪ್ರದೇಶದ ನಾಂದೇಡ್, ನಿಜಾಮಾಬಾದ್, ಕರಿಂನಗರ, ಮೇದಕ ಜಿಲ್ಲೆಗಳು ಅಂದು ಕನ್ನಡ ನಾಡಿನಲ್ಲಿದ್ದವು. ಸ್ವತಃ ೧ನೇ ಅಮೋಘವರ್ಷನೇ 'ಪ್ರಶ್ನೋತ್ತರ ರತ್ನಮಾಲಿಕಾ' ಎಂಬ ಹೆಸರಿನ ನೀತಿತತ್ವಗಳ ಕೃತಿಯನ್ನು ಬರೆದಿದ್ದನು. ಆದರೆ ಅದು ಇಂದಿಗೂ ಲಭ್ಯವಾಗಿಲ್ಲ. ಆದಿಪುರಾಣದ ಕರ್ತೃ ಜಿನಸೇನ, ಗಣಿತಸಾರ ಸಂಗ್ರಹದ ಕರ್ತೃ ಮಹಾವೀರಚಾರ್ಯ, ಅಮೋಘವೃತ್ತಿಯನ್ನು ಬರೆದ ಶಕಟಾಯನ, ಮಹಾಜ್ಯೋತಿಷ ಗೋತಿಯ ಭಟ್ಟ ಇವರೆಲ್ಲರೂ ಅಮೋಘವರ್ಷನ ಆಸ್ಥಾನದಲ್ಲಿದ್ದರು.

ಅಮೋಘವರ್ಷನ ಆಳ್ವಿಕೆಯಲ್ಲಿಯೇ ಮಾನ್ಯಖೇಟವು ರಾಷ್ಟ್ರಕೂಟರ ಸುಪ್ರಸಿದ್ಧ ರಾಜಧಾನಿ ಯಾಯಿತು. ರಾಷ್ಟ್ರಕೂಟರಿಗಿಂತ ಮುಂಚೆ ಬಾದಾಮಿ ಚಾಲುಕ್ಯರ "೧ನೇ ಕೀರ್ತಿವರ್ಮನೆಂದು ಗುರುತಿಸಲಾದ ಪೂಗವರ್ಮನು ವರಾಹದೇವ ಸ್ವಾಮಿ ದೇವಾಲಯಕ್ಕೆ ಮಳಖೇಡ ಗ್ರಾಮವನ್ನು ದಾನ ಮಾಡಿದ್ದನು

ಎಂಬುದು ಗೊತ್ತಾಗುತ್ತದೆ."[೨] ಇದರಿಂದ ಮಳಖೇಡ ರಾಷ್ಟ್ರಕೂಟರಿಗಿಂತ ಮುಂಚಿನ ಊರಾಗಿತ್ತು ಎಂಬುದು ಖಚಿತವಾಗುತ್ತದೆ. ಅದನ್ನು ಮುಂದೆ ರಾಷ್ಟ್ರಕೂಟರು ಅಭಿವೃದ್ಧಿಪಡಿಸಿ ರಾಜಧಾನಿಯ ಸ್ಥಾನಮಾನ ನೀಡಿದರು. "ಚರಿತ್ರೆಯಲ್ಲಿ ದಾಖಲಾಗಿರುವ ಕ್ರಿ.ಶ. ೭೦೦ ರಿಂದ ೧೦೦೦ರವರೆಗಿನ ಕಾಲಾವಧಿ ಕರ್ನಾಟಕದ ಮಹಿಮಾನ್ವಿತ ಯುಗ, ಈ ಮೂರು ಶತಮಾನಗಳ ಕಾಲದಲ್ಲಿ ರಾಷ್ಟ್ರಕೂಟರು ಉತ್ತರ ಭಾರತದ ಮೇಲೆ ತಮ್ಮ ಪ್ರಭಾವ ಬೀರಿದ್ದರು. ಅಲ್ಲದೆ ಇಡೀ ಭಾರತದ ಅದೃಷ್ಟವನ್ನು ಬದಲಿಸಿದರು. ನಿಷ್ಪಕ್ಷಪಾತ ವಾಗಿ ಭಾರತದ ಇತಿಹಾಸವನ್ನು ರಚಿಸಿದಲ್ಲಿ ಈ ಯುಗವನ್ನು ಕರ್ನಾಟಕದ ಯುಗ ಎಂದು ಹೆಸರಿಸಬೇಕು."[೩]

**೨.೨.೫. ಕಲ್ಯಾಣದ ಚಾಲುಕ್ಯರು :**

ಬಾದಾಮಿ ಚಾಲುಕ್ಯರ ಕೈಕೆಳಗೆ ಅಧಿಕಾರಿಯಾಗಿದ್ದ ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರ ಮಾಂಡಲಿಕತ್ವ ಧಿಕ್ಕರಿಸಿ ಸ್ವತಂತ್ರ ರಾಜ್ಯವನ್ನು ಕಟ್ಟಿದರು. ಬಾದಾಮಿ ಚಾಲುಕ್ಯರು ಅವನತಿಯನ್ನು ಹೊಂದಿದರೂ ಅಲ್ಲಲ್ಲಿ ಚಾಲುಕ್ಯರ ವಂಶ ಮುಂದುವರೆದಿತ್ತು. ಮುಂದೆ ಈ ಚಾಲುಕ್ಯ ವಂಶದ ಕುಡಿಗಳು ಮತ್ತೇ ಮರಳಿ ರಾಜ್ಯ ಸ್ಥಾಪನೆ ಮಾಡಬೇಕೆಂಬ ಇಚ್ಛೆಗೆ ಕಾಲ ಕೂಡಿ ಬಂದಿದ್ದು, ರಾಷ್ಟ್ರಕೂಟರ ೨ನೇ ಕರ್ಕನ ಮೇಲೆ ಪರಮಾರ ಆಕ್ರಮಣ ಮಾಡಿದಾಗ ಬಾದಾಮಿ ಚಾಲುಕ್ಯರ ವಂಶದವರೆಂದು ಗುರುತಿಸಿಕೊಂಡ ೨ನೆಯ ತೈಲಪನು ಈ ಅವಕಾಶವನ್ನು ಉಪಯೋಗಿಸಿಕೊಂಡು ಕರ್ಕನನ್ನು ಸೋಲಿಸಿ ರಾಷ್ಟ್ರಕೂಟ ಸಾಮ್ರಾಜ್ಯವನ್ನು ವಶಪಡಿಸಿಕೊಂಡು ಪುನಃ ಚಾಲುಕ್ಯರ ರಾಜ್ಯ ಸ್ಥಾಪನೆ ಮಾಡಿದನು. ಕರ್ಕ, ಸತ್ಯಾಶ್ರಯ, ೫ನೇ ವಿಕ್ರಮಾದಿತ್ಯ, ೨ನೆಯ ಜಯಸಿಂಹನವರೆಗೆ ರಾಷ್ಟ್ರಕೂಟರ ಮಳಖೇಡವೆ ಇವರಿಗೂ ರಾಜಧಾನಿ ಯಾಗಿತ್ತು. ಯಾದಗೀರ, ಕೊಲ್ಲಿಪಾಕ್ ಹಾಗೂ ಹೊತ್ತಲಕೆರೆಗಳು ಇವರ ಉಪರಾಜಧಾನಿಗಳಾಗಿದ್ದವು. ಕಲ್ಯಾಣವನ್ನು 'ನೆಲೆವೀಡು'(ಖಾಯಂ ಸೇವಾ ಶಿಬಿರ)ವಿನ ಸ್ಥಾನಮಾನವನ್ನು ನೀಡಿದ್ದರು. ತರುವಾಯ ಒಂದನೇ ಸೋಮೇಶ್ವರನ ಕಾಲಕ್ಕೆ ಕಲ್ಯಾಣ ಚಾಲುಕ್ಯರ ರಾಜಧಾನಿಯಾಯಿತು. ಮುಂದೆ ಇವರು 'ಕಲ್ಯಾಣದ ಚಾಲುಕ್ಯ'ರೆಂದು ಚರಿತ್ರೆಯಲ್ಲಿ ದಾಖಲಾದರು.

**೨.೨.೬. ಕಲಚೂರಿಗಳು :**

ಕಲ್ಯಾಣಿ ಚಾಲುಕ್ಯರ ಮುಖ್ಯ ಸಾಮಂತರಲ್ಲಿ ಒಬ್ಬರಾದ ಕಲಚೂರಿಗಳು ಸುಮಾರು ೧೨ನೇ ಶತಮಾನದ ಪೂರ್ವದಲ್ಲಿ ಅಧಿಕಾರಕ್ಕೆ ಬಂದರು. ೧೧೬೨ರಲ್ಲಿ ಕಲಚೂರಿ ೧ನೇ ಬಿಜ್ಜಳನು ಕಲ್ಯಾಣಿ ಚಾಲುಕ್ಯರ ೩ನೇ ತೈಲಪನನ್ನು ಸೋಲಿಸಿ ಸ್ವತಂತ್ರ ಕಲಚೂರಿ ಸಾಮ್ರಾಜ್ಯವನ್ನು ಕಟ್ಟಿದನು. ೧ನೇ ಬಿಜ್ಜಳನಿಗಿಂತ ಮುಂಚೆ ಉಚ್ಚ, ಅಸಗ, ಕನ್ನಮ, ಕಿರಿಯಸಗ ಮತ್ತು ರಾಜರೆಂಬುವರು ಸ್ವತಂತ್ರ ರಾಜ್ಯದ ಕಲ್ಪನೆ ಕಂಡಿದ್ದರು. ಅದು ೧ನೇ ಬಿಜ್ಜಳನ ಕೈಯಲ್ಲಿ ಸಾಕಾರಗೊಂಡಿತು. ಕಲಚೂರಿಗಳಲ್ಲಿಯೇ ಅತ್ಯಂತ ಪ್ರಸಿದ್ಧನಾದ ದೊರೆ ೨ನೆಯ ಬಿಜ್ಜಳ. ಈ ಕಲಚೂರಿಗಳು ಮೊದಲು ಮಂಗಳವೇಡ (ಮಹಾರಾಷ್ಟ್ರ)ದಿಂದ ಆಳ್ವಿಕೆ ನಡೆಸಿ ೧೧೬೨ರಲ್ಲಿ ೨ನೆಯ ಬಿಜ್ಜಳನು ಕಲ್ಯಾಣವನ್ನು ವಶಪಡಿಸಿಕೊಂಡು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿದನು. ತುಂಬಾ ಬಲಿಷ್ಠನಾದ ೨ನೇ ಬಿಜ್ಜಳ ಒಂದು ಕಡೆ

ಅಕ್ಕಪಕ್ಕದ ಕದಂಬರ, ಹೊಯ್ಸಳರ, ಸಿಂದರ ದಾಳಿಗಳನ್ನು ಎದುರಿಸಬೇಕಾಯಿತು. ಇನ್ನೊಂದು ಕಡೆ ಕುಟುಂಬದೊಳಗಿನ ಅವನ ಸಹೋದರ ಮೈಳುಗಿ ಮತ್ತು ಅವನ ಆರು ಜನ ಮಕ್ಕಳು ರಾಜ್ಯಾಧಿಕಾರಕ್ಕಾಗಿ ದಂಗೆ ಏಳುತ್ತಿದ್ದರು. ಇವೆರಡು ಸಮಸ್ಯೆಗಳಲ್ಲದೆ ಇನ್ನೊಂದು ಅತೀ ಮುಖ್ಯವಾದ ಧಾರ್ಮಿಕ ಕ್ರಾಂತಿ, ಬಸವಣ್ಣ ಮತ್ತು ಅವನ ಬೆಂಬಲಿಗರು ನಡೆಸಿದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿ ಬಿಜ್ಜಳನ ಅಸ್ತಿತ್ವವನ್ನೇ ಅಲುಗಾಡಿಸಿತು. ಈ ಸಂದರ್ಭವನ್ನು ಬಳಸಿಕೊಂಡು ಮೈಳುಗಿಯು ಅಧಿಕಾರಕ್ಕೆ ಬಂದನು.

ಕೇವಲ ೨೨-೨೫ ವರ್ಷ ಆಳ್ವಿಕೆ ನಡೆಸಿದ್ದ ಕಲಚೂರಿಗಳು ಕರ್ನಾಟಕದ ಚರಿತ್ರೆಯಲ್ಲಿ ತಮ್ಮ ಛಾಪು ಮೂಡಿಸದೆ ಹೋದರೂ ಇವರ ಆಡಳಿತದ ಸಂದರ್ಭದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಗಳು ಹುಟ್ಟು ಪಡೆದುಕೊಂಡವು. ಇದು ಇಲ್ಲಿಯವರೆಗೂ ನಡೆದುಕೊಂಡು ಬಂದ ಕನ್ನಡಿಗರ ಚರಿತ್ರೆಯ ದಿಕ್ಕನ್ನೇ ಬದಲಾಯಿಸಿತು. ಕೇವಲ ಕೆಲವರಿಗೆ ಮೀಸಲಾಗಿದ್ದ ಚರಿತ್ರೆಯನ್ನು ಈ ಕಾಲದಲ್ಲಿಯೇ ಮೊದಲ ಬಾರಿಗೆ ಕೆಳಸ್ತರದವರು ಚರಿತ್ರೆ ಕಟ್ಟುವುದರಲ್ಲಿ ಭಾಗಿಯಾದರು. ೨ನೇ ಬಿಜ್ಜಳನ ಕಾಲದಲ್ಲಿ ಬಸವಣ್ಣ ಮತ್ತು ಅವರ ಬೆಂಬಲಿಗರು ಚರಿತ್ರೆಯನ್ನು ಸರಳೀಕರಿಸುತ್ತ ಸಾಮಾನ್ಯ ಜನಸಮೂಹಗಳು ಇದರಲ್ಲಿ ಭಾಗವಹಿಸುವಂತೆ ಆಹ್ವಾನಿಸಿದರು. ಬಸವಣ್ಣ ಸಾಮಾಜಿಕ ಸಮಾನತೆ, ಸಾಮಾಜಿಕ ನ್ಯಾಯಕ್ಕಾಗಿ ಬಳಸಿಕೊಂಡಿದ್ದು ವಚನ ಸಾಹಿತ್ಯವೆಂಬ ಮಾರ್ಗ ಕೇವಲ ವಿದ್ವಾಂಸರು, ಆಸ್ಥಾನಿಕರ ಕೈಯಲ್ಲಿದ್ದ ಹಲಗೆ ಬಳಪವು ಜನಸಾಮಾನ್ಯರ ನಾಲಿಗೆಯ ಮೇಲೆ ಹರಿಯುವಂತೆ ಮಾಡಿದ್ದು, ಮುಂದೆ ಇದು ವಚನಕ್ರಾಂತಿಯಾಗಿ ಬೆಳೆಯಿತು.

**೨.೨.೭. ಸೇವುಣರು :**

ಕಲ್ಯಾಣಿ ಚಾಲುಕ್ಯರ ನಾಲ್ಕನೆಯ ಸೋಮೇಶ್ವರನಿಂದ ಅಧಿಕಾರ ಕಸಿದುಕೊಂಡ ಕಲಚೂರಿಗಳನ್ನು ಅನುಸರಿಸಿದ ಸೇವುಣರು, ಕಾಕತೀಯರು, ಕಲ್ಯಾಣಿ ಚಾಲುಕ್ಯರ ಮಾಂಡಲಿಕತ್ವವನ್ನು ಧಿಕ್ಕರಿಸಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಸೇವುಣರು ಸಿಂದಿನೇರ (ನಾಸಿಕ ಜಿಲ್ಲೆಯ ಸಿನ್ನಾರ)ವನ್ನು ರಾಜಧಾನಿ ಮಾಡಿಕೊಂಡು ಇಲ್ಲಿಂದಲೇ ತಮ್ಮ ರಾಜಕೀಯ ಚಟುವಟಿಕೆಗಳನ್ನು ಪ್ರಾರಂಭಿಸಿದರು. ಇದು ಇವರ ಕೇಂದ್ರಸ್ಥಾನವಾಯಿತು. ಇಂದಿಗೂ ಇದನ್ನು ಒಂದು 'ದೇಶೀಯ ಮರಾಠ ಸಂಗಡ' ಎಂದು ಅಲ್ಲಿನ ಸ್ಥಳೀಯರು ತಿಳಿದಿದ್ದು, ಸೇವುಣರು ಮರಾಠಿಗರೆಂದು ಹೇಳುತ್ತಾರೆ. ಈ ವಂಶದ ಧಾಡಿಯಪ್ಪ, ಲಚ್ಚಿಯವ್ವ, ರಾಜುಗಿ, ವೇಸುಗಿ, ಭಿಲ್ಲಮ ಈ ರಾಜರ ಹೆಸರುಗಳು ಕನ್ನಡ ಮೂಲದವು. ಇವರು ತಮ್ಮ ವೈವಾಹಿಕ ಸಂಬಂಧಗಳನ್ನು ರಾಷ್ಟ್ರಕೂಟರ, ಚಾಲುಕ್ಯರ ಜೊತೆಗೆ ಮಾಡಿದ್ದರು. ಅಲ್ಲದೇ ಅವರು ತಮ್ಮನ್ನು 'ಕುಂತಲ ದೇಶದ ಪ್ರಭುಗಳು' ಎಂದು ಹೇಳಿಕೊಂಡಿರುವುದರ ಜೊತೆಗೆ 'ಕರ್ನಾಟಕ ರಾಯ ವಂಶಾಭಿರಾಮ' ಎಂಬ ಬಿರುದನ್ನು ಧರಿಸಿದ್ದರು. ಇವರ ಹೆಚ್ಚಿನ ಶಾಸನಗಳು ಕನ್ನಡ ಭಾಷೆಯಲ್ಲಿವೆ. ಇದಕ್ಕೂ ಮಿಗಿಲಾಗಿ ಸೇವುಣರ ಈ ಪ್ರದೇಶ ಅಂದು ಅಪ್ಪಟ ಕನ್ನಡ ನಾಡಿನ ಮಧ್ಯದಲ್ಲಿತ್ತು. ಭಿಲ್ಲಮನು ಧಾರವಾಡ ಜಿಲ್ಲೆಯ ಉತ್ತರ ಭಾಗದವರೆಗೂ ತನ್ನ ಸಾಮ್ರಾಜ್ಯವನ್ನು ಬೆಳೆಸಿ ಬಿಜಾಪುರ ಜಿಲ್ಲೆಯ ತದವಲಗೆಯನ್ನು

ತನ್ನ ಒಂದು ಪ್ರಮುಖ ಕೇಂದ್ರವನ್ನಾಗಿಸಿಕೊಂಡಿದ್ದನು. ಭಿಲ್ಲಮನಿಗೆ ರಾಜಧಾನಿ ಸಿನ್ನಾರ್‌ದಿಂದ ದೂರದ ಕರ್ನಾಟಕದ ಪ್ರದೇಶಗಳನ್ನು ನೋಡಿಕೊಳ್ಳಲು ಕಷ್ಟವಾದ್ದರಿಂದ ಅವನು ತನ್ನ ಇಡೀ ಪ್ರದೇಶಗಳಿಗೆ ಮಧ್ಯವಾಗುವ ದೇವಗಿರಿ (ಇಂದಿನ ಔರಂಗಬಾದ್ ಜಿಲ್ಲೆಯ ದೌಲತಾಬಾದ್)ಯನ್ನು ಹೊಸ ರಾಜಧಾನಿ ಮಾಡಿಕೊಂಡನು. ಭಿಲ್ಲಮನ ನಂತರ ಅವನ ಮಗ ಒಂದನೇ ಜೈತುಗಿಯು ದೇವಗಿರಿಯಿಂದ ಆಳ್ವಿಕೆ ಮಾಡಿದನು.

ಸೇವುಣರು ತಮ್ಮ ಸುತ್ತಮುತ್ತಲಿನ ಅರಸರೊಂದಿಗೆ, ಸಾಮಂತರೊಂದಿಗೆ ಯುದ್ಧ ಮಾಡುತ್ತಲೇ ಕಾಲಕಳೆದರು. ಸೇವುಣರು ಒಬ್ಬರ ಮೇಲೆ ಹಿಡಿತ ಸಾಧಿಸುವಷ್ಟರಲ್ಲಿ ಮತ್ತೊಬ್ಬರು ಇವರ ವಿರುದ್ಧ ಯುದ್ಧಕ್ಕೆ, ಬಂಡಾಯಕ್ಕೆ ಅಣಿಯಾಗಿರುತ್ತಿದ್ದರು. ಇದು ಹೀಗೆಯೇ ಮುಂದುವರೆದು ರಾಮಚಂದ್ರನ ಕಾಲಕ್ಕೆ ಸೇವುಣರ ಸ್ಥಿತಿ ಹೇಳತೀರದಾಯಿತು. ಇಷ್ಟೊತ್ತಿಗಾಗಲೇ ಉತ್ತರ ಭಾರತದಲ್ಲಿ ಮುಸ್ಲಿಂ ಆಳ್ವಿಕೆ ಆರಂಭವಾಗಿ ದೆಹಲಿಯನ್ನು ಮುಸ್ಲಿಂ ಅರಸರು ತಮ್ಮ ಹಿಡಿತದಲ್ಲಿರಿಸಿಕೊಂಡಿದ್ದರು. ಕರಾ ಎಂಬ ಸಣ್ಣ ಪ್ರಾಂತವೊಂದರ ಮುಖ್ಯಸ್ಥನಾಗಿದ್ದು, ದೆಹಲಿಯ ಸುಲ್ತಾನನಾಗಬೇಕೆಂದು ಕನಸು ಕಾಣುತ್ತಿದ್ದ ಅಲ್ಲಾವುದ್ದೀನ್ ಖಿಲ್ಜಿಗೆ ಅಪಾರ ಸಂಪತ್ತಿನ ಅವಶ್ಯಕತೆ ಇತ್ತು. ಈ ಸಂಪತ್ತನ್ನು ಪಡೆಯಲು ಸಂಚು ಹಾಕುತ್ತಿದ್ದನು. ಅವನಿಗೆ ದಕ್ಷಿಣದ ಅರಸರಲ್ಲಿ ಅಪಾರವಾದ ಸಂಪತ್ತಿರುವುದೆಂದು ಗೊತ್ತಾಗಿ, ಅವರಲ್ಲಿಯು ದೇವಗಿರಿಯ ಸೇವುಣರ ಈ ಸಂಪತ್ತು ದೆಹಲಿಯ ಸುಲ್ತಾನನಾಗಲು ತನಗೆ ಸಹಾಯ ಮಾಡುತ್ತದೆಂದು ದೇವಗಿರಿಯ ಮೇಲೆ ದಾಳಿ ಮಾಡಿ ಸೇವುಣ ರಾಮಚಂದ್ರನನ್ನು ಮತ್ತು ಅವನ ಮಗ ೩ನೆಯ ಸಿಂಘಣನನ್ನು ಸೋಲಿಸಿ ದೇವಗಿರಿಯಿಂದ ಅಪಾರ ಸಂಪತ್ತನ್ನು ಕೊಳ್ಳೆ ಹೊಡೆದನು. ಇದು ಮುಸ್ಲಿಂ ಅರಸರ ಮೊದಲ ದಕ್ಷಿಣ ದಾಳಿಯಾಗಿತ್ತು. ಈ ದಾಳಿಯಿಂದ ದಕ್ಷಿಣದಲ್ಲಿ ಅಪಾರವಾದ ಸಂಪತ್ತಿರುವುದೆಂದು ಮುಸ್ಲಿಂ ಅರಸರಿಗೆ ಖಚಿತವಾಯಿತು. ಈ ದಾಳಿಯಲ್ಲಿ ಸಿಕ್ಕ ಸಂಪತ್ತಿನಿಂದ ಕ್ರಿ.ಶ. ೧೨೯೬ರಲ್ಲಿ ಅಲ್ಲಾವುದ್ದೀನ್ ಖಿಲ್ಜಿ ದೆಹಲಿಯ ಸಿಂಹಾಸನವೇರಿದ. ಅಲ್ಲಾವುದ್ದೀನ್ ಖಿಲ್ಜಿಗೆ ದೇವಗಿರಿಯ ಸಂಪತ್ತು ಮತ್ತೆ ಮತ್ತೆ ದಕ್ಷಿಣದ ಅರಸರ ಮೇಲೆ ದಾಳಿ ಮಾಡಲು ಪ್ರೇರೇಪಿಸಿತು. ಈ ಪ್ರೇರಣೆಯಿಂದಲೇ ಖಿಲ್ಜಿ ವಾರಂಗಲ್, ದೊರಸಮುದ್ರಗಳ ಮೇಲೆ ದಾಳಿ ಮಾಡಿ ದಕ್ಷಿಣದ ಅರಸರಲ್ಲಿನ ಅಪಾರವಾದ ಸಂಪತ್ತನ್ನು ತನ್ನದಾಗಿಸಿಕೊಂಡ.

ಈ ಮೊದಲು ನೋಡಿದಂತೆ ಕಲ್ಯಾಣಿ ಚಾಲುಕ್ಯರು ಅಧಿಕಾರ ಕಳೆದುಕೊಳ್ಳುವ ಹೊತ್ತಿಗೆ ಅನೇಕ ಸಣ್ಣಪುಟ್ಟ ಬಲಿಷ್ಠ ಅರಸು ಮನೆತನಗಳು ಸ್ವತಂತ್ರ ಆಳ್ವಿಕೆ ಪ್ರಾರಂಭಿಸಿದವು. ಈ ಸಣ್ಣಪುಟ್ಟ ಅರಸರು ಮೊದಲು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿದ್ದು ತದನಂತರ ತಮ್ಮ ತಮ್ಮ ರಾಜ್ಯಗಳನ್ನು ಸ್ಥಾಪಿಸಿ ಕೊಂಡರು. ಇವರಲ್ಲಿ ದಕ್ಷಿಣದ ಚೋಳರು, ಉತ್ತರದಲ್ಲಿ ಕಲಚೂರಿಗಳು ಈಶಾನ್ಯದಲ್ಲಿ ಕಾಕತೀಯರು ಮತ್ತು ದೇವಗಿರಿಯ ಸೇವುಣರು ಮುಖ್ಯರಾದವರು.

**೨.೨.೮. ವಾರಂಗಲ್ಲಿನ ಕಾಕತೀಯರು :**

ವಣ್ಣನು ಕಾಕತೀಯ ವಂಶವನ್ನು ಸ್ಥಾಪಿಸಿ ಕಾಕತೀಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಪ್ರಾರಂಭಿಸಿದನು. ಬೇತ ಈ ವಂಶದ ಮೂಲ ವ್ಯಕ್ತಿ. ಪಶ್ಚಿಮ ಚಾಲುಕ್ಯರ ಆಡಳಿತಕ್ಕೆ ಸೇರಿದ್ದ ತೆಲಂಗಾಣದಲ್ಲಿನ ಒಬ್ಬ ಸಾಮಾನ್ಯ ನಾಯಕನಾಗಿದ್ದು, ಪಶ್ಚಿಮ ಚಾಲುಕ್ಯರ ಕೈಕೆಳಗೆ ಕೆಲಸ ಮಾಡಿಕೊಂಡು ಪಶ್ಚಿಮ ಚಾಲುಕ್ಯರ ಪರವಾಗಿ ಚೋಳರನ್ನು ಯುದ್ಧದಲ್ಲಿ ಸೋಲಿಸಿದ್ದನು. ವಾರಂಗಲ್ ಜಿಲ್ಲೆ ಕೊರವಿ ಇವನ ಆಡಳಿತ ಕೇಂದ್ರವಾಗಿತ್ತು. ೨ನೆಯ ಪ್ರೋಲನು ಕಾಕತೀಯರಲ್ಲಿಯೇ ಅತೀ ಪ್ರಮುಖ ಅರಸ. ಪ್ರಾರಂಭದಲ್ಲಿ ಇವನೊಬ್ಬ ಸಾಮಾನ್ಯ ಮಾಂಡಲಿಕನಾಗಿದ್ದನು. ಮುಂದೆ ವಾರಂಗಲ್, ತೆಲಂಗಾಣ, ಕರಿಂನಗರಗಳ ಸಣ್ಣ ಪ್ರದೇಶದ ಅರಸನಾದನು. ಕಾಕತೀಯ ಒಂದನೆಯ ಬೇತ, ಒಂದನೆಯ ಪ್ರೋಲ, ೨ನೇ ಬೇತ, ದುರ್ಗರಾಜ ಮತ್ತು ೨ನೆಯ ಪ್ರೋಲರು ಕರ್ನಾಟಕದ ಮತ್ತು ಆಂಧ್ರಪ್ರದೇಶಗಳ ಭಾಗಗಳನ್ನು ತಮ್ಮ ಅಧೀನಕ್ಕೊಳಪಡಿಸಿಕೊಂಡಿದ್ದರು. ಕಾಕತೀಯರಲ್ಲಿಯೇ ಪ್ರಸಿದ್ಧನಾದ ರುದ್ರದೇವನ ನಂತರ ಗಣಪತಿದೇವ ಕಾಕತೀಯರ ವಂಶವನ್ನು ಮುಂದುವರೆಸಿಕೊಂಡು ಬಂದು ಸುಮಾರು ೬೩ ವರ್ಷಗಳ ಸುದೀರ್ಘ ಆಳ್ವಿಕೆಯಲ್ಲಿ ತೆಲುಗು ಮಾತನಾಡುವ ಜನರ ಸಮಸ್ತ ಪ್ರದೇಶವನ್ನು ಯುದ್ಧದಿಂದಲೋ, ರಾಜಕಾರಣ ಕೌಶಲ್ಯದಿಂದಲೋ ತನ್ನ ಆಳ್ವಿಕೆಗೊಳಪಡಿಸಿಕೊಂಡನು. ಕ್ರಿ.ಶ. ೧೨೮೯ರಿಂದ ಕ್ರಿ.ಶ. ೧೩೨೩ರವರೆಗೆ ಈ ವಂಶವನ್ನು ಪ್ರತಾಪ ರುದ್ರದೇವ ಆಳಿದನು. ಆಗಾಗ ಮುಸ್ಲಿಂ ಅರಸರಿಗೂ ಇವನಿಗೂ ಯುದ್ಧಗಳು ನಡೆಯುತ್ತಿದ್ದು, ಈತ ಸಮರ್ಥವಾಗಿ ಹಲವು ವರ್ಷಗಳವರೆಗೆ ಮುಸ್ಲಿಂ ದಾಳಿಗಳನ್ನು ತಡೆದನು. ಕೊನೆಗೆ ಮುಸ್ಲಿಂ ಶಕ್ತಿಗಳ ಒಗ್ಗಟ್ಟಿನ ಮುಂದೆ ಪ್ರತಾಪ ರುದ್ರದೇವ ಸೋತು ಹೋದನು.

ಕರ್ನಾಟಕ-ಆಂಧ್ರಗಳ ಮಟ್ಟಿಗೆ ೧೨-೧೩ನೇ ಶತಮಾನಗಳ ಕಾಲ ಜೈನ - ವೀರಶೈವ - ವೈಷ್ಣವ ಈ ಮೂರು ಮತಗಳ ಮುಪ್ಪರಿಯ ಮತೀಯ ಘರ್ಷಣೆಯ ಕಾಲ. ಜೈನ ಮತ ತನ್ನ ಅವನತಿಯ ಅವಸ್ಥೆಯನ್ನು ಕಾಣುತ್ತಿದ್ದರೆ, ವೈಷ್ಣವ ಮತ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹವಣಿಸುತ್ತಿತ್ತು. ಇವೆರಡಕ್ಕಿಂತಲೂ ತಾನೇ ಮೇಲೆಂದು ವೀರಶೈವ ಮತ, ಜೈನ, ವೈಷ್ಣವ ಮತಗಳಲ್ಲಿದ್ದ ಕಂದಾಚಾರ, ಅಸಮಾನತೆಗಳನ್ನು ತಿರಸ್ಕರಿಸಿ ಸಮಾನತೆಯ ಹೋರಾಟವನ್ನು ನೀಡಿ, ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳಲು ಸರ್ವಪ್ರಯತ್ನ ಮಾಡುತ್ತಿತ್ತು. ಜೈನ, ವೈಷ್ಣವ ಮತಗಳಿಗೆ ರಾಜಾಶ್ರಯ ದೊರಕದೆ ಅವನತಿಯ ಹಾದಿ ಹಿಡಿದಾಗ ಕರ್ನಾಟಕ-ಆಂಧ್ರಗಳ ಗಡಿಯಲ್ಲಿ ವೀರಶೈವ ಮತಕ್ಕೆ ಕಲಚೂರಿ (ಕರ್ನಾಟಕ) ಮತ್ತು ಕಾಕತೀಯ (ಆಂಧ್ರ)ರ ರಾಜಾಶ್ರಯ ಸಿಕ್ಕು ಅದು ಬೆಳೆಯಿತು.

**೨.೨.೯. ದೆಹಲಿ ಸುಲ್ತಾನರು, ಬಹಮನಿ ಅರಸರು :**

ಉತ್ತರದ ಮುಸ್ಲಿಂ ಅರಸರು ಇಲ್ಲಿನ ಸಂಪತ್ತು ಮತ್ತು ಮಣ್ಣಿನ ಫಲವತ್ತತೆಯನ್ನು ನೋಡಿ ಅದನ್ನೆಲ್ಲ ಕೊಳ್ಳೆ ಹೊಡೆಯುವ ಉದ್ದೇಶದಿಂದ ಇತ್ತ ದಾಳಿ ಮಾಡಿದರು. ಈ ದಾಳಿಗಳ ಭೀಕರತೆಯಿಂದ

ಸ್ಥಳೀಯ ಅರಸು ಮನೆತನಗಳ ಅಸ್ತಿತ್ವ ನುಚ್ಚುನೂರಾದವು. ಸಂಪತ್ತನ್ನು ಕೊಳ್ಳೆ ಹೊಡೆಯುವ ಉದ್ದೇಶ ದಿಂದ ಮೇಲಿಂದ ಮೇಲೆ ದಕ್ಷಿಣದತ್ತ ದಾಳಿಯಿಡುತ್ತಿದ್ದವರು, ಮುಂದೆ ಇಲ್ಲಿಯೇ ಮುಸ್ಲಿಂ ರಾಜ್ಯ ಸ್ಥಾಪನೆ ಮಾಡಿದರು. ೧೩ನೇ ಶತಮಾನದ ಪ್ರಾರಂಭದಲ್ಲಿ ದೆಹಲಿಯ ಅಲ್ಲಾವುದ್ದೀನ್ ಖಿಲ್ಜಿ, ಮಲ್ಲಿಕಾಫರ್ ಅನೇಕ ಬಾರಿ ಕನ್ನಡ ನಾಡನ್ನು ಕೊಳ್ಳೆ ಹೊಡೆದರು. ಇದು ಸಾಲದೆಂಬಂತೆ ಮಹಮ್ಮದ್ ಬಿನ್ ತೊಘಲಕನು ರಾಜಧಾನಿ ದೆಹಲಿಯನ್ನು ದೇವಗಿರಿಗೆ ವರ್ಗಾಯಿಸಿದನು. ಹೀಗೆ ಪ್ರಾರಂಭವಾದ ಮುಸ್ಲಿಂ ಅರಸರ ಕರ್ನಾಟಕ ಪ್ರವೇಶ ಉತ್ತರ ಕರ್ನಾಟಕದ ರಾಜಕೀಯ ಅಸ್ತಿತ್ವವನ್ನೇ ಹಾಳುಮಾಡಿತು. ಕ್ರಿ.ಶ. ೧೩೩೬ರಲ್ಲಿ ಹುಟ್ಟಿಕೊಂಡ ವಿಜಯನಗರ ಸಾಮ್ರಾಜ್ಯವು ಕನ್ನಡವನ್ನು, ಕನ್ನಡಿಗರನ್ನು ಈ ಸಂದರ್ಭದಲ್ಲಿ ಉಳಿಸಿ ಬೆಳೆಸಿತು ಎಂಬುದು ಸತ್ಯವಾದರೂ ಅದು ತುಂಗಭದ್ರಾ ನದಿಯ ಆಚೆಗೆ ಮಾತ್ರ ಸೀಮಿತಗೊಂಡಿತು. ತುಂಗಭದ್ರಾ ನದಿಯ ಈಚೀನ (ರಾಯಚೂರು, ಗುಲಬರ್ಗಾ, ಬೀದರ) ಪ್ರದೇಶವೆಲ್ಲ ಮುಸ್ಲಿಂ ಅರಸರ ಆಡಳಿತಕ್ಕೊಳಪಟ್ಟಿತು. ವಿಜಯನಗರ ಸಾಮ್ರಾಜ್ಯ ಒಂದೊಮ್ಮೆ ತುಂಗಭದ್ರಾ ನದಿಯ ದಕ್ಷಿಣದಲ್ಲಿ ಅಸ್ತಿತ್ವವನ್ನು ಪಡೆಯದೇ ಹೋಗಿದ್ದರೆ ಉತ್ತರದ ಮುಸ್ಲಿಂ ಅರಸರು ವಿಶಾಲ ಕನ್ನಡ ನಾಡಿನ ಜೊತೆಗೆ ಇಡೀ ದಕ್ಷಿಣದ (ತಮಿಳು, ಕೇರಳ) ಮೂಲ ರೂಪುರೇಷೆಗಳನ್ನೇ ಇಲ್ಲದಂತೆ ಮಾಡುತ್ತಿದ್ದರೇನೋ, ಮುಸ್ಲಿಂಮರು ಹೀಗೆ ದಕ್ಷಿಣದಲ್ಲಿ ತಮ್ಮ ಪ್ರಭುತ್ವವನ್ನು ಬಿಗಿಗೊಳಿಸುತ್ತಿರುವಾಗ ಉತ್ತರದ ರಾಜಕೀಯದಲ್ಲಿ ದೆಹಲಿಯ ಅರಸನ ವಿರುದ್ಧ ನಸಿರುದ್ದೀನ್ ಇಸ್ಮಾಯಿಲ್ ಎಂಬ ಅಧಿಕಾರಿಯ ಮುಖಂಡತ್ವದಲ್ಲಿ ಉಳಿದ ಅನೇಕ ಅಧಿಕಾರಿಗಳು ಸುಲ್ತಾನನ ವಿರುದ್ಧ ದಂಗೆ ಎದ್ದು ಸುಲ್ತಾನನ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿ ಇಸ್ಮಾಯಿಲ್ ಮುಲ್ಲನ ಕೈಕೆಳಗೆ ದಖ್ಖನ್ ಸ್ವತಂತ್ರ ರಾಜ್ಯವೆಂದು ಘೋಷಿಸಿ ಕೊಂಡರು. ಎಲ್ಲ ಅಧಿಕಾರಿಗಳು ಕೂಡಿ ದೇವಗಿರಿಯ (ದೌಲತಾಬಾದ್) ಸಂಪತ್ತನ್ನು, ಭೂಪ್ರದೇಶಗಳನ್ನು ಹಂಚಿಕೊಂಡರು. ಹೀಗೆ ಸಂಪತ್ತು ಮತ್ತು ಭೂಪ್ರದೇಶಗಳನ್ನು ಹಂಚಿಕೊಂಡ ಅಧಿಕಾರಿಗಳಲ್ಲಿ ಅಲ್ಲಾವುದ್ದೀನ್ ಹಸನ್ ಬಹುಮನಿ ತುಂಬಾ ಚುರುಕಾಗಿದ್ದನು. ಈತ ಮುಂದೆ ಉಳಿದೆಲ್ಲಾ ಅಧಿಕಾರಿಗಳನ್ನು ತನ್ನ ಕೈಕೆಳಗೆ ಮಾಡಿಕೊಂಡು ಕ್ರಿ.ಶ. ೧೩೪೭ರಲ್ಲಿ ಅಲ್ಲಾವುದ್ದೀನ್ ಹಸನ್ ಬಹುಮನ ಶಹಾ, 'ಬಹಮನಿ' ಸಾಮ್ರಾಜ್ಯವನ್ನು ಗುಲಬರ್ಗಾದಲ್ಲಿ ಸ್ಥಾಪಿಸಿದನು. ಅಲ್ಪಕಾಲದಲ್ಲಿಯೇ ರಾಜ್ಯ ವಿಸ್ತರಣೆ ಮಾಡಿ ಆಡಳಿತದ ದೃಷ್ಟಿಯಿಂದ ರಾಯಚೂರು ಮತ್ತು ಮುದ್ಗಲ್ ಸೇರಿದಂತೆ ಗುಲಬರ್ಗಾವನ್ನು ಪ್ರಧಾನಮಂತ್ರಿ ಸೈಫುದ್ದೀನ್ ಘೋರಿಗೆ ವಹಿಸಿದನು. ದೌಲತಾಬಾದಿನ ಉಸ್ತುವಾರಿಯನ್ನು ಸುಲ್ತಾನನ ಸೋದರಳಿಯ ಮಹಮ್ಮದನಿಗೆ ನೀಡಿದನು. ಬೀರಾರ್ ಪ್ರದೇಶವನ್ನು ಸಫ್ದರಖಾನ್ ಸಿಸ್ತನಿಯು ಮತ್ತು ತೆಲಂಗಾಣದ ಆಡಳಿತವನ್ನು ಸೈಫುದ್ದೀನನ ಮಗ ಹುಮಾಯೂನ್ ನೋಡಿಕೊಂಡನು.

ಮುಸ್ಲಿಂ ಅರಸರ ದಾಳಿಯನ್ನು ಸತತ ಎರಡು ಶತಮಾನಗಳಿಗೂ ಅಧಿಕ ಕಾಲ ತಡೆಹಿಡಿದ ವಿಜಯನಗರ ಸಾಮ್ರಾಜ್ಯ ಹೆಚ್ಚು ಕಡಿಮೆ ತನ್ನ ಜೊತೆ ಜೊತೆಯಲ್ಲಿಯೇ ಹುಟ್ಟಿದ ಬಹಮನಿ ಸಾಮ್ರಾಜ್ಯದ ಜೊತೆಗೆ ಕಾದಾಡುತ್ತಲೇ ತನ್ನ ಅವನತಿಯನ್ನು ಕಂಡಿತು. ವಿಜಯನಗರ ಸಾಮ್ರಾಜ್ಯವನ್ನು ಸೋಲಿಸಿದ

ಸಂದರ್ಭದ ಹೊತ್ತಿಗೆ ಉತ್ತರದಲ್ಲಿ ಕ್ರಿ.ಶ. ೧೭೦೭ರಲ್ಲಿ ಔರಂಗಜೇಬನು ಮರಣ ಹೊಂದಿ ಮೊಗಲ್ ಸಾಮ್ರಾಜ್ಯವೂ ಅವನತಿಯತ್ತ ಸಾಗಿತ್ತು. ವಿಜಯನಗರವನ್ನು ಸೋಲಿಸಿದ ಬಹಮನಿ ಸಾಮ್ರಾಜ್ಯ ಈಗಾಗಲೇ ದಕ್ಷಿಣದಲ್ಲಿ ಐದು ಶಾಹಿ ಮನೆತನಗಳಾಗಿ ಒಡೆದು ಹೋಗಿ, ನಿಜಾಮಶಾಹಿ (ಗೋಲ್ಕಂಡ) ಮನೆತನ ಹೈದರಾಬಾದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಸಫಶಾಹಿ ನಿಜಾಮಶಾಹಿ ಎಂಬ ಹೆಸರಿನೊಂದಿಗೆ ಆಳ್ವಿಕೆ ಪ್ರಾರಂಭಿಸಿತು.

**೨.೨.೧೦. ಹೈದರಾಬಾದ್ ನಿಜಾಂ ಅರಸರು :**

ಹೈದರಾಬಾದ್ ಸಂಸ್ಥಾನದಲ್ಲಿ ಮಹಾರಾಷ್ಟ್ರದ ಐದು. ಕರ್ನಾಟಕದ ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ ಮತ್ತು ಆಂಧ್ರದ ಮೆಹಬೂಬನಗರ, ವಾರಂಗಲ್, ಕರೀಂನಗರ, ಮೇದಕ್, ನಿಜಾಮಬಾದ್, ನಲಗೊಂಡ, ಆದಿಲಾಬಾದ್, ಆತರಾಫಬಲ್ದಾ ಹೀಗೆ ಮರಾಠವಾಡದ ೫, ಕರ್ನಾಟಕದ ೪ ಮತ್ತು ತೆಲಂಗಾಣದ ೮, ಒಟ್ಟು ೧೭ ಜಿಲ್ಲೆಗಳನ್ನು ಒಳಗೊಂಡಿತ್ತು. ಕ್ರಿ.ಶ. ೧೭೨೪ ರಿಂದ ಕ್ರಿ.ಶ. ೧೯೪೮ರ ಸುಮಾರು ಎರಡು ಶತಮಾನಗಳ ಕಾಲ ಹೈದರಾಬಾದಿನ ನಿಜಾಂ ಸಂಸ್ಥಾನವನ್ನು

| | | |
|---|---|---|
| ೧. | ಮೀರ್ ಕಮರುದ್ದೀನ್ ಕಿಲ್ಚಿಚ್ ಖಾನ್ | - ಕ್ರಿ.ಶ. ೧೭೨೪-೧೭೪೮ |
| ೨. | ನವಾಬ ನಿಜಾಂ ಅಲಿಖಾನ್ | - ಕ್ರಿ.ಶ. ೧೭೬೧-೧೮೦೩ |
| ೩. | ನವಾಬ ಸಿಕಂದರ್ ಬಹದ್ದೂರ್ | - ಕ್ರಿ.ಶ. ೧೮೦೩-೧೮೨೮ |
| ೪. | ನಾಜಿರುದ್ ದೌಲಬಹದ್ದೂರ್ | - ಕ್ರಿ.ಶ. ೧೮೨೯-೧೮೫೭ |
| ೫. | ಆಫ್ ಜಾಲೂದ್ದೀನ್ ದೌಲಬಹದ್ದೂರ | - ಕ್ರಿ.ಶ. ೧೮೫೭-೧೮೬೯ |
| ೬. | ಮೀರ್ ಮಹಬೂಬ್, ಅಲಿಖಾನ್ ಬಹದ್ದೂರ | - ಕ್ರಿ.ಶ. ೧೮೬೯-೧೯೧೧ |
| ೭. | ನವಾಬ ಮೀರ್ ಉಸ್ಮಾನ್ ಅಲಿಖಾನ್ | - ಕ್ರಿ.ಶ. ೧೯೧೧-೧೯೪೮ |

ಈ ಏಳು ನವಾಬರು ಆಳಿದರು. ನಿಜಾಂ ಅರಸರು ಸೈನ್ಯ, ನಾಣ್ಯ, ಸಾರಿಗೆ, ರೈಲ್ವೆ, ಅಂಚೆ, ಆಕಾಶವಾಣಿ ಮತ್ತು ಶಿಕ್ಷಣ ರಂಗಗಳಲ್ಲಿ ತಮ್ಮದೇ ಆದ ಆಧುನಿಕ ಸ್ವತಂತ್ರ ಸೇವೆಗಳನ್ನು ಜಾರಿಯಲ್ಲಿ ತಂದಿದ್ದರು. ಒಂದು ಕಡೆ ಅಭಿವೃದ್ಧಿ ಕೆಲಸಗಳಲ್ಲಿ ತೊಡಗಿಕೊಂಡ ನಿಜಾಂ ಅರಸರು ಕೊನೆಯ ನವಾಬ ಮೀರ್ ಉಸ್ಮಾನ್ ಅಲಿಖಾನ್‌ನ (ಕ್ರಿ.ಶ. ೧೯೧೧-೧೯೪೮) ಆಡಳಿತದ ಸಂದರ್ಭದಲ್ಲಿ ಇವನು ತೋರಿದ ಸರ್ವಾಧಿಕಾರ ಮನೋಭಾವದಿಂದಾಗಿ ಹೈದರಾಬಾದ್ ಸಂಸ್ಥಾನದಲ್ಲಿನ ಪ್ರಜೆಗಳು ರಾಜಕೀಯ ಸಭೆಗಳನ್ನು ಮಾಡುವಂತಿರಲಿಲ್ಲ. ಜನಸಾಮಾನ್ಯರು ಧಾರ್ಮಿಕ ಸ್ವಾತಂತ್ರ್ಯ ಮೊಟಕುಗೊಳಿಸಲಾಗಿತ್ತು. 'ಅಲ್ಲಾ ಹಜರತನ ವಿಶೇಷಾಧಿಕಾರ ಮಾತ್ರ ಪ್ರಜೆಗಳನ್ನು ರಕ್ಷಿಸುತ್ತದೆ' ಎಂದು ನಿಜಾಮ ಆಗಾಗ ಸ್ಪಷ್ಟಪಡಿಸುತ್ತಿದ್ದನು. ಶೇ. ೮೬ ಪ್ರಜೆಗಳು ಹಿಂದೂಗಳಾಗಿದ್ದರೂ ಸರಕಾರಿ ನೇಮಕಾತಿಯಲ್ಲಿ ಅವರಿಗೆ ದೊರೆತದ್ದು ಕೇವಲ ಶೇ. ೧೦ ಹುದ್ದೆಗಳು. ರಾಜ್ಯದ ಜನಸಂಖ್ಯೆಯ ಶೇ. ೧೨ರಷ್ಟು ಮುಸ್ಲಿಂರಿದ್ದರು

ನೇಮಕಾತಿಗಳಲ್ಲಿ ಅವರಿಗೆ ಮೀಸಲಿಟ್ಟ ಹುದ್ದೆಗಳ ಸಂಖ್ಯೆ ಪ್ರತಿಶತ ೮೦ರಷ್ಟು. ಶೈಕ್ಷಣಿಕವಾಗಿಯೂ ಇಲ್ಲಿನ ಜನರು ಬಹಳ ಹಿಂದುಳಿದಿದ್ದರು. ಕನ್ನಡ ಮಾತನಾಡುವ ಪ್ರದೇಶಗಳಲ್ಲಿ ಕ್ರಿ.ಶ. ೧೯೩೯ರಲ್ಲಿ 'ಮುಕ್ತಾಬ್' ಎಂಬುದು ಮಾತ್ರ ಉನ್ನತ ಶಾಲೆಯಾಗಿತ್ತು. ಶಿಕ್ಷಣದಲ್ಲಿ ಖಾಸಗಿ ಉದ್ಯಮವು ನಿಷೇಧಿಸಲ್ಪಟ್ಟಿತ್ತು. ರಾಷ್ಟ್ರೀಯ ಶಾಲೆಗಳಿಗೆ ನಿಜಾಂ ಸರಕಾರ ಮಾನ್ಯತೆ ನೀಡಿರಲಿಲ್ಲ. ಹೈದರಾಬಾದ್ ಸಂಸ್ಥಾನದಲ್ಲಿ ಬಹುಸಂಖ್ಯಾತ ಹಿಂದೂಗಳು ಮಾತನಾಡುವ ಕನ್ನಡ ಮತ್ತು ತೆಲುಗು ಭಾಷೆಗಳು ಕೇವಲ ಮೌಖಿಕ ಭಾಷೆಗಳಾಗಿ ಪರಿವರ್ತನೆಗೊಂಡಿದ್ದವು. ಉರ್ದು ಭಾಷೆ ಆಡಳಿತ ಭಾಷೆಯಾಗಿತ್ತು. ಇದಕ್ಕೆ ಸಾಲದೆಂಬಂತೆ ಕ್ರಿ.ಶ. ೧೯೧೭ರಲ್ಲಿ ಪ್ರಾರಂಭವಾದ ಉಸ್ಮಾನಿಯಾ ವಿಶ್ವವಿದ್ಯಾಲಯ ಹಿಂದೂಗಳ ಸಂಸ್ಕೃತಿಯನ್ನು ದೂರೀಕರಿಸುವ ಕಾರ್ಯ ಮಾಡಿತು. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಹೈದರಾಬಾದ್ ಸಂಸ್ಥಾನದ ಜನತೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಪರಿಜ್ಞಾನ ಹಾಗೂ ಸೌಲಭ್ಯಗಳಿಂದ ವಂಚಿತರಾಗಿ ನಿಜಾಂನ ದಾಸ್ಯದಲ್ಲಿ ನರಳುತ್ತಿದ್ದರು ಎಂಬುದು ಗೊತ್ತಾಗುತ್ತದೆ.

ನಿಜಾಂ ಅರಸನು ಧಾರ್ಮಿಕವಾಗಿ ಬಹುಸಂಖ್ಯಾತ ಹಿಂದೂಗಳಿಗೆ ಕ್ರೂರಿಯಾಗಿದ್ದನಲ್ಲದೇ ತನ್ನನ್ನು ವಿರೋಧಿಸುತ್ತಿದ್ದ ಮುಸ್ಲಿಂರನ್ನು ಶತ್ರುಗಳಂತೆ ಕಾಣುತ್ತಿದ್ದನು. ಇದಕ್ಕೆ ಸೂಕ್ತ ಉದಾಹರಣೆ ಎಂದರೆ ನಾಗರೀಕರ ಮೂಲಹಕ್ಕುಗಳಾದ ವಾಕ್ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ರಾಜಕೀಯ ಸಮಾವೇಶ, ಸಮಿತಿಗಳ ರಚನೆ ಮತ್ತು ಪತ್ರಿಕಾ ಸ್ವಾತಂತ್ರ್ಯಗಳಂತಹವು ನಿಜಾಂನಿಂದ ತಿರಸ್ಕರಿಸಲ್ಪಟ್ಟಾಗ, ಸ್ವಾತಂತ್ರ್ಯದ ಪರಿಕಲ್ಪನೆ, ಜಮೀನ್ದಾರಿ ಪದ್ಧತಿಯ ದೋಷಗಳು, ರಜಾಕಾರರ ದಬ್ಬಾಳಿಕೆ ಮತ್ತು ತೆಲಂಗಾಣದ ಸಮತಾವಾದಿಗಳ ಸಿದ್ಧಾಂತಗಳ ಬಗ್ಗೆ ಸಂಪಾದಕೀಯ ಲೇಖನಗಳನ್ನು ಬರೆದ 'ಇಬ್ರಾಹಿಂ ರೋಜಾ' ಉರ್ದು ಪತ್ರಿಕೆಯ ಸಂಪಾದಕ ಮತ್ತು ಉತ್ಸಾಹಿ ಮುಸ್ಲಿಂ, ರಾಷ್ಟ್ರೀಯವಾದಿಯಾಗಿದ್ದ ಶೋಯಬುಲ್ಲಾ ಖಾನ್‌ರನ್ನು ೨೧.೮.೪೮ರಂದು ನಿಜಾಂನ ರಜಾಕಾರರು ಗುಂಡಿಕ್ಕಿ ಕೊಂದರು. ಸಮಾನತೆ ಮತ್ತು ಸ್ವಾತಂತ್ರ್ಯತೆಯ ತತ್ವಗಳನ್ನು ಕುರಿತು ಬರೆದ ಪತ್ರಿಕೆಗಳನ್ನು ಮತೀಯ ಪತ್ರಿಕೆಗಳೆಂದು ಪರಿಗಣಿಸಿ ಅವುಗಳನ್ನು ನಿಜಾಂ ಬಹಿಷ್ಕರಿಸಿದನು. ಇಲ್ಲಿ ಗಮನಿಸಬೇಕಾದದ್ದು, ನಿಜಾಂ ಅರಸ ತನ್ನ ಆಡಳಿತ ಮತ್ತು ತನ್ನ ಪ್ರಭುತ್ವವನ್ನು ಪ್ರಶ್ನಿಸುವ ಬಹುಸಂಖ್ಯಾತ ಹಿಂದೂಗಳೇ ಆಗಿರಲಿ ಅಥವಾ ಅಲ್ಪಸಂಖ್ಯಾತ ಮುಸ್ಲಿಂಮರೇ ಆಗಿರಲಿ ಅವರನ್ನು ಸಹಿಸುತ್ತಿರಲಿಲ್ಲ. ನಿಜಾಂನಿಗೆ ಇಸ್ಲಾಂ ಧರ್ಮದ ಜೊತೆಗೆ ಪ್ರಭುತ್ವವು ಮುಖ್ಯವಾಗಿತ್ತು ಎಂಬುದು ಇದರಿಂದ ಗೊತ್ತಾಗುತ್ತದೆ.

ಇಡೀ ರಾಷ್ಟ್ರ ಒಂದು ಕಡೆ ನೇರವಾಗಿ ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯಲು ಹೋರಾಟ ನಡೆಸುತ್ತಿದ್ದರೆ ಕರ್ನಾಟಕ-ಆಂಧ್ರದಲ್ಲಿನ ಜನ ಒಂದೇ ಸಂದರ್ಭದಲ್ಲಿ ರಾಷ್ಟ್ರಮಟ್ಟದಲ್ಲಿ ಬ್ರಿಟಿಷರ ವಿರುದ್ಧ, ಸಂಸ್ಥಾನಗಳ ಮಟ್ಟದಲ್ಲಿ ಆಳುತ್ತಿದ್ದ ನಿಜಾಂನ ವಿರುದ್ಧ ಮತ್ತು ಸಂಸ್ಥಾನದೊಳಗಿನ ಚಿಕ್ಕ-ಪುಟ್ಟ ಜಹಾಂಗೀರದಾರ, ದೇಶಮುಖ, ರೆಡ್ಡಿಗಳ ವಿರುದ್ಧ ಹೋರಾಡಿದರು. ಈ ಹೋರಾಟದಲ್ಲಿ ಇಲ್ಲಿನ ಜನರು ಅನುಸರಿಸಿದ್ದು ಎರಡು ರೀತಿಯ ಮಾರ್ಗಗಳನ್ನು, ಇಡೀ ರಾಷ್ಟ್ರ ಗಾಂಧಿಜೀಯವರ ಮಾತಿನಂತೆ ಅಹಿಂಸೆ, ಶಾಂತಿಯ ಮಂದಗಾಮಿಯ ನೀತಿಯನ್ನು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನುಸರಿಸಿದರೆ, ಈ ಮಂದಗಾಮಿ ನೀತಿಗೆ

ವಿರುದ್ಧವಾಗಿ ತೀವ್ರಗಾಮಿ ಧೋರಣೆಯನ್ನು ಕರ್ನಾಟಕ-ಆಂಧ್ರದಲ್ಲಿನ ಜನರು ನಿಜಾಂನ ವಿರುದ್ಧ ಅನುಸರಿಸಿ ಯಶಸ್ಸು ಪಡೆದುಕೊಂಡರು. ಇಡೀ ರಾಷ್ಟ್ರವು ಶಾಂತಿಯಿಂದ, ಅಹಿಂಸೆಯಿಂದ ಸ್ವಾತಂತ್ರ್ಯ ಪಡೆಯಲು ಮುಂದಾಗಿದ್ದಾಗ ಇಲ್ಲಿ ಕ್ರಾಂತಿಕಾರರು ರಕ್ತಕ್ರಾಂತಿಯ ಮಾರ್ಗ ಹಿಡಿಯಬೇಕೆಂದರೆ ನಿಜಾಂ ಅರಸರಿಂದ, ರಜಾಕಾರರಿಂದ ಇಲ್ಲಿನ ಜನ ಎಷ್ಟು ರೋಸಿ ಹೋಗಿದ್ದರು ಎಂಬುದು ಮನವರಿಕೆ ಯಾಗುತ್ತದೆ. ಇಡೀ ರಾಷ್ಟ್ರ ಸ್ವಾತಂತ್ರ್ಯ ಪಡೆದ ಒಂದು ವರ್ಷದ ಬಳಿಕ ಹೈದರಾಬಾದ್-ಕರ್ನಾಟಕ ರಕ್ತಕ್ರಾಂತಿಯ ಮೂಲಕ ಸ್ವತಂತ್ರವನ್ನು ಪಡೆದುಕೊಂಡಿತು. ಈ ಹೈದರಾಬಾದ್-ಕರ್ನಾಟಕದ ರಕ್ತಕ್ರಾಂತಿಯ ಹೋರಾಟ 'ಸ್ವತಂತ್ರ ಭಾರತದ ಮೊಟ್ಟಮೊದಲ ರಕ್ತಕ್ರಾಂತಿ ಹೋರಾಟ'ವಾಗಿ ಚರಿತ್ರೆಯಲ್ಲಿ ದಾಖಲಾಗ ಬೇಕಾಗಿದೆ.

ಈ ಎಲ್ಲ ಚಾರಿತ್ರಿಕ ಸಂಗತಿಗಳನ್ನು ಕರ್ನಾಟಕ-ಆಂಧ್ರ ಗಡಿಗ್ರಾಮಗಳಿಗೆ ಸಂಬಂಧಿಸಿದಂತೆ ಗಮನಿಸು ವುದಾದರೆ ಈ ಕೆಳಕಂಡ ಅಂಶಗಳು ಕಂಡು ಬರುತ್ತವೆ.

೧. ಕರ್ನಾಟಕ-ಆಂಧ್ರದ ಈ ಗಡಿ ಭಾಗ ಶಾತವಾಹನರ ಆಳ್ವಿಕೆಯ ಕಾಲಕ್ಕೆ ಪ್ರಾಮುಖ್ಯತೆಯನ್ನು ಪಡೆದಿತ್ತು. ಪುರಾಣಗಳಲ್ಲಿ ಹೇಳುವಂತೆ ಶಾತವಾಹನರ ಮೂಲ ಆಂಧ್ರ ಜಾತಿಗೆ ಸೇರಿದ್ದಾಗಿದೆ. ಇವರ ಆಳ್ವಿಕೆಗೆ ಒಳಪಟ್ಟ 'ಶಾತವಾಹನ ನಿಹಾರ', 'ಶಾತವಾಹನ ರಾಷ್ಟ್ರ'ದಲ್ಲಿ ಗುಲಬರ್ಗಾ ಜಿಲ್ಲೆಯ ಸನ್ನತಿ ವಿಲೀನವಾಗಿತ್ತು. "ಕರ್ನಾಟಕದ ಉತ್ತರ ಕರ್ನಾಟಕ ಭಾಗದಲ್ಲಿ ಇವರ ಒಂದು ರಾಜಧಾನಿ ಸ್ಥಾಪಿತವಾದಲ್ಲಿ ಅದು ಗುಲಬರ್ಗಾ ಜಿಲ್ಲೆ ಸನ್ನತಿಯಲ್ಲೆ."[೪] ಈ ಮಾತನ್ನು ಗಮನಿಸು ವುದಾದರೆ ಇಲ್ಲೆಲ್ಲ ಶಾತವಾಹನರು ಆಡಳಿತ ನಡೆಸಿದ್ದು ಗೊತ್ತಾಗುತ್ತದೆ. ಇವರ ಕಾಲಕ್ಕಾಗಲೇ 'ಆಂಧ್ರ-ಕರ್ನಾಟಕ'ದ ಸಂಬಂಧ ಬೆಸೆದುಕೊಂಡಿರುವುದು ಖಚಿತವಾಗುತ್ತದೆ.

೨. ಬನವಾಸಿಯನ್ನು ರಾಜಧಾನಿಯಾಗಿರಿಸಿಕೊಂಡ ಕನ್ನಡಿಗರ ಮೊಟ್ಟಮೊದಲ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ ಕದಂಬರು, ಈ ಕರ್ನಾಟಕ - ಆಂಧ್ರದ ಪ್ರದೇಶಗಳಿಗೆ ಮಹತ್ವ ಕೊಡಲಿಲ್ಲ. "ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಕದಂಬರು ಶಿವಮೊಗ್ಗ, ಉತ್ತರ ಕನ್ನಡ ಜಿಲ್ಲೆ, ಧಾರವಾಡ, ಬೆಳಗಾವಿ, ಚಿತ್ರದುರ್ಗ, ಬಳ್ಳಾರಿ ಜಿಲ್ಲೆ ಮತ್ತು ಸುತ್ತಮುತ್ತಣ ಪ್ರದೇಶಗಳನ್ನು ಆಳಿದರು."[೫] ಇಲ್ಲಿ ಕಂಡು ಬರುವ ಮುಖ್ಯ ಅಂಶವೆಂದರೆ ಸ್ವತಂತ್ರ ಕನ್ನಡ ರಾಜ್ಯದಿಂದ ಮೊದಲ ಬಾರಿಗೆ ಈ ಪ್ರದೇಶ ಹೊರಗುಳಿದದ್ದು, ಅಂತಲೇ ಕದಂಬರ ಸ್ಮಾರಕಗಳು, ಶಾಸನಗಳು, ಪ್ರಾಚ್ಯ ವಸ್ತುಗಳು ಮತ್ತು ಆ ಕಾಲದ ಸಾಹಿತ್ಯಿಕ ಕೃತಿಗಳು ಇಲ್ಲಿ ಕಾಣಸಿಗುವುದಿಲ್ಲ.

೩. ಬಾದಾಮಿ ಚಾಲುಕ್ಯರ ಆಳ್ವಿಕೆ ಪ್ರಾರಂಭವಾದ ಮೇಲೆ ಅವರ ವಿಶಾಲ ದೃಷ್ಟಿಕೋನದಿಂದ ಈ ಪ್ರದೇಶ ಕನ್ನಡ ನಾಡಿನಲ್ಲಿ ವಿಲೀನವಾಯಿತು. ಚಾಲುಕ್ಯರು ಮೊಟ್ಟಮೊದಲ ಬಾರಿಗೆ ಈ ಪ್ರದೇಶ ವನ್ನೊಳಗೊಂಡಂತೆ ವಿಸ್ತಾರ, ಸಮೃದ್ಧ ಕನ್ನಡ ನಾಡನ್ನು ಕಟ್ಟಿದರು.

೪. ಬಾದಾಮಿ ಚಾಲುಕ್ಯರ ಅಧಿಕಾರಿಯಾಗಿದ್ದ ದಂತಿದುರ್ಗನು ಬಾದಾಮಿ ಚಾಲುಕ್ಯರ ಆಳ್ವಿಕೆಯನ್ನು ಧಿಕ್ಕರಿಸಿ ಮಳಖೇಡವನ್ನು ರಾಜಧಾನಿಯಾಗಿ ಮಾಡಿಕೊಂಡು ರಾಷ್ಟ್ರಕೂಟರ ಮಹಾಸಾಮ್ರಾಜ್ಯವನ್ನು

ಕಟ್ಟಿದನು. ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಶ್ರೀವಿಜಯನು ಕನ್ನಡ ನಾಡಿನ, ಕನ್ನಡಿಗರ ವರ್ಣನೆಗಳನ್ನು ತನ್ನ 'ಕವಿರಾಜಮಾರ್ಗ' ಕೃತಿಯಲ್ಲಿ ಉಲ್ಲೇಖಿಸುತ್ತಾನೆ. ಅಲ್ಲದೇ ಜಿನಸೇನ, ಮಹಾವೀರಚಾರ್ಯ, ಶಕಟಾಯನ, ಜೋತಿಷ ಗೋತಿಯಭಟ್ಟ ಇವರೆಲ್ಲ ಮಳಖೇಡದಲ್ಲಿದ್ದರು. ಇವರ ಆಳ್ವಿಕೆಯಲ್ಲಿ ಈ ಭಾಗ ನಿಜವಾಗಿ ವಿಶಾಲ ಕನ್ನಡ ನಾಡಿನಲ್ಲಿ ಸಾಂಸ್ಕೃತಿಕ, ಚಾರಿತ್ರಿಕ ಮಹತ್ವವನ್ನು ಪಡೆದು ಕೊಂಡಿತು. ಇದಕ್ಕೆ ಇಲ್ಲಿನ ಶಾಸನಗಳು, ಸ್ಮಾರಕಗಳು, ಸಾಹಿತ್ಯ ಕೃತಿಗಳು ಆಧಾರ ನೀಡುತ್ತವೆ.

೫. ಕಲ್ಯಾಣಿ ಚಾಲುಕ್ಯರ ಮತ್ತು ಕಲಚೂರಿಗಳ ಕಾಲವನ್ನು ಗಮನಿಸಿದಾಗ, ನಮಗೆ ಆಗ ನಡೆದ ವಚನ ಚಳುವಳಿ ಮುಖ್ಯವಾಗುತ್ತದೆ. ಸಾಮಾನ್ಯ ಜನರನ್ನು ಗಮನದಲ್ಲಿರಿಸಿಕೊಂಡ ಈ ಚಳುವಳಿ ಜನರ ಮನಸ್ಸನ್ನು ಮುಟ್ಟಲು ವಚನ ಸಾಹಿತ್ಯವೆಂಬ ಒಂದು ಬಗೆಯ ಸರಳ ಸಾಹಿತ್ಯದ ಮಾರ್ಗ ಹಿಡಿಯಿತು. ಬಸವೇಶ್ವರನ ನೇತೃತ್ವದಲ್ಲಿ ನಡೆದ ಈ ಚಳುವಳಿ ಧಾರ್ಮಿಕ, ಆರ್ಥಿಕ, ಸಾಮಾಜಿಕ ಬಗೆಗಳಲ್ಲಿ ಸಮತಾವಾದವನ್ನು ಕಂಡುಕೊಳ್ಳುವಲ್ಲಿ ವಿಫಲವಾಯಿತಾದರೂ ಮುಂದೆ ತತ್ವಪದಕಾರರು ಈ ಶರಣ ಸಂಸ್ಕೃತಿಯನ್ನು ಮುಂದುವರೆಸಿಕೊಂಡು ಬಂದದ್ದು ಇಲ್ಲಿ ಗಮನಿಸಬೇಕು.

೬. ಸೇವುಣರ ಆಳ್ವಿಕೆಯಲ್ಲಿ ನಮಗೆ ಮೊದಲ ಬಾರಿಗೆ ಕನ್ನಡ ಮತ್ತು ಕನ್ನಡ ಆಳರಸರ ಪ್ರಶ್ನೆ ಉದ್ಭವವಾಗುತ್ತದೆ. ಆದರೆ ಸೇವುಣರು ಕನ್ನಡಿಗರೋ ಇಲ್ಲವೇ ಮರಾಠಿಗರೋ ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ. ಸಿಂದಿನೇರ (ಮಹಾರಾಷ್ಟ್ರ ರಾಜ್ಯದ ನಾಸಿಕ ಜಿಲ್ಲೆಯ ಸಿನ್ನಾರ) ಸೇವುಣರ ರಾಜಧಾನಿಯಾಗಿತ್ತು. ಇಂದಿಗೂ ಇವರ ಒಂದು ವಂಶ ಅಲ್ಲಿದೆ. ಅವರನ್ನು ಒಂದು 'ದೇಶೀಯ ಮರಾಠ ಸಂಗಡ' ಎಂಬುದಾಗಿ ಅಲ್ಲಿನ ಸ್ಥಳೀಯರು ಇವರನ್ನು ಗುರುತಿಸಿ, ಸೇವುಣರು ಮರಾಠಿಗ ರೆಂದು ವಾದಿಸುತ್ತಾರೆ. ಆದರೆ ಕೆಲವು ಅಂಶಗಳ ಮೇಲೆ ಬೆಳಕು ಚೆಲ್ಲುವುದಾದರೆ ಸೇವುಣರ ರಾಜಧಾನಿ ಸಿಂದಿನೇರ ಚಾಲುಕ್ಯರ ಕಾಲಕ್ಕೆ ಅಪ್ಪಟ ಕನ್ನಡ ನಾಡಿನ ಮಧ್ಯದಲ್ಲಿತ್ತು. ಈ ವಂಶದ ಧಾಡಿಯಪ್ಪ, ಲಚ್ಚೆಯವ್ವ, ರಾಜುಗಿ, ವೇಸುಗಿ, ಭಿಲ್ಲಮ ಈ ಅರಸರ ಹೆಸರುಗಳು ಭಾಷಿಕವಾಗಿ ಮತ್ತು ಸಾಹಿತ್ಯಿಕವಾಗಿ ಕನ್ನಡದೊಂದಿಗೆ ಸಂಬಂಧವಿರಿಸಿಕೊಂಡಿವೆ. ಅಲ್ಲದೆ ಚಾಲುಕ್ಯರ, ರಾಷ್ಟ್ರಕೂಟರ ಜೊತೆಗೆ ಇವರು ವೈವಾಹಿಕ ಸಂಬಂಧಗಳನ್ನು ಬೆಸೆದುಕೊಂಡಿರುವುದು ಗೊತ್ತಾಗುತ್ತದೆ. ಸೇವುಣರು ತಮ್ಮನ್ನು 'ಕುಂತಲ ದೇಶದ ಪ್ರಭುಗಳು' ಎಂದು ಹೇಳಿಕೊಂಡಿರುವುದರ ಜೊತೆಗೆ 'ಕರ್ನಾಟಕ ರಾಯ ವಂಶಾಭಿರಾಮ' ಎಂಬ ಬಿರುದನ್ನು ಧರಿಸಿಕೊಂಡಿದ್ದರು. ಇವರ ಹೆಚ್ಚಿನ ಶಾಸನಗಳು ಕನ್ನಡದಲ್ಲಿಯೇ ಸಿಕ್ಕಿವೆ. ಈ ಎಲ್ಲ ಅಂಶಗಳನ್ನು ಗಮನಿಸಿ ನಾವು ಇಷ್ಟೊತ್ತಿಗಾಗಲೇ ಸೇವುಣರು ಕನ್ನಡಿಗರೆಂದು ಘೋಷಿಸಿಕೊಂಡಿದ್ದರೆ, ಇಂದು ಮರಾಠಿಗರೊಂದಿಗಿನ ದ್ವಂದ್ವಗಳು ಇರುತ್ತಿರಲಿಲ್ಲ. ಇಂತಹ ಚಾರಿತ್ರಿಕ ಸಮಸ್ಯೆಗಳು ಕರ್ನಾಟಕ-ಆಂಧ್ರದ ಗಡಿಗಳಲ್ಲಿಯು ಕಂಡು ಬರುತ್ತವೆ. ಇವುಗಳನ್ನು ಬಗೆಹರಿಸಿಕೊಳ್ಳದಿದ್ದರೆ ಇಲ್ಲಿನ ಕನ್ನಡಿಗರ ಸಾಂಸ್ಕೃತಿಕತೆಯ ಮೇಲೆ ತೆಲುಗರು ಹರಿಹಾಯಬಹುದು.

೭. ೧೩ನೇ ಶತಮಾನದಲ್ಲಿ ವಾರಂಗಲ್ಲಿನ ಕಾಕತೀಯರು ಈ ಪ್ರದೇಶಗಳನ್ನು ತಮ್ಮ ಹಿಡಿತಕ್ಕೆ ತಂದುಕೊಂಡರು. ವೀರಶೈವ ಧರ್ಮಕ್ಕೆ ಕಾಕತೀಯರ ರಾಜಾಶ್ರಯ ಸಿಕ್ಕು ಅದು ಉಚ್ಛ್ರಾಯ ಸ್ಥಿತಿ ತಲುಪಿತು. ಅಂದಿನಿಂದಲೇ ಈ ಗಡಿಭಾಗದ ಕನ್ನಡಿಗ-ತೆಲುಗರಾದಿಯಾಗಿ ವೀರಶೈವರೆಲ್ಲರೂ ಒಂದು ಧಾರ್ಮಿಕ ಸಂವಿಧಾನವನ್ನು ರಚಿಸಿಕೊಂಡರು. ಕನ್ನಡಿಗರೇ ಆಗಿರಲಿ ಅಥವಾ ತೆಲುಗರೇ ಆಗಿರಲಿ ವೀರಶೈವರೆಲ್ಲ ಒಂದೇ ಎಂಬ ಮನೋಭಾವ ಈ ಸಂದರ್ಭದಲ್ಲಿ ಬೆಳೆಯಿತು. ಕ್ರಿ.ಶ. ೧೨೯೯-೧೩೨೩ರ ಸಂದರ್ಭದಲ್ಲಿ ದೆಹಲಿಯ ಮುಸ್ಲಿಂ ಅರಸರು ಪ್ರತಾಪರುದ್ರದೇವನ ಮೇಲೆ ದಂಡೆತ್ತಿ ಬಂದರು. ಮೊದಮೊದಲು ಈ ಮುಸ್ಲಿಂ ಅರಸರನ್ನು ಸಮರ್ಥವಾಗಿ ಪ್ರತಾಪರುದ್ರದೇವನು ಹಿಮ್ಮೆಟ್ಟಿಸಿದನು. ಆದರೆ ಇವನಿಗೆ ಅಕ್ಕಪಕ್ಕದ ಅರಸರ್ಯಾರು ಸಹಾಯ ಮಾಡದೇ ಇದ್ದುದರಿಂದ ಕೊನೆಯಲ್ಲಿ ಪ್ರತಾಪರುದ್ರದೇವ ಸೋಲನ್ನೊಪ್ಪಬೇಕಾಯಿತು. ಇಲ್ಲಿ ಗಮನಿಸಬೇಕಾದದ್ದು ಪ್ರತಾಪ ರುದ್ರದೇವನಿಗೆ ಉಳಿದ ಅರಸರು ಸಹಾಯ ಮಾಡಿದ್ದರೆ ಮುಸ್ಲಿಂ ಅರಸರು ಮುಂದೆ ಇತ್ತ ತಲೆ ಹಾಕುತ್ತಿರಲಿಲ್ಲ. ಇದರಿಂದ ಎಚ್ಚೆತ್ತುಕೊಳ್ಳಲಾಗದ ಇಲ್ಲಿನ ಅರಸರು ಮತ್ತೆ ಮುಂದೆ ವಿಜಯನಗರ ಅರಸರ ಕಾಲಕ್ಕೂ ಹೀಗೆ ನಡೆದುಕೊಂಡರು.

೮. ವಾರಂಗಲ್ಲಿನ ಕಾಕತೀಯರನ್ನು ಸೋಲಿಸಿದ ಮೇಲೆ ದೆಹಲಿಯ ಮುಸ್ಲಿಂ ಅರಸರಿಗೆ ದಕ್ಷಿಣದತ್ತ ರಾಜ್ಯ ಸ್ಥಾಪಿಸಲು ಬೇರೆ ಯಾರು ಅಡ್ಡಿಯಾಗಲಿಲ್ಲ. ಕ್ರಿ.ಶ. ೧೩೪೭ರಲ್ಲಿ ಅಲ್ಲಾವುದ್ದೀನ್ ಹಸನ್ ಬಹಮನ ಶಹಾ ಗುಲಬರ್ಗಾದಲ್ಲಿ ಬಹಮನಿ ರಾಜ್ಯ ಸ್ಥಾಪನೆ ಮಾಡಿದನು. ಇದರಿಂದಾಗಿ ಇಲ್ಲಿನ ಆಡಳಿತವೆಲ್ಲ ಮುಸ್ಲಿಂರ ಕೈ ಸೇರಿತು. ಆಡಳಿತದಲ್ಲಿ ಉರ್ದುವನ್ನು ಜಾರಿಗೆ ತಂದರು. ಅಲ್ಲದೆ ಮೊದಲ ಬಾರಿಗೆ ಇಸ್ಲಾಂ ಸಾಹಿತ್ಯ ಇಲ್ಲಿ ಉದಯವಾಯಿತು. ಇದರೊಂದಿಗೆ ಫಕೀರರು, ದರ್ವೇಷಿಗಳು, ಮುಲ್ಲಾಗಳು, ಸೂಫಿ-ಸಂತರು ದೊಡ್ಡ ಪ್ರಮಾಣದಲ್ಲಿ ಇಲ್ಲಿ ಬಂದು ನೆಲೆಸಿದರು. ಇವರಿಂದ ಮತಾಂತರ ಪ್ರಕ್ರಿಯೆಯು ದೊಡ್ಡ ಪ್ರಮಾಣದಲ್ಲಿ ನಡೆಯಿತು. ಒಟ್ಟಾರೆಯಾಗಿ ಇಲ್ಲಿನ ವಾತಾವರಣವೆಲ್ಲ ಇಸ್ಲಾಂ ಮಾದರಿಯಲ್ಲಿ ಪರಿವರ್ತನೆಯಾಯಿತು ಎನ್ನಬಹುದು.

೯. ಬಹಮನಿ ಸಾಮ್ರಾಜ್ಯ ಐದು ಶಾಹಿ ರಾಜ್ಯಗಳಾಗಿ ಕವಲೊಡೆಯಿತು. ಇವುಗಳಲ್ಲೊಂದಾದ ಹೈದ್ರಾಬಾದ್ ಸಂಸ್ಥಾನ ಈ ಪ್ರದೇಶದ ಆಳ್ವಿಕೆಯನ್ನು ಮುಂದುವರೆಸಿತು. ಹೈದ್ರಾಬಾದ್ ನಿಜಾಮರು ತಮ್ಮ ಆಳ್ವಿಕೆಯಲ್ಲಿ ಸ್ವತಂತ್ರ ಸೈನ್ಯಪದ್ಧತಿ, ಸ್ವತಂತ್ರ ನಾಣ್ಯ ಚಲಾವಣಾ ಪದ್ಧತಿ, ಸ್ವತಂತ್ರ ಸಾರಿಗೆ, ರೈಲ್ವೆ, ಅಂಚೆ, ಆಕಾಶವಾಣಿ ಮತ್ತು ಸ್ವತಂತ್ರ ಶಿಕ್ಷಣ ಇಲಾಖೆಗಳನ್ನು ಜಾರಿಗೆ ತಂದರು. ಆದರೆ ಇವೆಲ್ಲವು ಇಸ್ಲಾಂ ಮಾದರಿಯಲ್ಲಿದ್ದವು. ಅಂದರೆ ಆಡಳಿತದಲ್ಲಿ ಉರ್ದು, ಪ್ರಚಲಿತ ದಲ್ಲಿದ್ದಿತು. ಶಿಕ್ಷಣ ಪದ್ಧತಿಯೂ ಉರ್ದು ಮಾಧ್ಯಮವಾಗಿತ್ತು. ಇಷ್ಟಲ್ಲದೆಯು ಹೈದರಾಬಾದ್ ನಿಜಾಂ ಅರಸರಾದ ಮೀರ್ ಮಹಬೂಬ್, ಅಲಿಖಾನ ಬಹದ್ದೂರ ಮತ್ತು ನವಾಬ ಮೀರ್ ಉಸ್ಮಾನ ಅಲಿಖಾನರ ಸಂದರ್ಭದಲ್ಲಿ ಇವರ ಧಾರ್ಮಿಕ ಮತಾಂಧತೆಯ

ಕಾರಣಕ್ಕಾಗಿ ಹೈದರಾಬಾದ್ ಸಂಸ್ಥಾನ ಅವನತಿಯತ್ತ ಸಾಗಿತು. ಯಾವಾಗ ಇವರಿಗೆ ರಾಜ್ಯ ತಮ್ಮಿಂದ ಕೈ ತಪ್ಪಿ ಹೋಗುತ್ತದೆ ಎಂದು ಖಚಿತವಾಯಿತೋ ಆವಾಗ ಇಲ್ಲಿನ ಬಹುಸಂಖ್ಯಾತರ ಎಲ್ಲ ಹಕ್ಕುಗಳನ್ನು ಕಸಿದುಕೊಂಡು, ಇವರನ್ನು ನಿಯಂತ್ರಿಸಲು ರಜಾಕಾರರ ಸಹಾಯ ಪಡೆದು ತಮ್ಮ ಪ್ರಜೆಗಳ ಮೇಲೆ ಕ್ರೂರವಾಗಿ ವರ್ತಿಸಿದರು. ಇದರಿಂದ ಬೇಸತ್ತ ಇಲ್ಲಿನ ಪ್ರಜೆಗಳು ಇದರಿಂದ ಬೇಸತ್ತು ರಕ್ತಕ್ರಾಂತಿಯ ಮಾರ್ಗ ಹಿಡಿದರು.

ಈ ಎಲ್ಲ ಚಾರಿತ್ರಿಕ ಅಂಶಗಳ ಮೇಲೆಯೇ ಇಂದಿನ ಕರ್ನಾಟಕ-ಆಂಧ್ರ ಗಡಿಭಾಗದ ಕನ್ನಡಿಗರ ಸ್ಥಿತಿಗತಿ ಅವಲಂಬಿತವಾಗಿದೆ. ಅವುಗಳನ್ನು ಈ ಅಧ್ಯಯನದ ಮುಂದುವರಿಕೆಯಲ್ಲಿ ನೋಡಬಹುದು.

### ೨.೩. ಪ್ರಮುಖ ಗಡಿಗ್ರಾಮಗಳು

ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಸುಮಾರು ನೂರು ಗಡಿಗ್ರಾಮಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ. ಈ ಎಲ್ಲ ನೂರು ಗಡಿಗ್ರಾಮಗಳಲ್ಲಿ ಚಾರಿತ್ರಿಕವಾಗಿ, ಭಾಷಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮುಖ್ಯವಾಗಿರುವ ಗ್ರಾಮಗಳ ಪರಿಚಯವನ್ನು ಇಲ್ಲಿ ಮಾಡಿಕೊಳ್ಳುವುದರೊಂದಿಗೆ ಈ ಊರುಗಳು ಗಡಿಯಲ್ಲಿನ ಭಾಷಿಕ, ಸಾಂಸ್ಕೃತಿಕ, ಸಾಮಾಜಿಕ ಹಾಗೂ ಆರ್ಥಿಕವಾಗಿ ಆಂಧ್ರದ ನಡುವೆ ಬೆಸೆದುಕೊಂಡಿರುವ ಸೌಹಾರ್ದತೆಯನ್ನು ಇಲ್ಲಿ ಪರಿಗಣಿಸಲಾಗಿದೆ. ಅವುಗಳ ಪರಿಚಯಾತ್ಮಕ ವಿವರಣೆಯನ್ನು ಮಾಡಿಕೊಳ್ಳಲಾಗಿದೆ.

#### ೨.೩.೧. ಚಿಂಚೋಳಿ :

ಭೀಮಾ ನದಿಯ ಉಪನದಿ ಕಾಗಿಣೆಯ ಉಪನದಿಯಾದ ಮುಲ್ಲಾಮಾರಿ ನದಿಯ ಎಡದಂಡೆಯ ಮೇಲಿರುವ ಚಾರಿತ್ರಿಕ ಮಹತ್ವದ ಊರು ಚಿಂಚೋಳಿ. ಸುಮಾರು ೧೭-೧೯ನೇ ಶತಮಾನಕ್ಕೆ ಸೇರಿದ ನಾಲ್ಕು ಪರ್ಷಿಯನ್ ಶಾಸನಗಳು ಇಲ್ಲಿ ಸಿಕ್ಕಿವೆ. ಇವುಗಳಲ್ಲಿ ಎರಡು ಶಾಸನಗಳು ಚಿಂಚೋಳಿಯ ಕೋಟೆಯನ್ನು ಬೂಹುಲಲ್‌ಖಾನನ ಮಗ ಅಬ್ದುಲ್ ಅಮೀರ್‌ಖಾನನು ಕ್ರಿ.ಶ. ೧೬೫೭ರಲ್ಲಿ ನಿರ್ಮಿಸಿದ ವಿಷಯವನ್ನು ಮತ್ತು ಅದೇ ಕೋಟೆಯನ್ನು ಜೀರ್ಣೋದ್ಧಾರ ಮಾಡಿದ ಮಹ್ಮದ್‌ಖಾನನನ್ನು ಉಲ್ಲೇಖಿಸಿದರೆ, ದರ್ಗಾದ ಪ್ರವೇಶದಲ್ಲಿರುವ ಶಾಸನಗಳಲ್ಲಿ ಒಂದು ಕ್ರಿ.ಶ. ೧೭೭೪ರಲ್ಲಿ ಸಿದ್ಧಿಬಷೀರ್‌ನು ದರ್ಗಾದ ಬಾಗಿಲನ್ನು ನಿರ್ಮಿಸಿದ ಅಂಶ ತಿಳಿಸಿದರೆ, ಇನ್ನೊಂದು ಕ್ರಿ.ಶ. ೧೮೫೨ರಲ್ಲಿ ದಲೀಲ್‌ಖಾನನು ದರ್ಗಾದ ಕಮಾನುಳ್ಳ ಬಾಗಿಲವಾಡವನ್ನು ನಿರ್ಮಿಸಿದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೭೨೮ರ ವೇಳೆಗೆ ಇದು ೭೭ ಹಳ್ಳಿಗಳ ಸಂಸ್ಥಾನವಾಗಿ ಪೇಶ್ವೆಗಳ ಆಳ್ವಿಕೆಗೆ ಒಳಪಟ್ಟಿತು. ಇಲ್ಲಿನ ಸುಭದ್ರ ಕೋಟೆ, ಅರಮನೆ ಹಾಗೂ ವೆಂಕಟೇಶ್ವರ ಮಂದಿರ ಇವರ ಕಾಲದ ರಚನೆಗಳಾಗಿವೆ.

#### ೨.೩.೨. ಮಿರ್‍ಯಾಣ :

ಇದು ಕರ್ನಾಟಕ-ಆಂಧ್ರದ ಗಡಿ ಊರಾಗಿದ್ದು, ಕರ್ನಾಟಕ-ಆಂಧ್ರಗಳ ನಡುವೆ ಚಾರಿತ್ರಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಸಂಬಂಧಗಳನ್ನು ಈ ಊರು ಏರ್ಪಡಿಸಿದೆ. ಊರ ಹೊರಗೆ ಪಾಳು

ಬಿದ್ದಿರುವ ಈಶ್ವರ ದೇವಾಲಯದ ಮುಂದಿರುವ ವೀರಗಲ್ಲು ಶಾಸನವು ಬಹಳ ತ್ರುಟಿತವಾಗಿದ್ದರೆ, ಸುಮಾರು ೧೨ನೇ ಶತಮಾನಕ್ಕೆ ಸೇರಿದ ಇಲ್ಲಿಯ ಇನ್ನೊಂದು ಶಾಸನವು ಜ್ಯೋತಿರ್ದೇವ, ಭೀಮೇಶ್ವರ ಹಾಗೂ ಚೌಡೇಶ್ವರಿ ದೇವಾಲಯಗಳಿಗೆ ಭೂದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಹಿಂದೆ ಇದು ಪ್ರಮುಖವಾಗಿ ಜೈನ-ಶೈವರ ಕೇಂದ್ರವಾಗಿತ್ತೆಂಬ ಅಂಶವನ್ನು ಇಲ್ಲಿರುವ ದೇಗುಲಗಳೇ ಸೂಚಿಸುತ್ತವೆ. ಊರ ಹೊರಗೆ ತಾಂಡೂರು ರಸ್ತೆಯಲ್ಲಿರುವ ಪಾಪನಾಥ ಗುಡಿಯು ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗಗಳನ್ನು ಹೊಂದಿದ್ದು, ಗುಡಿಗೆ ಪೂರ್ವದಿಂದ ಪ್ರವೇಶವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ನಾಲ್ಕು ಶಾಖೆಯ ಬಾಗಿಲವಾಡವಿದೆ. ಈ ಗುಡಿಯ ಬಲಭಾಗಕ್ಕೆ ಇರುವ ಹನುಮಂತನ ಗುಡಿ ಮುಂದೆ ವೀರಗಲ್ಲು ಹಾಗೂ ಜಲದೇವತಾ ಶಿಲ್ಪಗಳಿವೆ. ಗರ್ಭಗೃಹದ ಮೇಲೆ ಕದಂಬ ನಾಗರ ಶಿಖರವಿದೆ. ಈ ದೇವಾಲಯವು ಸುಮಾರು ೯-೧೦ನೇ ಶತಮಾನದ್ದಾಗಿರುವಂತೆ ತೋರುತ್ತದೆ. ಈ ಊರ ಸುತ್ತಮುತ್ತಲು ಕಲ್ಲುಗಣಿಗಳು ಅಧಿಕವಾಗಿದ್ದು ಇಲ್ಲಿಯ ಪರಸಿ(ಹಾಸುಗಲ್ಲು)ಯನ್ನು ಮಿರ್ಯಾಣ ಪರಸಿ ಎಂದೇ ಕರೆಯುತ್ತಿದ್ದು, ಇದು ಈ ಭಾಗದ ಪ್ರಮುಖ ಉದ್ಯಮವಾಗಿದೆ. ಈ ಕಲ್ಲುಗಣಿಗಳಿಂದ ಕಚ್ಚಾ ಕಲ್ಲು ಆಂಧ್ರದ ತಾಂಡೂರಿನಲ್ಲಿ ಪಾಲಿಷ್(ಹೊಳಪು)ಗೊಂಡು ಮಾರಾಟಕ್ಕೆ ಸಿದ್ಧವಾಗುತ್ತದೆ. ಈ ಕಲ್ಲುಗಣಿಗಳಿಗೆ ಸುತ್ತಮುತ್ತಲಿನ ಆಂಧ್ರದಿಂದ ಅನೇಕ ಜನರು ಉದ್ಯೋಗ ಹುಡುಕಿಕೊಂಡು ಬಂದು ಇಲ್ಲಿಯೇ ನೆಲೆಸಿದ್ದಾರೆ.

**೨.೩.೩. ಚಂದ್ರಂಪಳ್ಳಿ :**

ಚಂದ್ರಂಪಳ್ಳಿ ಜಲಾಶಯ ಗೊಟ್ಟಂಗೊಟ್ಟ ಪರ್ವತ ಶ್ರೇಣಿಯ ತಪ್ಪಲಲ್ಲಿರುವ ಸುಂದರ ಪ್ರವಾಸಿ ಧಾಮವಾಗಿದೆ. ಇಲ್ಲಿ ಸರಳಾ ನದಿಗೆ ಆಣೆಕಟ್ಟನ್ನು ಕಟ್ಟಿದ್ದು, ನೀರಾವರಿ ಉದ್ದೇಶದಿಂದ ಇದು ನಿರ್ಮಾಣಗೊಂಡಿರುವುದರ ಜೊತೆಗೆ ಗುಡ್ಡಗಾಡಿನ ನಡುವೆ ಇರುವುದರಿಂದ ಪ್ರವಾಸಿಗರಿಗೆ ವಿಶಿಷ್ಟ ಅನುಭವವನ್ನು ನೀಡುತ್ತದೆ. 'ಗೊಟ್ಟಂಗೊಟ್ಟ' ಚಂದ್ರಂಪಳ್ಳಿ ಹಿನ್ನೀರಿನಲ್ಲಿರುವ ಒಂದು ಪೌರಾಣಿಕ ಸ್ಥಳ. ಹಿಂದೆ ಇದು ವಿರಾಟನಗರವಾಗಿದ್ದು, ಪಾಂಡವರೊಂದಿಗೆ ಸಂಬಂಧ ಹೊಂದಿತ್ತೆಂಬ ಐತಿಹ್ಯ ರೂಢಿಯಲ್ಲಿದ್ದು, ಇಲ್ಲಿ ಬುಕ್ಕಪ್ರಭು, ಹನುಮಂತ ಹಾಗೂ ದುರ್ಗಾದೇವಿಯ ದೇವಾಲಯಗಳಿವೆ. ಗುಡ್ಡದ ಮೇಲುತುದಿಯಲ್ಲಿ ಬುಕ್ಕಪ್ರಭುವಿನ ದೇವಾಲಯವಿದ್ದು, ಶಿವರಾತ್ರಿಯಲ್ಲಿ ಸಾಕಷ್ಟು ಜನ ಸೇರಿ ಭಜನೆ ಹಾಗೂ ಇನ್ನಿತರ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ. ಸುಮಾರು ಎರಡೂವರೆ ಶತಮಾನಗಳ ಹಿಂದೆ ಬದುಕಿದ್ದ ಆಂಧ್ರದ ಮೇದಕ್ ಜಿಲ್ಲೆಯ ಸದಾಶಿವಪೇಟೆ ತಾಲ್ಲೂಕಿನ ಆತ್ಮಕೂರಿನವರಾದ ಬುಕ್ಕಪ್ರಭುಗಳು ತಪಸ್ಸು ಮಾಡಿದ ಸ್ಥಳ ಇದಾಗಿದ್ದು, ಇವರ ಸಮಾಧಿಯು ಕರಕಿಹಳ್ಳಿಯಲ್ಲಿದೆ. ಪ್ರತಿ ವರ್ಷ ಹುಣ್ಣಿಮೆಯಂದು ಇಲ್ಲಿ ಜಾತ್ರೆಯಾಗುತ್ತದೆ. ಜಾತ್ರೆಯಲ್ಲಿ ಕರ್ನಾಟಕ-ಆಂಧ್ರ ಗಡಿಗ್ರಾಮದ ಅನೇಕರು ಪಾಲ್ಗೊಳ್ಳುವುದು ಇಲ್ಲಿನ ವಿಶೇಷವಾಗಿದೆ.

೨.೩.೪. ಸೇಡಂ :

ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಪ್ರಮುಖ ತಾಲ್ಲೂಕಾದ ಸೇಡಂ ತನ್ನ ಒಡಲಲ್ಲಿ ಅನೇಕ ಮಹತ್ವದ ಚಾರಿತ್ರಿಕ ಸಂಗತಿಗಳನ್ನಿಟ್ಟುಕೊಂಡಿದೆ. ಶಾಸನಗಳಲ್ಲಿ 'ಸೇಡಿಂಬಾ' ಎಂದು ಉಲ್ಲೇಖಿತಗೊಂಡಿರುವ ಈ ಪ್ರದೇಶವನ್ನು ಮಾನ್ಯಖೇಟದ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು ಹಾಗೂ ಇವರ ಸಾಮಂತರಾದ ಹೈಹಯ ವಂಶಸ್ಥರು ಮತ್ತು ಶಿಲಾಹಾರರು, ಮುಸ್ಲಿಂ ಅರಸರು, ಕಾಕತೀಯ ಅರಸರು ಇಲ್ಲಿ ಆಳ್ವಿಕೆ ನಡೆಸಿದ್ದಾರೆ. ಸೇಡಂನಲ್ಲಿ ಆಳ್ವಿಕೆ ನಡೆಸಿದ ಬೇರೆ ಬೇರೆ ರಾಜಮನೆತನಗಳು ವಿಭಿನ್ನ ಧರ್ಮದವರಿಗೆ ಆಶ್ರಯ ನೀಡಿ ಅಸಂಖ್ಯಾತ ಗುಡಿಗುಂಡಾರಗಳನ್ನು ನಿರ್ಮಿಸಿದ್ದಾರೆ. ಶೈವ ಧರ್ಮದ ಪ್ರಾಚೀನ ದೇವಾಲಯಗಳೆಂದರೆ ಸೇಡಂನ ಮನಮೋಹಕ ಪಂಚಲಿಂಗೇಶ್ವರ, ಈಶ್ವರ, ತ್ರೈಲಿಂಗೇಶ್ವರ ದೇವಾಲಯಗಳು.

ಈ ಭಾಗದಲ್ಲಿ ವೈಷ್ಣವ ಧರ್ಮ ಬಾಳಿಬೆಳಗಿತ್ತು ಎನ್ನುವುದಕ್ಕೆ ಕ್ರಿ.ಶ. ೧೧೦೬ರ ಸೇಡಂ ಶಾಸನದ ಆರಂಭದಲ್ಲಿ 'ಜಯತಾ ವಿಷ್ಣುತಂ ವಿಧೋದರ್ಾರಾಹಂ ಪೋಟಿತಾರ್ಣ್ಣಮ' ಎಂದು ಹೇಳಿದ್ದು ಗಮನಾರ್ಹ. ಇಲ್ಲಿನ ಅನೇಕ ದೇವಾಲಯಗಳಲ್ಲಿ ಗದಾಧಾರಿ ವಿಷ್ಣುವಿನ ವಿಗ್ರಹಗಳು, ನವಕೋಟಿ ನಾರಾಯಣ, ತ್ರೈಪುರುಷ ದೇವಾಲಯಗಳು ವೈಷ್ಣವರ ಜೀವನ ಶೈಲಿ ಮತ್ತು ಅದರ ಉಚ್ಛ್ರಾಯ ಸ್ಥಿತಿಯ ಬಗ್ಗೆ ದಾಖಲೆಗಳನ್ನು ಒದಗಿಸುತ್ತವೆ. ರಾಷ್ಟ್ರಕೂಟರು ಜೈನ ಧರ್ಮಕ್ಕೆ ರಾಜಾಶ್ರಯ ನೀಡಿದ್ದರ ಪರಿಣಾಮ ರಾಷ್ಟ್ರಕೂಟರ ರಾಜಧಾನಿ ಮಳಖೇಡ ಮತ್ತು ಸೇಡಂ ಸುತ್ತಮುತ್ತಲು ಜೈನರ ಸ್ಮಾರಕಗಳು ಕಂಡುಬರುತ್ತವೆ. ಸೇಡಂ ಪಟ್ಟಣದಲ್ಲಿರುವ ಶಾಂತಿನಾಥ ಬಸದಿ, ಹಳೆಯ ಊರಿನಲ್ಲಿನ ಅಸಂಖ್ಯಾತ ಸ್ಮಾರಕಗಳು, ತಾಲ್ಲೂಕಿನ ಆಡಕಿ ಗ್ರಾಮದಲ್ಲಿನ ಕ್ರಿ.ಶ. ೧೦೬೬ರ ಜೈನ ಶಾಸನ ಮತ್ತು ಅಲ್ಲಿಯ ಜೈನ ಶಿಲ್ಪಗಳು ಜೈನ ಧರ್ಮದ ಬೆಳವಣಿಗೆಯ ಬಗ್ಗೆ ಸಾಕ್ಷಿ ಒದಗಿಸುತ್ತವೆ.

'ಕವಿರಾಜಮಾರ್ಗ'ದಲ್ಲಿ ಕನ್ನಡಿಗರನ್ನು ಕುರಿತು ಹೇಳಿರುವಂತೆ ಸೇಡಂನ ಈ ಶಾಸನ ಇಲ್ಲಿನ ಜನರ ಕುರಿತು ಹೀಗೆ ವರ್ಣಿಸುತ್ತದೆ. ಈ ಶಾಸನವು ಉನ್ನತಿ ಪಡೆದ ಅಚಿಲ್ನಾಡು ಮತ್ತು ಅದಟರ ಮಸ್ತಕ ಶೂಲದಂತೆ ಇರುವ ಸೇಡಿಂಬದುರ್ಗದ ಮಹಾಜನರ ವರ್ಣನೆಯನ್ನು ಹೀಗೆ ಒದಗಿಸುತ್ತದೆ.

"ಭೋಗೋಪಭೋಗದಿಂದನು
ರಾಗದಿನನವದೂ ವೃತ್ತಿಯಿಂ ಸುಕೃತಶತೋ
ದ್ಯೋಗದಿನಿರ್ಪ ಜನಂಗಳಿ
ನಾಗಳುವಾ ವಿಷಯವೇಂ ಮನಂಗೊಳಿಸಿದುದೋ ||

ಬಿರುದಿನ ಬಿಂಕವಲ್ಲದ ನೆಗವ್ತೆ ಪೊಗಳ್ತೆಗೆ ಸಲ್ಲದಾರ್ಪು ಬಿ
ತ್ತರಿಸದ ನೇರ್ಪು ನಿತ್ಯತೆಯನಾಂತ ಮದರ್ೊಪ್ಪುವ ಪೆಂಪುಸೊಂಪನಾ

ವರಿಸದರಿಲ್ಲೆನಿಪ್ಪ ಮಹಿಮೋನ್ನತಿಯಂ ಪಡೆದಿರ್ದ್ದುದೆಂದೊಡಂ
ತಿರುವರಿ ವರ್ಣ್ನಿಪಂತಳವೆ ತದ್ವಿಷಯಂ ಜಗತೀತಳಾಗ್ರದೊಳ್ ||

ಅಂಬರಮಂ ಪಳಂಚಲೆವುಲೆವ್ವಿಪುದಿಕ್ಕಿದ ಕೋಟೆ ನಾಗಾಲೋ
ಕಂಬರಮಯ್ದೆ ಮುಟ್ಟಿದುದಗಳ್ದಗಳಿತ್ತ ದಿಶಾದಿಶಾಂತರಾ
ಳಂಬರಮಯ್ದೆ ಪರ್ವ್ವಿದುದು ತೇಜದ ಸಾಜದಗುರ್ವ್ವೆನಲ್ಕೆ ಸೇ
ಡಿಂಬದೊಳತ್ತಿ ಕಾದುವದಬರ್ಗ್ಗಿದು ಮಸ್ತಕಶೂಲಮಲ್ಲದೇ ||

ಅಂಬುಧಿ ಮೇರೆದಪ್ಪಿ ಕವಿದಿಧರೆಯಂ ಕೊಳುವಂದು ವಿಷ್ಣು ವೀ
ಶಂಬೆರಸೀ ಜಗಸ್ತ್ರಯಮುಮಂ ಬಸಿರೊಳ್ನಿಲಿಸಿಟ್ಟು ಕಾವವೋ
ಲಿಂಬಳದಿವ್ವಿ ನಾಲ್ದೆಸೆಯ ನಾಡುಗಳಂ ಪೆಱಗಿಕ್ಕಿಕಾವ ಸೇ
ಡಿಂಬದ ವಿಪ್ರರೊಂದಳವನೇವೊಗಳ್ವೆಂ ಚಲದಂಕರಾಮರಂ ||[೨೬]

೨.೩.೫. ಆಡಕಿ :

ಪ್ರಾಚೀನ ಶಾಸನಗಳಲ್ಲಿ 'ಆಡಕ್ಕಿ' ಎಂದೇ ಉಲ್ಲೇಖಿತಗೊಂಡಿರುವ ಆಡಕಿಯಲ್ಲಿ ಈವರೆಗೆ ಆರು ಶಾಸನಗಳು ದೊರೆತಿವೆ. ಇಲ್ಲಿನ  ಮಾರುತಿ ದೇವಾಲಯದ ಎರಡು ಕಂಬಗಳ ಮೇಲೆ ಇರುವ ಶಾಸನಗಳು ಸೀರೆಯ ಕಾಳಿಸೆಟ್ಟಿ ಹಾಗೂ ಕೊಪ್ಪದೇವ ಮಾಡಿಸಿದ ಜೈನ ಬಸದಿಗಳಿಗೆ ಬೇರೆ ಬೇರೆ ಕಾಲಗಳಲ್ಲಿ ನೀಡಿದ ದಾನಶಾಸನಗಳ ಕುರಿತದ್ದಾಗಿದೆ. ಇವುಗಳಲ್ಲಿ ಎರಡು ಕಲ್ಯಾಣಿ ಚಾಳುಕ್ಯರ ಅರಸ ೬ನೆಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದು, ಮಹಾಮಂಡಳೇಶ್ವರ ಕೊಪ್ಪದೇವ ಹಾಗೂ ಜೈನಯತಿ ಗುಣವೀರ ಸಿದ್ಧಾಂತದೇವರ ಬಗ್ಗೆ ಉಲ್ಲೇಖಿಸುತ್ತ, ಪಾರ್ಶ್ವನಾಥ ಬಸದಿಯನ್ನು ಮಾಡಿಸಿ (ಕ್ರಿ.ಶ. ೧೧೨೫) ಕೊಪ್ಪ ಜಿನಾಲಯ ಎಂದು ಅದಕ್ಕೆ ಹೆಸರಿಟ್ಟು, ದೇವರ ಸೇವೆಗೆಂದು ದಂಡನಾಯ್ಕ ಕೊಪ್ಪರಸರು ಒಂದು ಮತ್ತರು ತೋಟ ಹಾಗೂ ಇನ್ನಿತರ ದಾನಗಳನ್ನು ನೀಡಿದುದನ್ನು ಈ ಶಾಸನ ಹೇಳುತ್ತದೆ. ಆ ಸಂದರ್ಭದಲ್ಲಿ ಊರ ನಕರರು ಎರಡು ಬಸದಿಯ ದೇವರುಗಳ ನಂದಾದೀವಿಗೆಗೆ ಎಣ್ಣೆಯನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಇಲ್ಲಿಯ ಇನ್ನೊಂದು ಕಂಬದ ಮೇಲಿರುವ ಕ್ರಿ.ಶ. ೧೧೬೫ರ ಶಾಸನವು ಕಲಚೂರಿ ರಾಯಮುರಾರಿ ಸೋವಿದೇವನ ಕಾಲಕ್ಕೆ ಸೇರಿದ್ದಾಗಿದ್ದು, ಮಹಾಮಂಡಳೇಶ್ವರರಾದ ಮಿರಿಂತೆನಾಡ ಎಚರಸ ಹಾಗೂ ಆಡಕ್ಕಿಯ ಪ್ರಭುಗಳು ಅಯ್ಯಾವೊಳೆ ೫೦೦, ಮಮ್ಮರಿದಂಡ ಹಾಗೂ ಉಭಯ ನಾನಾದೇಶಿಗಳು, ತೆಂಕಣಕೊಪ್ಪ ಜಿನಾಲಯದ ಚನ್ನಪಾರ್ಶ್ವದೇವರ ಅಂಗಭೋಗಕ್ಕೆ ಹಾಗೂ ಪೂಜಾ ವಿಧಿಗೆಂದು ವಿವಿಧ ಆಯಗಳನ್ನು ದಾನ ಬಿಟ್ಟ ಅಂಶವನ್ನು ತಿಳಿಸುತ್ತದೆ. ಇಲ್ಲಿಯ ಮತ್ತೊಂದು ಕಂಬದ ಮೇಲಿರುವ ಕ್ರಿ.ಶ. ೧೧೭೨ರ ಶಾಸನವು ರಾಯಮುರಾರಿ ಸೋವಿದೇವನ ಆಳ್ವಿಕೆಯಲ್ಲಿ ಮಹಾಮಂಡಳೇಶ್ವರ ಎಚರಸ, ಊರಪ್ರಭುಗಳು ಹಾಗೂ ವರ್ತಕರು ಕೂಡಿಕೊಂಡು ಘಟಾಂತಕಿ ದೇವಿಯ

ತೀರ್ಥದ ಸಿರಿಯ ಬಸದಿಯ ಪಾರ್ಶ್ವದೇವರ ಸೇವೆಗೆಂದು ವಿವಿಧ ವಸ್ತುಗಳ ಮೇಲಿನ ಸುಂಕವನ್ನು ದಾನ ಬಿಟ್ಟ ಅಂಶವನ್ನು ಹೇಳುತ್ತದೆ. ಜೊತೆಗೆ ಈ ಶಾಸನವು ಕೂಡ ಸಾಂದರ್ಭಿಕವಾಗಿ ಎರಡೂ ಬಸದಿಗಳ ನಂದಾದೀಪ ಸೇವೆಗೆಂದು ತಿಂಗಳಿಗೆ ಎರಡು ಸೊಳಸ ಎಣ್ಣೆಯನ್ನು ದಾನ ಬಿಟ್ಟ ಅಂಶವನ್ನು ತಿಳಿಸುತ್ತದೆ. ಇಲ್ಲಿಯ ಇನ್ನೊಂದು ಶಾಸನವು ತೆಂಕಣಕೊಪ್ಪ ಜಿನಾಲಯಕ್ಕೆ, ಗಾಣಕ್ಕೆ ಸೊಂಟಿಗೆ ಎಣ್ಣೆಯಂತೆ ಎಣ್ಣೆ ಸುಂಕವನ್ನು ದೇವರ ನಂದಾದೀಪದ ಸೇವೆಗೆಂದು ಉಭಯ ದೇಶಗಳು, ಪ್ರಭು ಹಾಗೂ ದೇಸಿಗರು ಯಾದವ ಸಿಂಘಣನ (ಕ್ರಿ.ಶ.೧೨೧೦) ಆಳ್ವಿಕೆಯಲ್ಲಿ ದಾನ ಬಿಟ್ಟ ಅಂಶವನ್ನು ತಿಳಿಸುತ್ತದೆ. ಮೇಲಿನ ಶಾಸನಗಳಿಂದ ಇಲ್ಲಿ ಎರಡು ಬಸದಿಗಳಿದ್ದ ಅಂಶ ವೇದ್ಯವಾಗುತ್ತದೆ. ಆದ್ದರಿಂದ ಊರಲ್ಲಿ ಪೇಟೆ ಹನುಮಂತನ ಗುಡಿ ಬಳಿ ಬಿದ್ದಿರುವ ಜಿನಶಾಸನ ಕಲ್ಲು, ತೀರ್ಥಂಕರನ ಕಿರುಕೆತ್ತನೆಗಳಿರುವ ಕಂಬದ ಖಂಡಭಾಗ, ಮಹಾವೀರ ಹಾಗೂ ಚಾವ್ವಿಸ್ ತೀರ್ಥಂಕರ ಶಿಲ್ಪಗಳನ್ನು ಹೊರತುಪಡಿಸಿ ಇನ್ನಾವುದೇ ಜೈನಾವಶೇಷಗಳು ಕಂಡು ಬರುವುದಿಲ್ಲ. ಊರ ಕೋಟೆಯೊಳಗೆ ಇರುವ ಈಶ್ವರಗುಡಿಯು ಸುಮಾರು ೧೧-೧೨ನೆಯ ಶತಮಾನದ ರಚನೆಯಾಗಿದ್ದು, ಗರ್ಭಗೃಹ ಹಾಗೂ ಅಂತರಾಳ ಭಾಗಗಳಷ್ಟೇ ಉಳಿದಿದ್ದು, ಗರ್ಭಗೃಹದಲ್ಲಿ ಬಲಹರಿ ಶಿವಲಿಂಗವಿದ್ದು, ಅಂತರಾಳದಲ್ಲಿ ಸುಂದರವಾದ ಚಂದ್ರಶಿಲೆಯಿದೆ. ಇಲ್ಲಿಯ ವೆಂಕಟರಮಣ ಗುಡಿಯು ಪೂರ್ಣ ಜೀರ್ಣೋದ್ಧಾರ ಗೊಂಡಿದ್ದರೂ, ಕಲ್ಯಾಣಿ ಚಾಲುಕ್ಯರ ಕಾಲದ ಕಂಬಗಳನ್ನು ಒಳಗೊಂಡಂತೆ ಅನಂತಶಯನ ಪ್ರಾಚೀನ ಶಿಲ್ಪವನ್ನು ಹೊಂದಿದೆ. ಆಡಕಿಯ ಶಾಸನವೊಂದರಲ್ಲಿ ಉನ್ನತ ವ್ಯಕ್ತಿತ್ವ ಹೊಂದಿದ ಜನರ ವರ್ಣನೆ ಹೀಗೆ ಸುಂದರವಾಗಿ, ಸಾಹಿತ್ಯಕ ಸೊಬಗಿನಿಂದ ಕೂಡಿ ಕೆಳಗಿನಂತೆ ಮೂಡಿಬಂದಿದೆ.

> "ಮಱದುವಸತ್ಯವಂ ನುಡಿಯ ಬೇಡಿದ ವಸ್ತುವನಾರ್ಗ್ಗವಿಲ್ಲೆನ
> ಲ್ಕಱೆಯನಶೇಷ ಭವ್ಯಜನಸಂತತಿಗಳ್ ಪೊಗಳ್ವಂನ ಭಕ್ತಿಯಂ
> ಮೆಱೆವ ಜಿನೇಂದ್ರನೊಳ್ ಪರಹಿತಾರ್ತ್ಥಮೆ ಮೆಯ್ಯೆನಿಸಿರ್ಪ್ಪನೆಂದು ಹೇ
> ರಪಿಕೆಯ ದಾನಿಯಂ ಪೊಗಳ್ವುದೀ ಧರೆ ಸೀರೆಯ ಕಾಳಿಸೆಟ್ಟಿಯಂ|"[೭]

ಇಲ್ಲಿ ಬರುವ ಸೀರೆಯ ಕಾಳಿಸೆಟ್ಟಿ ಮರೆತು ಅಸತ್ಯವನ್ನು ನುಡಿಯದ ಬೇಡಿದ ವಸ್ತುಗಳನ್ನು ಇಲ್ಲೆನ್ನದೆ ಕೊಡುವ ಹಾಗೂ ಪರಹಿತಾರ್ಥವೇ ಮೈಯಾಗಿ ಇರುವ ಮಹಾನುಭಾವನಂತೆ! ಎಂಬುದಾಗಿ ಇಲ್ಲಿ ವರ್ಣಿತವಾಗಿದೆ.

ಉಳಿದಂತೆ ಊರಲ್ಲಿ ವೀರಭದ್ರ, ಹನುಮಂತ, ಗ್ರಾಮದೇವತೆ ಮರಗಮ್ಮ, ದ್ಯಾವಮ್ಮ, ಅಡವಿ ಬಸವಣ್ಣ ಮುಂತಾದ ನವೀನ ಗುಡಿಗಳಿವೆ. ಮೇಲಾಗಿ ಮಸೀದಿ ಹಾಗೂ ದರ್ಗಾ ಕೂಡಾ ಇದ್ದು, ಹದಿನೈದು ಕಮಾನುಗಳುಳ್ಳ ಬೃಹತ್ತಾದ ಇಸ್ಲಾಂ ಶೈಲಿಯ ಕಟ್ಟಡಗಳು ಪಾಳು ಬಿದ್ದಿದ್ದು, ಹಿಂದೆ ಇದನ್ನು ಆನೆಗಳನ್ನು ಕಟ್ಟಲು ಬಳಸಲಾಗುತ್ತಿತ್ತೆಂಬ ಸ್ಥಳೀಯರ ಅಭಿಪ್ರಾಯವಿದೆ. ಪ್ರತಿ ವರ್ಷ ಮೇ ತಿಂಗಳಲ್ಲಿ ಆಡಕಿಯಲ್ಲಿ ವೆಂಕಟೇಶ್ವರ ಸ್ವಾಮಿಯ ಜಾತ್ರೆ ನಡೆಯುತ್ತದೆ. ಇದಕ್ಕೆ ಕರ್ನಾಟಕ-ಆಂಧ್ರಗಳಿಂದ ಸುಮಾರು ೬ ಸಾವಿರ ಜನರು ಬರುತ್ತಾರೆ.

೨.೩.೬. ಮುಧೋಳ :

ತಾಲ್ಲೂಕು ಕೇಂದ್ರವಾದ ಸೇಡಂನಿಂದ ಆಗ್ನೇಯಕ್ಕೆ ೩೨ ಕಿ.ಮೀ. ದೂರದಲ್ಲಿರುವ ಮುಧೋಳ, ಪ್ರಾಚೀನ ಶಾಸನಗಳಲ್ಲಿ 'ಮುದವೊಲು' ಎಂದು ಉಲ್ಲೇಖಿತಗೊಂಡಿದೆ. ಈ ಊರಿಂದ ಈವರೆಗೆ ರಾಷ್ಟ್ರಕೂಟ ಕನ್ನರದೇವನ ಕಾಲಕ್ಕೆ ಸೇರಿದ ಶಾಸನವೊಂದು ರಾಮಲಿಂಗೇಶ್ವರ ಗುಡಿಯ ಕಂಬವೊಂದರ ಮೇಲೆ ಪತ್ತೆಯಾಗಿದೆ. ಮುಧೋಳವನ್ನು ಗೋಣಯ್ಯನು ಆಳುತ್ತಿದ್ದಾಗ ಗೂಳಿಗಾವುಂಡನು ಮಹಾದೇವರ ದೇಗುಲವನ್ನು ಮಾಡಿಸಿ, ದೇವರ ಸೇವೆಗೆಂದು ಮೂರು ಮತ್ತರು ಹೊಲ ದತ್ತಿ ಕೊಟ್ಟ ಅಂಶವನ್ನು ಈ ಶಾಸನ ತಿಳಿಸುತ್ತದೆ. ಈ ರಾಮಲಿಂಗ ದೇವಾಲಯ ಕ್ರಿ.ಶ. ೧೩ನೇ ಶತಮಾನಕ್ಕೆ ಸೇರಿದ್ದಾಗಿದೆ. ದೇವಾಲಯದ ತಳಪಾಯದಲ್ಲಿ ಗರ್ಭಗೃಹ, ಅರ್ಧಮಂಟಪ, ತೆರೆದ ನವರಂಗಗಳಿದ್ದು, ನವರಂಗಕ್ಕೆ ರಕ್ಷಾಸನವಿದೆ. ಗರ್ಭಗೃಹದಲ್ಲಿರುವ ಶಿವಲಿಂಗವು ಹಂಪೆಯ ವಿರೂಪಾಕ್ಷನಂತಿರುವುದೆಂದು ಸ್ಥಳೀಯರು ಹೇಳುವರು. ಇದರ ಸುತ್ತ ಐದು ಹೊಂಡಗಳಿದ್ದವು. ಈಗ ಅವು ಸ್ಥಳೀಯರ ನಿರ್ಲಕ್ಷ್ಯದಿಂದ ಮುಚ್ಚಿಹೋಗಿವೆ. ದೇವಾಲಯದಲ್ಲಿನ ನಾಗಶಿಲ್ಪ ದುಂಡಾಕೃತಿಯಲ್ಲಿದ್ದು ತಲೆ ಭಾಗ ಒಡೆದಿದೆ. ಪಂಚಮುಖಿ ಮಾರುತಿ ದೇವಾಲಯದಲ್ಲಿ ಪಂಚಮುಖವುಳ್ಳ ಮಾರುತಿಯ ವಿಗ್ರಹವಿದೆ. ಅದಕ್ಕೆ ಐದು ಮುಖಗಳು, ಹತ್ತು ಕೈಗಳು, ಪ್ರಭಾಮಂಡಳದ ಮಧ್ಯ ಕೀರ್ತಿಮುಖವಿದೆ. ಇದರ ಕಾಲ ಕ್ರಿ.ಶ. ೧೬ನೇ ಶತಮಾನ. ಗೋಪಾಲಸ್ವಾಮಿಯ ದೇವಸ್ಥಾನದಲ್ಲಿ ಗೋಪಾಲಸ್ವಾಮಿ ಉದ್ಭವ ಮೂರ್ತಿಯಾಗಿ ಒಡಮೂಡಿದ್ದಾನೆಂದು ಸ್ಥಳೀಯರು ಹೇಳುವರು. ಈ ಸ್ವಾಮಿಯ ಜಾತ್ರೆ ಇಲ್ಲೆಲ್ಲ ತುಂಬಾ ಖ್ಯಾತಿಯನ್ನು ಪಡೆದಿದೆ. ವಿಶಾಲವಾದ ಈ ಮಂದಿರದಲ್ಲಿನ ವಿಷ್ಣು ಮತ್ತು ರುಕ್ಮಿಣಿಯರ ವಿಗ್ರಹಗಳು ಮುಖ್ಯವೆನಿಸಿವೆ. ಈ ಮಂದಿರವು ಅನೇಕ ಕಮಾನುಗಳ ಸ್ತಂಭ ಮಂಟಪವನ್ನು ಹೊಂದಿದೆ. ರಾಮಲಿಂಗ ಗುಡಿ ಮುಂದೆ ಇರುವ ಮೂರು ವೀರಗಲ್ಲುಗಳಲ್ಲಿನ ಒಂದರಲ್ಲಿ ಛತ್ರಿ ಕೆಳಗಡೆ ಕುದುರೆ ಸವಾರನಿದ್ದಾನೆ, ಮೇಲೆ ಮಡಿದ ವೀರನನ್ನು ಅಪ್ಸರೆಯರು ಒಯ್ಯುತ್ತಿರುವರು. ಮತ್ತು ಶಿವಲಿಂಗದ ಮುಂದೆ ವೀರನಿದ್ದಾನೆ. ಇನ್ನೊಂದರಲ್ಲಿ ಮೂರು ದೃಶ್ಯಗಳಿವೆ. ಇಲ್ಲಿನ ಅಂಬಾಭವಾನಿ ಗುಡಿ ಮುಂದಿನ ವೀರಗಲ್ಲಿನಲ್ಲಿ ವೀರರನ್ನು ಅಪ್ಸರೆಯರು ಒಯ್ಯುತ್ತಿ ರುವುದು ಮತ್ತು ವೀರನು ಲಿಂಗದ ಮುಂದೆ ಕುಳಿತ ದೃಶ್ಯ ಮಾತ್ರ ಉಳಿದಿದೆ. ಈ ಗ್ರಾಮದ ಸುತ್ತಲು ಹಳೆಯ ಕೋಟೆ ಇದ್ದು, ಇದು ಕಲ್ಲು ಮತ್ತು ಮಣ್ಣಿನಿಂದ ಕೂಡಿದ್ದು ಇದರ ನಾಲ್ಕು ಮೂಲೆಗಳಲ್ಲಿ ಹುಡೆಗಳಿವೆ (ಕಾವಲು ಗೋಪುರಗಳು).

ಸಾಂಸ್ಕೃತಿಕ ಮತ್ತು ಚಾರಿತ್ರಿಕ ಮಹತ್ವ ಪಡೆದ ಮುಧೋಳ ಸಾಹಿತ್ಯಿಕವಾಗಿಯು ಮಹತ್ವ ಪಡೆದಿದೆ. ಕನ್ನಡ ಸಾಹಿತ್ಯದಲ್ಲಿ ಬಂದು ಹೋಗುವ ಗಜಾಕುಂಶ ಇದೇ ಮುಧೋಳ ಗ್ರಾಮದವನೆಂದು ಕೆಲವು ಆಧಾರಗಳಿಂದ ಖಚಿತಪಡುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬರುವ ಮಲ್ಲಿಕಾರ್ಜುನ, ನಯಸೇನ, ದುರ್ಗಸಿಂಹ, ಶ್ರೀಧರಾಚಾರ್ಯ, ರುದ್ರಭಟ್ಟ, ಆಂಡಯ್ಯ, ಕೇಶಿರಾಜ, ಕುಮುದೆಂದು, ವಾಣಿವಲ್ಲಭ - ಈ ಮೊದಲಾದವರು ತಮ್ಮ ಕೃತಿಕಾವ್ಯಗಳಲ್ಲಿ ಗಜಾಂಕುಶನ ಹೆಸರನ್ನು ಬಳಸಿರುವುದರಿಂದ ಗಜಾಂಕುಶ ಇವರಿಗಿಂತ ಹಿರಿಯ ಇಲ್ಲವೆ ಇವರ ಸಮಕಾಲೀನನವನಿರಬೇಕು. ಪ್ರಮುಖ ಕವಿಗಳು ಇವನ ಹೆಸರನ್ನು

ತಮ್ಮ ಕಾವ್ಯಗಳಲ್ಲಿ ಉಲ್ಲೇಖಿಸಿರುವರು ಎಂದಾದ ಮೇಲೆ ಅಂದಿನ ದಿನಗಳಲ್ಲಿ ಇವನೊಬ್ಬ ಪ್ರಮುಖ ಕವಿಯಾಗಿರಲಿಕ್ಕೆ ಬೇಕು.

ಗಜಾಂಕುಶ ರಾಷ್ಟ್ರಕೂಟರ ೩ನೇ ಕೃಷ್ಣನ ಸೇನಾಪತಿಯಾಗಿದ್ದನು. ಗಜಾಂಕುಶನ ಸ್ಥಳದ ಬಗ್ಗೆ ನಮಗೆ ಸಾಲೊಟಗಿ ಶಾಸನ ಮಹತ್ತರವಾದ ದಾಖಲೆಗಳನ್ನು ನೀಡುತ್ತದೆ. 'ಮಾಹಿಷ ವಿಷಯದ ಕಾಂಚನ ಮುದುವೊಳಲು' ಎಂಬ ಸಾಲು ನಿಖರವಾಗಿ ಆತ ಕಾಂಚನ ಮುದುವೊಳಲಿನವನಾಗಿದ್ದನು ಎಂಬುದನ್ನು ತಿಳಿಸುತ್ತದೆ. ಮುದುವೊಳಲು ಎಂಬ ಹೆಸರಿನ ಬೇರೆ ಬೇರೆ ಊರುಗಳಿವೆ, ಒಂದು ರನ್ನನ ಮುದುವೊಳಲು, ಮತ್ತೊಂದು ಗಜಾಂಕುಶನ ಮುದುವೊಳಲು. ರನ್ನನ ಮುದುವೊಳಲನ್ನು ಬೆಳಗಲಿಯ ಮುದುವೊಳಲೆಂದು ನಾವು ಈಗಾಗಲೇ ಖಚಿತಪಡಿಸಿಕೊಂಡಿದ್ದೇವೆ. ಹಾಗಾಗಿ ಸಾಲೊಟಗಿ ಶಾಸನದಲ್ಲಿನ 'ಮಾಹಿಷ ಮುದುವೊಳಲು, ಇಂದಿನ ಕರ್ನಾಟಕ-ಆಂಧ್ರ ಗಡಿಯಲ್ಲಿನ 'ಕಂಸನಪಳ್ಳಿ ಮುಧೋಳ'ವಾಗಿದೆ. ಕನ್ನಡ ಸಾಹಿತ್ಯದಲ್ಲಿ ಇಬ್ಬರು ಗಜಾಂಕುಶರು ಬಂದು ಹೋಗುತ್ತಾರೆ. ಈಗ ಲಭ್ಯವಿರುವ ಮಾಹಿತಿಯಂತೆ ಒಬ್ಬ ಬ್ರಾಹ್ಮಣ ಗಜಾಂಕುಶ, ಮತ್ತೊಬ್ಬ ಜೈನ ಗಜಾಂಕುಶ. ಇಲ್ಲಿ ಗಮನಿಸುತ್ತಿರುವುದು ರಾಷ್ಟ್ರಕೂಟರ ೩ನೇ ಕೃಷ್ಣನ ಸೇನಾಪತಿಯಾದ ಜೈನ ಗಜಾಂಕುಶನನ್ನು. ಈ ಗಜಾಂಕುಶ ಕಲಿ ಮತ್ತು ಕವಿ ಕೂಡಾ. ಇವನು ಕನ್ನಡ ಮತ್ತು ತೆಲುಗು ಎರಡು ಭಾಷೆಗಳಲ್ಲಿ ತನ್ನನ್ನು ಗುರುತಿಸಿಕೊಂಡಿದ್ದನು. ಅಂತಲೇ ತೆಲುಗುವಿನ 'ತೆಲುಗು ಕವುಲ ಚರಿತ್ರ'ದಲ್ಲಿ ಗಜಾಂಕುಶನ ಕುರಿತು ಉಲ್ಲೇಖಿಸಲಾಗಿದೆ.

ಹೈದರಾಬಾದ್-ಕರ್ನಾಟಕದ ವಿಮೋಚನೆಯಲ್ಲಿಯೂ ಈ ಗಡಿಗ್ರಾಮ ಮಹತ್ವದ ಪಾತ್ರ ನಿರ್ವಹಿಸಿದ್ದು ಕಂಡು ಬರುತ್ತದೆ. ಹೈದರಾಬಾದ್ ನಿಜಾಮನ ಪೈಶಾಚಿಕ ಕೃತ್ಯಗಳಿಗೆ ಮೊದಲು ಬಲಿಯಾಗಿದ್ದ ಈ ಭಾಗದಲ್ಲಿನ ಕನ್ನಡದ ನೆಲವೆಂದರೆ ಅದು ಮುಧೋಳ. ಇಲ್ಲಿಯ ಜನರ ಬದುಕು ಅಂದು ಭಯಾನಕವಾಗಿತ್ತು. ನಿಜಾಮನ ವಿರುದ್ಧ ಚಕಾರವೆತ್ತುವಂತಿರಲಿಲ್ಲ, ಧಾರ್ಮಿಕ ಬಹಿರಂಗ ಸಭೆ ಮಾಡುವಂತಿರಲಿಲ್ಲ, ಮನೆಯೊಳಗಿನ ದೇವರ ಪೂಜೆ, ವಿವಾಹದಂತಹ ಕಾರ್ಯಕ್ರಮಗಳಿಗೂ ನಿಜಾಮನ ಒಪ್ಪಿಗೆ ಪಡೆದುಕೊಳ್ಳಬೇಕಾಗಿತ್ತು. ಇಂತಹ ವಾತಾವರಣವನ್ನು ತೊಡೆದು ಹಾಕಲು ಮುಧೋಳದಲ್ಲಿ ಒಂದು, ಆರ್ಯ ಸಮಾಜದ ಮುಖಾಂತರ ಜನತೆ ಭೂಗತ ಕ್ರಾಂತಿಕಾರಿ ಚಟುವಟಿಕೆಗಳಿಂದ ನಿಜಾಂನನ್ನು ಎದುರಿಸಿದರು. ಇನ್ನೊಂದು ಇಲ್ಲಿಯ ನೇಕಾರರು ಆರ್ಥಿಕ ಮುಗ್ಗಟ್ಟನ್ನು ತಡೆಯಲು ಮಂದಗಾಮಿ ರೂಪದಲ್ಲಿ ನಿಜಾಂನನ್ನು ಎದುರಿಸಿದ್ದರು.

ಹೈದರಾಬಾದ್-ಕರ್ನಾಟಕದ ವಿಮೋಚನೆಯಲ್ಲಿ ರಜಾಕಾರರ ವಿರುದ್ಧ ಮುಧೋಳ ಗ್ರಾಮದಲ್ಲಿನ ಜನರು ಕ್ರಾಂತಿ ನಡೆಸಿದ್ದು ರೋಚಕವಾಗಿದೆ. 'ಸ್ವಾತಂತ್ರ್ಯ ಹೋರಾಟದ ಶಿಬಿರಗಳು' ಎಂದೇ ಕರೆಸಿಕೊಂಡ ಮೈದರ್ಗಿ ಶಿಬಿರದಲ್ಲಿ ವೆಂಕಟರಾವ್ ತಿರುಮಲ, ತುಳಜಾರಾಮ ಖೇವಜಿ, ಗೋವಿಂದರಾವ್ ಕ್ಷೀರಸಾಗರ, ಹಿಪ್ಪರಗಿ ಶಿಬಿರದಲ್ಲಿ ನರಸಪ್ಪ ದುಧನಿ ಶಿಬಿರದಲ್ಲಿದ್ದುಕೊಂಡು ನಿಜಾಂ ಸರಕಾರದ ವಿರುದ್ಧ ಭೂಗತ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಪೆಂಟಯ್ಯ ಲಕ್ಷ್ಮಯ್ಯ, ಪಿತಾಂಬರರಾವ್ ಗಡಾಳೆ, ಚಂದ್ರಗುಪ್ತ

ಪತಂಗೆ ಬಹಿರಂಗವಾಗಿ ನಿಜಾಂ ಸರಕಾರದ ವಿರುದ್ಧ ಕ್ರಾಂತಿ ನಡೆಸಿದರು. ಸ್ವಾಮಿ ರಮಾನಂದತೀರ್ಥ, ವಿನಾಯಕರಾವ್ ವಿದ್ಯಾಲಂಕಾರ, ಪಂಡಿತ ನರೇಂದ್ರಜಿ, ಗಣಪತಿಶಾಸ್ತ್ರಿ, ಗೋಪಾಲದೇವ ಇವರೆಲ್ಲರಿಗೂ ಹೋರಾಟಕ್ಕೆ ವೇದಿಕೆ ನೀಡಿದ್ದು ಆರ್ಯ ಸಮಾಜ.

ಕರ್ನಾಟಕದ ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನಲ್ಲಿರುವ ಮುಧೋಳ ಕಂದಾಯ ಇಲಾಖೆಯ ಹೋಬಳಿಯಾಗಿದ್ದು, ಇದು ಕರ್ನಾಟಕ-ಆಂಧ್ರ ಗಡಿಭಾಗದಲ್ಲಿದೆ. ಸುತ್ತಮುತ್ತಲಿನ ಕೋಲಕುಂದಾ, ಮದನಾ, ಕೋನಾಪುರ, ಬುರಗಪಲ್ಲಿ, ಕಡಲಾಲ, ಮೇದಕ, ಚಂದ್ರಕಲಾ, ರಿಬ್ಬನಪಲ್ಲಿ, ಕಸ್ತೂರಪಲ್ಲಿ ಮುಂತಾದ ಗಡಿಗ್ರಾಮಗಳಿಗೆ ಈ ಗ್ರಾಮವೇ ಆರ್ಥಿಕ ವ್ಯವಹಾರಗಳಿಗೆ ಮಾರುಕಟ್ಟೆ. ಶೈಕ್ಷಣಿಕ ಶಾಲಾ-ಕಾಲೇಜು, ಅಂಚೆ, ಕಂದಾಯ, ಬ್ಯಾಂಕಿಂಗ್, ದೂರವಾಣಿ ಸೇವೆಯನ್ನು ಸುತ್ತಮುತ್ತಲಿನ ಗ್ರಾಮಗಳಿಗೆ ಒದಗಿಸುತ್ತದೆ. ಕರ್ನಾಟಕದ ಗಡಿಗ್ರಾಮಗಳಲ್ಲದೆ ಆಂಧ್ರದ ಗಡಿಗ್ರಾಮಗಳು ಇದರ ಜೊತೆಗೆ ಸಂಪರ್ಕ ಹೊಂದಿವೆ.

೨.೩.೭. ಎಲೇರಾಜೋಳ

ವರಕವಿ ಮುರುಘೇಂದ್ರಸ್ವಾಮಿ ನೆಲೆಸಿದ ಎಲೇರಾಜೋಳ ಗ್ರಾಮವು ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಕರ್ನಾಟಕಾಂಧ್ರ ಗಡಿಯ ಒಂದು ಸಣ್ಣ ಹಳ್ಳಿ. ಗುಲಬರ್ಗಾ ಕೊಡಂಗಲ್ ರಾಜ್ಯ ಹೆದ್ದಾರಿಯಿಂದ ೪ ಕಿ.ಮೀ. ದೂರದಲ್ಲಿದೆ. ಎಲೇರಾಜೋಳ ಗಡಿಗ್ರಾಮದಲ್ಲಿ ಕ್ರಿ.ಶ. ೧೦-೧೨ನೇ ಶತಮಾನಕ್ಕೆ ಸೇರಿದ ಚತುರ್ಭುಜ ಗಣೇಶವಿಗ್ರಹದ ಕೈಗಳಲ್ಲಿ ದಂತ, ಪರುಶ, ಕಮಲ ಮತ್ತು ಫಲಗಳಿವೆ. ಅಗಸೆ ಬಾಗಿಲು ಮತ್ತು ಮುರುಘೇಂದ್ರರ ಗದ್ದುಗೆ ಹಾಗೂ ದೇವಸ್ಥಾನ ಬಿಟ್ಟರೆ ಇಲ್ಲಿ ಪ್ರೇಕ್ಷಣೀಯ ವಾದುದು ಮತ್ತೇನು ಕಾಣಸಿಗುವುದಿಲ್ಲ. ಎಲೇರಾಜೋಳ ಗ್ರಾಮವು ಉಳಿದೆಲ್ಲ ವಿಷಯಗಳಲ್ಲಿ ನಮ್ಮ ಇತರ ಗಡಿಗ್ರಾಮಗಳಂತೆ ಇರುವ ಒಂದು ಸಾಮಾನ್ಯ ಹಳ್ಳಿ. ಆದರೆ ನಾಡಿನ ಗಮನ ಈ ಸಣ್ಣ ಹಳ್ಳಿಯ ಕಡೆಗೆ ಹರಿದದ್ದು ವರಕವಿ ಮುರುಘೇಂದ್ರಸ್ವಾಮಿ ಇಲ್ಲಿ ನೆಲೆಸಿದ ಮೇಲೆಯೆ. ನೂರೊಂದು ಪವಾಡಗಳನ್ನು ಮಾಡಿ ಸುತ್ತಮುತ್ತಲಿನ ಜನರನ್ನು ಆಕರ್ಷಿಸಿದಾಗಲೇ ಈ ಗ್ರಾಮ ಹೆಸರಾದದ್ದು. ಇವರು ನೆಲೆನಿಂತ ಮೇಲೆ ಧಾರ್ಮಿಕ ಮತ್ತು ಆಧ್ಯಾತ್ಮಿಕ ಚಟುವಟಿಕೆಗಳು ಇಲ್ಲಿ ಹೆಚ್ಚಾದವು. ಮುರುಘೇಂದ್ರಸ್ವಾಮಿ ಮಹಾಮಹಿಮರಾಗಿ, ಪವಾಡಪುರುಷರಾಗಿ, ಆಧ್ಯಾತ್ಮದ ಮಹಿಮರಾಗಿ, ಯಲ್ಲಮ್ಮ ದೇವಿಯನ್ನು ಒಲಿಸಿಕೊಂಡಿದ್ದರು. ಅವಧೂತರಾಗಿ, ವರಕವಿಯಾಗಿ, ಹಲವು ಭಕ್ತರಿಗೆ ಒಂದೊಂದು ರೀತಿಯಲ್ಲಿ ಗೋಚರಿಸಿ ತಮ್ಮ ಲೀಲೆಗಳನ್ನು, ಪವಾಡಗಳನ್ನು ಜೀವನದುದ್ದಕ್ಕೂ ತೋರ್ಪಡಿಸಿ ಭಕ್ತರನ್ನು ತಮ್ಮ ಅನುಯಾಯಿಗಳಾಗಿ ಮಾಡಿಕೊಂಡಿದ್ದರು. “ಶರಣರನ್ನು ಮರಣದಲ್ಲಿ ನೋಡು” ಎಂಬ ಶರಣರ ಉಕ್ತಿಯಂತೆ ಭಕ್ತರಿಗೆ ಸಂದೇಶ, ಮಾರ್ಗದರ್ಶನ ನೀಡುತ್ತಾ ಅವರನ್ನು ಮೋಕ್ಷದೆಡೆಗೆ ಕೊಂಡ್ಯೊದಿದ್ದರು.

ಆಧ್ಯಾತ್ಮಿಕವಾಗಿ ಮತ್ತು ಅನುಭಾವ ಸಾಹಿತ್ಯದಲ್ಲಿ ಮುಂದುವರೆದರೂ ಭೌತಿಕವಾಗಿ ಎಲೇರಾಜೋಳ ಗ್ರಾಮ ಇಂದು ಅತ್ಯಂತ ಹಿಂದುಳಿದಿದೆ. ಈ ಗ್ರಾಮದಲ್ಲಿ ಕನಿಷ್ಟ ಮೂಲಭೂತ ಸೌಕರ್ಯಗಳು ನಮಗೆ

ಕಾಣಸಿಗುವುದಿಲ್ಲ. ನಿಜಾಂ ಸರಕಾರದ ಪ್ರಭಾವವೋ, ಏಕೀಕರಣದ ಪ್ರಭಾವವೋ ಅಥವಾ ಇಂದಿನ ಸರಕಾರದ ವೈಫಲ್ಯವೋ ಈ ಗಡಿಗ್ರಾಮವು ಇದು ಹಿಂದುಳಿದಿದೆ ಎಂದು ಬರೀ ಬಾಯಿಮಾತಿನಿಂದ ಹೇಳಿದರೆ ಅದರ ಸ್ಥಿತಿ ಅರ್ಥವಾಗುವುದಿಲ್ಲ. ಅದನ್ನು ಅಂಕಿ-ಅಂಶಗಳಿಂದ ನೋಡಿ ತೀರ್ಮಾನಿಸಬೇಕು. ವರಕವಿಯ ನೆಲೆಯಾಗಿ ಗುರುತಿಸಲ್ಪಡುವ ಈ ಗ್ರಾಮದಲ್ಲಿ ತೆಲುಗು ಪ್ರಭಾವ ಅತಿಯಾಗಿದ್ದು, ಗ್ರಾಮದ ಜನಜೀವನದಲ್ಲಿ ಅದು ಗಾಢವಾದ ಪರಿಣಾಮವನ್ನು ಬೀರಿದೆ. ತಮ್ಮ ಮನೆಗಳಲ್ಲಿ ಮಾತೃಭಾಷೆ ಕನ್ನಡವನ್ನು ಬಳಸಿದರೂ ವ್ಯವಹಾರದಲ್ಲಿ ತೊಡಗುವ ಜನರು ತೆಲುಗು ಭಾಷೆಯನ್ನೇ ವ್ಯವಹಾರ ಭಾಷೆಯನ್ನಾಗಿ ಬಳಸುವುದು ಇಲ್ಲಿ ಕಂಡುಬರುತ್ತದೆ. ಇಲ್ಲಿನ ಜನರೂ ಕರ್ನಾಟಕಕ್ಕಿಂತ ಆಂಧ್ರ ರಾಜ್ಯದ ಮೇಲೆ ಹೆಚ್ಚು ವ್ಯಾಮೋಹ ತೋರಿರುತ್ತಾರೆ. ಆಂಧ್ರದ ರಾಜಧಾನಿ ಹೈದರಾಬಾದ್ ಕೇವಲ ೧೫೦ ಕಿ.ಮೀ. ಇರುವುದರಿಂದಲೋ ಏನೋ ಎಲ್ಲ ವ್ಯವಹಾರಗಳು ಆಂಧ್ರ ರಾಜ್ಯದಲ್ಲಿ ನಡೆಯುತ್ತವೆ. ಎಲೇರಾಜೋಳ ಗ್ರಾಮದಿಂದ ಕೇವಲ ೮ ಕಿ.ಮೀ. ಕ್ರಮಿಸಿದರೆ ಆಂಧ್ರಪ್ರದೇಶದ ಗಡಿ ಪ್ರಾರಂಭವಾಗುತ್ತದೆ. ಆಂಧ್ರದ ಗಡಿಗ್ರಾಮಗಳು ಇಂದು ಸಾಕಷ್ಟು ಮುಂದುವರೆದಿವೆ. ಎಲ್ಲ ರೀತಿಯ ಮೂಲಭೂತ ಸೌಕರ್ಯಗಳನ್ನು ಹೊಂದಿವೆ. ಆದ್ದರಿಂದ ಕರ್ನಾಟಕದ ಗಡಿಗ್ರಾಮಗಳು ಆಂಧ್ರಪ್ರದೇಶದಲ್ಲಿ ವಿಲೀನವಾಗಬೇಕೆಂಬ ಬಯಕೆ ಅಲ್ಲಿನ ಜನರಲ್ಲಿ ಮೂಡುತ್ತಿದೆ.

**೨.೩.೮. ಯಾದಗೀರ**

ಭೀಮಾ ನದಿಯ ದಂಡೆಯ ಮೇಲಿರುವ ಯಾದಗೀರ ಪಟ್ಟಣ, ತಾಲೂಕು ಮತ್ತು ಉಪಕಂದಾಯ ಕೇಂದ್ರವಾಗಿದ್ದು, ಉತ್ತರ ಭಾರತ ಮತ್ತು ದಕ್ಷಿಣ ಭಾರತಗಳ ನಡುವಿನ ರೈಲು ಸಂಪರ್ಕ ಕೊಂಡಿಯಾಗಿದೆ. ಪ್ರಾಚೀನ ಶಾಸನಗಳಲ್ಲಿ 'ಎತಗಿರಿ' ಎಂದು ಉಲ್ಲೇಖಗೊಂಡಿರುವ ಯಾತಗಿರಿಯು ಕಲ್ಯಾಣಿ ಚಾಲುಕ್ಯರ, ದೇವಗಿರಿ ಯಾದವರ, ಬಹಮನಿ, ಆದಿಲ್‌ಶಾಹಿ ಹಾಗೂ ನಿಜಾಮ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಊರ ಪೂರ್ವಕ್ಕೆ ಗುಡ್ಡದ ಮೇಲಿರುವ ಮೂರು ಸುತ್ತಿನ ಕೋಟೆಯು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ರಚನೆಯಾಗಿದ್ದು, ನಂತರ ಈ ಕೋಟೆಯನ್ನು ಯಾದವರು ಬಲಿಷ್ಠಪಡಿಸಿದರು. ದೇವಗಿರಿಯ ಯಾದವರು ಚಾಲುಕ್ಯರಂತೆ ತಮ್ಮ ಆಡಳಿತವನ್ನು ಮುಂದುವರೆಸುತ್ತಾ ಆಡಳಿತ ಕ್ರಮದಲ್ಲಿ ಇವರ ಸಮಕಾಲೀನ ಸ್ಥಿತಿಗತಿಗನುಗುಣವಾಗಿ ರಾಜನು ರಾಜ್ಯದ ಮುಖ್ಯನು, ನಿರಂಕುಶನೂ ಆಗಿದ್ದು, ಸಾಮ್ರಾಜ್ಯವನ್ನು ವಿಷಯ ಅಥವಾ ಪ್ರಾಂತ್ಯಗಳಾಗಿ ವಿಂಗಡಿಸಿದ್ದರು. ದೇಶವೆಂಬ ಆಡಳಿತ ವಿಭಾಗವಿದ್ದು, ವಿಷಯವನ್ನು ನಾಡು ಮತ್ತು ಕಂಪಣಗಳಾಗಿ ವಿಭಜಿಸಲಾಗಿತ್ತು. ನಾಡುಗಳಲ್ಲಿ ನಾಡು ಮತ್ತು ಮಹಾನಾಡುಗಳೆಂಬ ವರ್ಗಗಳಿದ್ದವು. ಈ ಯಾದವರ ಕಾಲಕ್ಕೆ 'ಎತಗಿರಿ'>'ಯಾದವಗಿರಿ'ಯಾಗಿ, ಮುಂದೆ ಜನಸಾಮಾನ್ಯರು 'ಯಾದಗಿರಿ' ಎಂಬ ಹೆಸರನ್ನು ಪ್ರಚಲಿತಕ್ಕೆ ತಂದರು. ಯಾತಗೀರಿಯಲ್ಲಿ ಒಟ್ಟು ೨ ಕನ್ನಡ ಮತ್ತು ೩ ಪರ್ಷಿಯನ್ ಶಾಸನಗಳು ಸಿಕ್ಕಿವೆ. ಕನ್ನಡ ಶಾಸನಗಳ ಕಾಲ ಸುಮಾರು ೧೦-೧೧ನೇ ಶತಮಾನ.

**ಕನ್ನಡದ ಶಾಸನಗಳು**

೧. ಯಾದಗಿರಿಯ ಬೆಟ್ಟದ ಕೋಟೆಯ ದ್ವಾರದ ಮೇಲಿರುವ ಒಂದು ಸಾಲಿನ ಶಾಸನ ಸಗರ ನಾಡಿನ ಜಗನ್ನಾಥನಿಂದ ನಿರ್ಮಿತವಾಗಿದೆ.

೨. ಕೋಟೆಯಲ್ಲಿನ ತೀರ್ಥಂಕರ ಗುಹೆಯ ಎಡಭಾಗದ ಬಂಡೆಯ ಮೇಲಿನ ಶಾಸನ ಜೈನ ಬಸದಿಗೆ ಸಂಬಂಧಿಸಿದ್ದಾಗಿದೆ.

**ಪರ್ಷಿಯನ್ ಶಾಸನಗಳು**

೧. ಕ್ರಿ.ಶ. ೧೫೪೬ರಲ್ಲಿನ ಒಂದನೆಯ ಇಬ್ರಾಹಿಂ ಆದಿಲ್‌ಷಾನ ಕಾಲಕ್ಕೆ ಸೇರಿದ ಶಾಸನವು ಇಲ್ಲಿನ ನಿರ್ಮಾಣದ ಬಗ್ಗೆ ತಿಳಿಸುತ್ತದೆ.

೨. ಮಿರ್ಜಾ ಅಲಿಯ ಮಗನಾದ ಖ್ವಾಜಾ ಹಸನ ಕಿರ್ಮಾನಿಯು ಕ್ರಿ.ಶ. ೧೫೭೩ರಲ್ಲಿ ನಿರ್ಮಿಸಿದ ಈ ಶಾಸನ ಒಂದನೆಯ ಅಲಿ ಆದಿಲ್ ಷಾನ ಆಳ್ವಿಕೆಗೆ ಸಂಬಂಧಿಸಿದ್ದಾಗಿದೆ.

೩. ಕೋಟೆಯ ಮೇಲಿರುವ ನಿಜಾಂ ಬುರುಜು ಶಾಸನ ನಿಜಾಂ ಅಲಿಖಾನ್ ಯಾದಗಿರಿಗೆ ಭೇಟಿ ನೀಡಿದ್ದ ವಿಷಯವನ್ನು ತಿಳಿಸುತ್ತದೆ.

ಇವು ಕನ್ನಡ ಮತ್ತು ಪರ್ಷಿಯನ್ ಶಾಸನಗಳಿಗೆ ಸಂಬಂಧಪಟ್ಟವುಗಳಾದರೇ, ಇದರಂತೆ ಇಲ್ಲಿ ಅನೇಕ ಪ್ರಾಚೀನ ಸ್ಮಾರಕಗಳ ಅವಶೇಷಗಳು ಕಂಡುಬರುತ್ತವೆ. ಜಿನ್ನಪ್ಪನ ಬೆಟ್ಟದ ಮೇಲಿರುವ ಗುಹಾಂತರ ಬಸದಿ ಸುಮಾರು ೧೦-೧೧ನೇ ಶತಮಾನದ ರಚನೆಯಾಗಿದ್ದು, ಬಸದಿಯಿರುವ ಹೆಬ್ಬಂಡೆಯ ಮೇಲಿರುವ ಪಾರ್ಶ್ವನಾಥ ತೀರ್ಥಂಕರನ ಸುಮಾರು ೪ ಅಡಿ ಎತ್ತರದ ಉಬ್ಬುಶಿಲ್ಪವು ಬಸದಿಗೆ ಕಿರೀಟಪ್ರಾಯವಾಗಿದೆ. ಈ ಬಸದಿಯಲ್ಲಿ ಗರ್ಭಗೃಹದ ಬೆನ್ನ ಬಂಡೆಯ ಮೇಲೆ ಕೆತ್ತಿರುವ ಜಿನಮೂರ್ತಿಗಳ ಸಾಲಿದ್ದು, ಅವುಗಳಲ್ಲಿನ ನಡುವಣ ಪದ್ಮಾಸಿನ ತೀರ್ಥಂಕರನ ಶಿಲ್ಪ ಬಹಳ ಸುಂದರವಾಗಿದೆ.

ಆದಿಲ್‌ಷಾಹಿ ಕಾಲಕ್ಕೆ ಸೇರಿದ ಮಸೀದಿ ಹಾಗೂ ದರ್ಗಾಗಳು ಈ ಕೋಟೆಯೊಳಗೆ ಇದ್ದು, ಇವರ ಕಾಲದ ಜುಮ್ಮಾ ಮಸೀದಿ ಹಾಗೂ ಪುಷ್ಕರಣಿಯನ್ನು ಗುಡ್ಡದ ಕೋಟೆಯೊಳಗೆ ನೋಡಬಹುದಾಗಿದೆ. ಇಲ್ಲಿಯ ಯಾಕೂಬ ಖಾದ್ರಿ, ಶಹಾಜಾನ ಷಾ ಹಾಗೂ ಪೀರ್ ಗಯಬಸಾಬನ ದರ್ಗಾಗಳು ಪ್ರಸಿದ್ಧವಾಗಿವೆ. ಬಹುಶಃ ಹಿಂದೆ ಇದೊಂದು ತ್ರಿಕೂಟವಾಗಿದ್ದು ನಂತರದಲ್ಲಿ ಮುಂದಿನ ನವರಂಗದ ಭಾಗ ನಾಶವಾಗಿರುವಂತೆ ತೋರುತ್ತದೆ. ಪ್ರತಿ ವರ್ಷಕ್ಕೊಮ್ಮೆ ಎರಡು ದಿನಗಳ ಉರುಸು ಇಂದಿಗೂ ತಪ್ಪದೇ ನಡೆಯುತ್ತದೆ.

ಕಲ್ಯಾಣಿ ಚಾಲುಕ್ಯರ, ಯಾದವರ, ಬಹಮನಿ, ಆದಿಲ್‌ಷಾಹಿ ಹಾಗೂ ನಿಜಾಮರ ಕಾಲದಲ್ಲಿ ಯಾದಗಿರಿ ಚಾರಿತ್ರಿಕ ಮಹತ್ವ ಪಡೆದುಕೊಂಡಿತ್ತು. ಈ ಎಲ್ಲ ಚಾರಿತ್ರಿಕ ಅಂಶಗಳನ್ನು ಗಮನಿಸುತ್ತ, ಇಲ್ಲಿ ಸಿಕ್ಕ ಜೈನ ಸ್ಮಾರಕಗಳಿಂದ ಹಿಂದೊಮ್ಮೆ ಜೈನ ಮತ ಇಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಮನದಟ್ಟಾಗುತ್ತದೆ.

ಈ ಚಾರಿತ್ರಿಕ ಸಂಗತಿಗಳಲ್ಲದೆ ಯಾದಗೀರ ಪತ್ರಿಕಾರಂಗ, ಬೀಡಿಉದ್ಯಮ ಮತ್ತು ಬಟ್ಟೆ ನೇಯ್ಗೆಗಳಿಂದ ಹೆಸರು ಮಾಡಿದೆ. “ಧರ್ಮ ಸಂಜೀವಿನಿ, ಅಮರವಾಣಿ, ಹೈದರಾಬಾದ್-ಕರ್ನಾಟಕ, ಡೆಕ್ಕನ್ ಪ್ರಭಾತ, ವಿಶ್ವಕಲ್ಯಾಣಗಳಂತಹ ಪತ್ರಿಕೆಗಳು ಸ್ವಾತಂತ್ರ್ಯಪೂರ್ವದಲ್ಲಿ ಯಾತಗಿರಿಯಿಂದ ಪ್ರಕಟಗೊಳ್ಳುತ್ತಿದ್ದವು.”[೮] ಹೈದರಾಬಾದಿನ ನಿಜಾಂನ ಆಡಳಿತದ ಸಂದರ್ಭದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹೈದರಾಬಾದ್-ಕರ್ನಾಟಕದ ಮೊಟ್ಟಮೊದಲ ಕನ್ನಡ ದಿನಪತ್ರಿಕೆಯೆಂದರೆ ಯಾದಗಿರಿಯ ‘ಧರ್ಮ ಸಂಜೀವಿನಿ’ ಕೆಲವೇ ಕೆಲವು ವರ್ಷಗಳವರೆಗೆ ನಡೆದು ನಿಂತು ಹೋದರೂ, ಆ ಕಾಲದಲ್ಲಿ ಇದು ಕನ್ನಡ ಉಳುವಿಗಾಗಿ, ಜಾಗೃತಿಗಾಗಿ ಸಲ್ಲಿಸಿದ ಸೇವೆ ಸ್ಮರಣಾರ್ಹವಾದದ್ದು. ಕ್ರಿ.ಶ. ೧೯೩೦ರ ಸುಮಾರಿಗೆ ಯಾದಗಿರಿಯಿಂದ ‘ಧರ್ಮ ಸಂಜೀವಿನಿ’ ಪ್ರಾರಂಭಿಸುವುದಕ್ಕೂ ಮುಂಚೆ ಈ ಪತ್ರಿಕೆಯು ಕ್ರಿ.ಶ. ೧೯೨೪ರಿಂದಲೇ ರಾಯಚೂರಿನಿಂದ ಹೊರಬರುತ್ತಿತ್ತು. ಬಸವರಾಜಶಾಸ್ತ್ರಿ ನಾಯಕಲ್ ಮತ್ತು ಮಸ್ಕಿ ಬಸಪ್ಪಶಾಸ್ತ್ರಿಯವರು ಇದರ ಸಂಪಾದಕರಾಗಿದ್ದರು.”[೯] ಈ ಪತ್ರಿಕೆಯಲ್ಲಿ ಕಥೆ, ಕವನ, ನಾಡು-ನುಡಿಗಳ ಲೇಖನಗಳಿದ್ದರೂ ಹೆಚ್ಚಾಗಿ ಧಾರ್ಮಿಕ ಲೇಖನಗಳು ಇದರಲ್ಲಿರುತ್ತಿದ್ದವು. ನಿಜಾಂನಿಂದ ಹಿಂದೂ ಧರ್ಮಕ್ಕೆ ಅನ್ಯಾಯವಾಗುತ್ತಿದ್ದಾಗ ಜನರಲ್ಲಿ ಧಾರ್ಮಿಕ ಭಾವನೆಯನ್ನು ಮೂಡಿಸಲು, ಧಾರ್ಮಿಕ ಸಂಘಟನೆಗಾಗಿ ಧರ್ಮ ಸಂಜೀವಿನಿ ಕಾರ್ಯ ನಿರ್ವಹಿಸಿತ್ತು. ನಂತರ ನಿಜಾಂನಿಂದ ಸ್ವಾತಂತ್ರ್ಯ ಬಂದು ಕರ್ನಾಟಕದ ಏಕೀಕರಣ ಸಂದರ್ಭದಲ್ಲಿ ಕನ್ನಡ ನುಡಿ, ಕನ್ನಡ ಭಾಷೆ, ಕನ್ನಡ ಸಾಹಿತ್ಯವನ್ನು ತನ್ನ ಪತ್ರಿಕೆ ಯಲ್ಲಿ ಪ್ರಕಟಿಸುತ್ತಾ ಕನ್ನಡಕ್ಕಾಗಿ ಕಂಕಣಬದ್ಧವಾಗಿತ್ತು.

“ಕ್ರಿ.ಶ. ೧೯೫೦ರ ಸುಮಾರಿಗೆ ‘ಹೈದ್ರಾಬಾದ ಕನ್ನಡಿಗ’ ಎಂಬ ಸಾಪ್ತಾಹಿಕ ಹಾಗೂ ‘ಹೈದರಾಬಾದ್ ಕರ್ನಾಟಕ’ ಎಂಬ ದಿನಪತ್ರಿಕೆ ಎಸ್.ಆರ್. ಕಂಠಿಯವರ ಸಂಪಾದಕತ್ವದಲ್ಲಿ ಪ್ರಾರಂಭವಾದವು. ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ ಈ ಪತ್ರಿಕೆಗಳು ಮಾಡಿದ ಕೆಲಸ ಗಣನೀಯವಾದದ್ದು. ಬಹುಶಃ ಇದೇ ಸಮಯದಲ್ಲಿ ಜೆ.ಎ. ಕುಲಕರ್ಣಿ ಹಾಗೂ ಕನ್ಯಾಳ ಹನುಮಂತರಾಯರು ‘ಡೆಕ್ಕನ ಪ್ರಭಾತ್’ ಮಾಸಿಕವನ್ನು ಹೊರತಂದರು. ಬಿ. ಮಹಾದೇವಪ್ಪ ಅವರ ಸಂಪಾದಕತ್ವದಲ್ಲಿ ‘ವಿಶ್ವಕಲ್ಯಾಣ’ ಪತ್ರಿಕೆಯು ಯಾದಗಿರಿ ಯಿಂದಲೇ ಪ್ರಕಟಗೊಳ್ಳುತ್ತಿತ್ತು. ಈ ಪತ್ರಿಕೆಗಳು ಸಾಮಾಜಿಕ, ಧಾರ್ಮಿಕ, ಜಾಗೃತಿ, ಶರಣ ಸಿದ್ಧಾಂತ, ವಚನ ಸಾಹಿತ್ಯ, ಕನ್ನಡ ನಾಡು-ನುಡಿಯ ಚಿಂತನೆ ಮುಂತಾದ ವಿಚಾರಗಳನ್ನು ಜನಸಾಮಾನ್ಯರ ಹತ್ತಿರಕ್ಕೆ ಕೊಂಡೊಯ್ದವು.”[೧೦] ಹೀಗೆ ಹೈದರಾಬಾದ್-ಕರ್ನಾಟಕದ ಗಡಿಭಾಗದಲ್ಲಿ ಯಾದಗಿರಿಯು ಪತ್ರಿಕಾ ರಂಗಕ್ಕೆ ತನ್ನದೇ ಆದ ಕೊಡುಗೆ ನೀಡಿತ್ತು.

ಈವರೆಗೂ ನೋಡಿದಂತ ಪ್ರಮುಖ ಗಡಿಗ್ರಾಮಗಳು ಒಂದಲ್ಲ ಒಂದು ರೀತಿಯಲ್ಲಿ ಪ್ರಸ್ತುತವಾಗಿ ಇಂದು ಪ್ರಾಮುಖ್ಯತೆ ಪಡೆದುಕೊಂಡಿರುವುದು ಗೊತ್ತಾಗುತ್ತದೆ. ಚಿಂಚೋಳಿ, ಸೇಡಂ, ಯಾದಗೀರ, ಆಡಕಿ ಚಾರಿತ್ರಿಕ ಅಂಶಗಳಿಗೆ ಮುಖ್ಯವಾಗುತ್ತವೆ. ಚಿಂಚೋಳಿಯನ್ನು ೧೭-೧೯ನೇ ಶತಮಾನದಲ್ಲಿ ಬೂಹುಲಲ್ ಖಾನನ ಮಗ ಅಬ್ದುಲ್ ಅಮೀರ್‌ಖಾನನು ಆಳುತ್ತಾ ಒಂದು ಕೋಟೆಯನ್ನು ಕಟ್ಟಿಸಿರುವುದು

ಇಲ್ಲಿ ಸಿಕ್ಕ ಪರ್ಶಿಯನ್ ಶಾಸನಗಳಿಂದ ಗೊತ್ತಾಗುತ್ತದೆ. ಸೇಡಂ ಗ್ರಾಮವನ್ನು ಈ ಮೊದಲು ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಹೈಹಯ ವಂಶಸ್ಥರು ಮತ್ತು ಶಿಲಾಹಾರರು, ಮುಸ್ಲಿಂ ಅರಸರು, ಆಂಧ್ರದ ಕಾಕತೀಯ ಅರಸರು ಆಳಿರುವುದಾಗಿ ಇಲ್ಲಿನ ಶಾಸನಗಳಿಂದ ಗೊತ್ತಾಗುತ್ತದೆ. ಈ ಬೇರೆ ಬೇರೆ ಅರಸರ ಕಾಲದಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ, ಮುಸ್ಲಿಂ ಧರ್ಮಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು ಎಂಬುದಕ್ಕೆ ಇಲ್ಲಿ ಸಿಕ್ಕ ಪ್ರಾಚ್ಯ ಅವಶೇಷಗಳು ಆಧಾರ ನೀಡುತ್ತವೆ. ಅಂತೆಯೇ 'ಸೇಡಿಂಬ' ಎಂಬುದು ಸೇಡಂನ ಪ್ರಾಚೀನ ಹೆಸರಾಗಿದ್ದು, ಇದು ಚಾರಿತ್ರಿಕ ಕಾಲಕ್ಕೆ ಮಹತ್ವದ ಘಟಿಕಾಲಯವಾಗಿತ್ತು. ಆಡಕಿ ಗ್ರಾಮವು ೬ನೇ ಶತಮಾನದ ಕಾಲಕ್ಕೆ ಕಲ್ಯಾಣಿ ಚಾಲುಕ್ಯರ ಒಡೆತನದಲ್ಲಿತ್ತು. ಇದು ಅಂದು ಪ್ರಸಿದ್ಧ ಜೈನರ ಆರಾಧನ ಕ್ಷೇತ್ರ ಮತ್ತು ಜೈನ ಬಸದಿಗಳ ಕೇಂದ್ರವಾಗಿತ್ತು. ಯಾದಗೀರಿ ಗ್ರಾಮವು ಕಲ್ಯಾಣಿ ಚಾಲುಕ್ಯರು, ದೇವಗಿರಿಯ ಯಾದವರು, ಬಹಮನಿ ಸುಲ್ತಾನರು, ಆದಿಲ್‌ಶಾಹಿ ಹಾಗೂ ನಿಜಾಂ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಯಾದವರ ಕಾಲಕ್ಕೆ 'ಎತಗಿರಿ' ಎಂಬ ಪ್ರಾಚೀನ ಹೆಸರನ್ನು ಪಡೆಯುವುದರೊಂದಿಗೆ ಪ್ರಸಿದ್ಧಿಗೆ ಬಂದಿತ್ತು. ಮುಂದೆ ಮುಸ್ಲಿಂ ಅರಸರ ಕಾಲಕ್ಕೆ ಯಾದಗೀರಿ ಆಡಳಿತ ಕೇಂದ್ರವಾಗಿ ಪ್ರಾಮುಖ್ಯತೆ ಪಡೆಯಿತು. ಚಂದ್ರಂಪಳ್ಳಿ ಜಲಾಶಯ ಇವತ್ತು ಈ ಭಾಗದಲ್ಲಿನ ನೀರಾವರಿಗೆ ಪ್ರಮುಖ ಆಧಾರವಾಗಿದೆ. ಮಿರ್‍ಯಾಣ ಹಾಸುಗಲ್ಲಿಗೆ ತುಂಬಾ ಪ್ರಸಿದ್ಧಿಯನ್ನು ಪಡೆಯುವುದರೊಂದಿಗೆ ಪ್ರಮುಖವಾಗಿ ಇಲ್ಲಿನ ಆರ್ಥಿಕ ಚಟುವಟಿಕೆ ಮತ್ತು ಸ್ಥಳೀಯ ಕನ್ನಡಿಗರಿಗೆ ಹಾಗೂ ಪಕ್ಕದ ಆಂಧ್ರದ ಗಡಿ ಗ್ರಾಮಸ್ಥರಿಗೆ ಉದ್ಯೋಗವನ್ನು ಕಲ್ಪಿಸಿದೆ. ಮುಧೋಳ ಈ ಹಿಂದೆ ಚಾರಿತ್ರಿಕ ಮಹತ್ವ ಪಡೆದಿತ್ತು. ಅಲ್ಲದೆ, ಗಜಾಕುಂಶನೆಂಬ ಕಲಿ ಮತ್ತು ಕವಿಯ ಊರೂ ಕೂಡಾ ಆಗಿತ್ತು. ಹೈದರಾಬಾದ್-ಕರ್ನಾಟಕದ ವಿಮೋಚನೆಯಲ್ಲಿ ಈ ಗಡಿಗ್ರಾಮ ಮುಂಚೂಣಿ ಯಲ್ಲಿತ್ತು. ಗಡಿಗ್ರಾಮ ಎಲೇರಾಜೋಳ ತತ್ವಪದಕಾರ ಶ್ರೀ ಮುರುಘೇಂದ್ರಸ್ವಾಮಿಯಿಂದ ಪ್ರಸಿದ್ಧವಾಗಿದ್ದು, ಇವರ ಪ್ರಭಾವ ಈ ಭಾಗದಲ್ಲೆಲ್ಲ ಹರಡಿರುವುದು ಕಂಡು ಬರುತ್ತದೆ.

ಒಟ್ಟಾರೆಯಾಗಿ ಈ ಎಲ್ಲ ಗಡಿಗ್ರಾಮಗಳು ಚಾರಿತ್ರಿಕ, ಭಾಷಿಕ, ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ ಕಾರಣಗಳಿಂದ ನಮ್ಮ ಗಮನ ಸೆಳೆಯುತ್ತವೆ. ಈ ಕಾರಣಗಳಿಂದಾಗಿಯೇ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ಒಂದು ವಿಶಿಷ್ಟ ಸೌಹಾರ್ದತೆ ಜನರಲ್ಲಿ ಬೆಳೆದುಕೊಂಡು ಬಂದಿದೆ. ಇಂತಹ ಗಡಿಗ್ರಾಮಗಳನ್ನು ಅಧ್ಯಯನದಲ್ಲಿ ತೊಡಗಿಸಿಕೊಳ್ಳುವುದು ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ.

**ಟಿಪ್ಪಣಿಗಳು**

೧. ಕರ್ನಾಟಕದ ಖನಿಜ ನಿಕ್ಷೇಪಗಳು - ಬಿ. ರಾಮರಾವ್ ಮತ್ತು ಎಸ್. ವರದರಾಜನ್, ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಕಂಪನಿ, ೧೯೯೮, ಪು. ೩

೨. ಕರ್ನಾಟಕ ಚರಿತ್ರೆ ಸಂಪುಟ-೧ - ಪ್ರೊ.ಬಿ. ಷೇಕ್ ಅಲಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೪೮೨

೩. ಸಮಗ್ರ ಕರ್ನಾಟಕ ಚರಿತ್ರೆ - ಹೆಚ್.ವಿ. ಶ್ರೀನಿವಾಸಮೂರ್ತಿ ಮತ್ತು ಆರ್. ರಾಮಕೃಷ್ಣ, ೧೯೯೫, ಪು. ೧೮.

೪. ಕರ್ನಾಟಕ ಸಂಸ್ಕೃತಿ - ಡಾ.ಎಂ. ಚಿದಾನಂದಮೂರ್ತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪, ಪು. ೭

೫. ಮೌರ್ಯ ಮತ್ತು ಶಾತವಾಹನರ ಯುಗ - ಪ್ರೊ. ಲಕ್ಷ್ಮಣ್ ತೆಲಗಾವಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು. ೮೭

೬. ಕಲಬುರ್ಗಿ ಜಿಲ್ಲೆಯ ಶಾಸನಗಳು - ಸಂ.ಹನುಮಾಕ್ಷಿ ಗೋಗಿ, ಶಿವಚಂದ್ರ ಪ್ರಕಾಶನ, ನವನಗರ, ಹುಬ್ಬಳ್ಳಿ, ೧೯೯೬, ಪು. xxxiii

೭. ಸೇಡಿಂಬದುರ್ಗದ ಶಾಸನಗಳು - ಮುಡಬಿ ಗುಂಡೇರಾವ್, ಸಂಗಮೇಶ್ವರ ಪ್ರಕಾಶನ, ಸೇಡಂ, ೨೦೦೨, ಪು. ೪೫

೮. ಕಾಗಿಣಾ ಸವಿ ನೆನಪು - ಲೇಖನ; ಪ್ರಭು ಖಾನಪುರೆ, ಜಿಲ್ಲಾ ಸಾಹಿತ್ಯ ಪರಿಷತ್ತು, ಗುಲಬರ್ಗಾ, ೨೦೦೩, ಪು. ೧೯

೯. ಅದೇ.,

೧೦. ಅದೇ.,

• • •

## ಅಧ್ಯಾಯ : ಮೂರು

# ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಸೌಹಾರ್ದತೆ

೩.೧. ಧಾರ್ಮಿಕ ತಾಣಗಳು

೩.೨. ಜನಪದ ದೈವಾಚರಣೆ

೩.೩. ಜನಪದ ಸಾಹಿತ್ಯ

೩.೪. ಜನಪದ ತತ್ವಪದ ಸಾಹಿತ್ಯ

೩.೧. ಧಾರ್ಮಿಕ ತಾಣಗಳು

ನಮ್ಮಲ್ಲಿ ಧರ್ಮಕ್ಕೆ ಪ್ರಾಮುಖ್ಯತೆ ಕೊಟ್ಟಷ್ಟು ಇನ್ನಾವುದಕ್ಕೂ ಮಾನ್ಯತೆ ಕೊಟ್ಟಿರುವುದು ಕಂಡು ಬಂದಿಲ್ಲ. ಪ್ರಾಚೀನ ಕಾಲದಿಂದಲೂ ಧರ್ಮ ಎಲ್ಲ ರಂಗಗಳಲ್ಲಿ ಭಾಗವಹಿಸಿದೆ. ನಮ್ಮನ್ನು ಆಳಿದ ಅನೇಕ ಅರಸು ಮನೆತನಗಳನ್ನು ಹಿಡಿತದಲ್ಲಿಟ್ಟುಕೊಂಡಿದ್ದ ಧರ್ಮಗಳು, ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಆಡಳಿತದಲ್ಲಿ ಭಾಗವಹಿಸಿರುವುದನ್ನು ನಾವು ಸೂಕ್ಷ್ಮವಾಗಿ ಗಮನಿಸಬಹುದು. ಒಂದು ರಾಜ್ಯದ ಅಳಿವು-ಉಳಿವನ್ನು ಧರ್ಮಗಳು ಹತೋಟಿಯಲ್ಲಿಟ್ಟುಕೊಂಡಿದ್ದವೆಂದರೆ ಧರ್ಮಗಳ ಸಾರ್ವಭೌಮತ್ವ ಅರಿವಿಗೆ ಬರುತ್ತದೆ. ಅನೇಕ ಧರ್ಮಗಳು ತಮ್ಮ ಉಳಿವಿಗಾಗಿ, ಬೆಳವಣಿಗೆಗಾಗಿ ತಮ್ಮದೇ ಆದಂತಹ ನೀತಿ, ನಿಯಮ, ಸಿದ್ಧಾಂತ, ಪ್ರಣಾಳಿಕೆಗಳೊಂದಿಗೆ ಬದುಕಿದ್ದವು. ಆದರೆ ಸದ್ಯದ ಪರಿಸ್ಥಿತಿ ಬದಲಾಗುತ್ತಿದೆ; ಬದಲಾಗಿದೆ. ಕೇವಲ ಒಂದೊಂದು ಗುಂಪಿಗೆ ಮೀಸಲಿದ್ದ ಧರ್ಮವು ತನ್ನ ಮೂಲ ಕಟ್ಟಳೆಯನ್ನು ಸಡಿಲಗೊಳಿಸಿ ಇತರ ಧರ್ಮದೊಂದಿಗೆ ನಡೆಯುತ್ತಿದೆ. ಒಂದು ಧರ್ಮ ಇನ್ನೊಂದು ಧರ್ಮದೊಂದಿಗಿನ ಹಳೆಯ ದ್ವೇಷ ಬಿಟ್ಟು, ಒಂದರೊಳಗೊಂದು ಎಂಬಂತೆ ಸೌಹಾರ್ದತೆಯನ್ನು ಇಂದು ಸಾಧಿಸುತ್ತಿದೆ. ಅವುಗಳಲ್ಲಿನ ಕೊಡು-ಕೊಳ್ಳುವಿಕೆಗಳು ಸ್ವಾಭಾವಿಕವೆಂಬಂತೆ ಮಾರ್ಪಡುತ್ತಿವೆ. ಒಂದು ಕಾಲದಲ್ಲಿನ ಭೌಗೋಳಿಕ ನೆಲೆಯನ್ನು ದಾಟಿ ಧರ್ಮಗಳು ಆರೋಗ್ಯಕರ ರೀತಿಯಲ್ಲಿ ಬೆಳೆಯುತ್ತಿವೆ. ಅಂತಲೇ ಈ ರೀತಿಯ ಪರಸ್ಪರ ಕೊಡು-ಕೊಳ್ಳುವಿಕೆಯು ಅರಿವಿಲ್ಲದಂತೆಯೇ ನಡೆಯುತ್ತದೆ. ಇಂತಹ ಸೌಹಾರ್ದತೆಯ ಬೆಳವಣಿಗೆಯಿಂದಲೇ ಕರ್ನಾಟಕದ ಗಡಿಯಲ್ಲಿರುವ ಯಾನಾಗುಂದಿಯ ಮಾತೆಮಾಣಿಕೇಶ್ವರಿಯ ದೇವಸ್ಥಾನ, ಗುರುಮಠಕಲ್ಲಿನ ಶ್ರೀ ಶಾಂತಲಿಂಗೇಶ್ವರ ಮಠ, ಮೈಲಾರದ ಮೈಲಾರಲಿಂಗ, ಕಸ್ತೂರಪಲ್ಲಿಯ ಲಂಕೆಬಸವಣ್ಣ, ಮೋತಕಪಲ್ಲಿಯ ಬಲಭೀಮಸೇನ - ಮುಂತಾದ ಧಾರ್ಮಿಕ ತಾಣಗಳಿಗೆ ಮೇಲಿಂದ ಮೇಲೆ ಎಲ್ಲ ಕೋಮಿನವರು ಕರ್ನಾಟಕ-ಆಂಧ್ರ ಭೌಗೋಳಿಕ ಗಡಿ ಎನ್ನದೇ ಇವುಗಳಿಗೆ ಬಂದು ಹೋಗುತ್ತಾರೆ. ಹೀಗೆ ಬಂದು ಹೋಗುವವರು ತಮ್ಮ ತಮ್ಮ ಸಂಸ್ಕೃತಿಗಳ ಕೊಡು-ಕೊಳ್ಳುವಿಕೆಗೆ ಬದ್ಧರಾಗುತ್ತಾರೆ. ಇದರಿಂದಾಗಿಯೇ ಇಲ್ಲಿ ಧರ್ಮ ಧರ್ಮಗಳ ಮತ್ತು ಗಡಿಗಳಲ್ಲಿನ ದ್ವಂದ್ವಗಳು ತಿಳಿಯಾಗುತ್ತವೆ.

ಗಡಿಭಾಗದಲ್ಲಿ ಇಂತಹ ಧಾರ್ಮಿಕ ತಾಣಗಳಿರುವುದರಿಂದ ಈ ಸ್ಥಳಗಳು ಭೌಗೋಳಿಕವಾಗಿ ಕರ್ನಾಟಕದಲ್ಲಿವೆಯೋ ಅಥವಾ ಆಂಧ್ರದಲ್ಲಿವೆಯೋ ಎಂಬುದು ಇಲ್ಲಿಗೆ ಬರುವವರಿಗೆ ಮುಖ್ಯವಾಗದೇ ಇಲ್ಲಿನ ದೈವ ಅವರಿಗೆ ಮುಖ್ಯವಾಗುತ್ತದೆ. ಹೀಗೆ ಇಲ್ಲಿಗೆ ಬಂದು ದೈವಾರಾಧನೆಯಲ್ಲಿ ತೊಡಗಿ, ಸಾಂಸ್ಕೃತಿಕ ಬಂಧುತ್ವಕ್ಕೆ ಒಳಗಾಗುವ ಇವರ ಸ್ಥಿತಿಗತಿಗಳ ಮೇಲೆ ಈ ಗಡಿಭಾಗದಲ್ಲಿನ ಧಾರ್ಮಿಕ ತಾಣಗಳು ಬಹಳ ಮುಖ್ಯ ಪಾತ್ರವಹಿಸುತ್ತವೆ. ಆದ್ದರಿಂದಲೇ ಈ ಅಧ್ಯಯನದಲ್ಲಿ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಧಾರ್ಮಿಕ ತಾಣಗಳನ್ನು ನೋಡಲಾಗುತ್ತದೆ.

ಈ ಗಡಿಭಾಗದಲ್ಲಿನ ಒಟ್ಟು ಧಾರ್ಮಿಕ ತಾಣಗಳನ್ನು ಎರಡು ರೀತಿಯಲ್ಲಿ ನೋಡಬಹುದು.

೧. **ಮೂಲದೈವಗಳ ಧಾರ್ಮಿಕ ತಾಣಗಳು :** ಇಲ್ಲಿ ಮೂಲದೈವಗಳ ಅಂದರೆ ಪೌರಾಣಿಕ ದೇವರುಗಳ ದೇವಸ್ಥಾನಗಳನ್ನು ನೋಡಬಹುದು. ಶಿವ, ಗಣೇಶ, ವೀರಭದ್ರ, ಬಸವಣ್ಣ (ಎತ್ತು), ಆಂಜನೇಯ, ಪಾರ್ವತಿ, ಅಂಬಾಭವಾನಿ, ಎಲ್ಲಮ್ಮ - ಈ ರೀತಿಯ ದೈವಗಳು ಇಲ್ಲಿ ಬರುತ್ತವೆ.

೨. **ಕಾಯಕದಿಂದ ದೈವತ್ವಕ್ಕೇರಿದ ದೈವಗಳ ಧಾರ್ಮಿಕ ತಾಣಗಳು :** ಇಲ್ಲಿ ಸಾಮಾನ್ಯ ಮನುಷ್ಯನಾಗಿ ಹುಟ್ಟಿ ಯಾವುದೋ ಸಂದರ್ಭದಲ್ಲಿ ಅಥವಾ ಯಾವುದೋ ಕಾರಣದಿಂದ ದೈವತ್ವದ ಪಟ್ಟಕ್ಕೆ ಇವರು ಏರಿರುತ್ತಾರೆ. ಇಂತಹವರಲ್ಲಿ ಶರಣರು ತತ್ವಪದಕಾರರು, ಸಾಧು-ಸಂತರು, ಸೂಫಿಗಳು, ಪವಾಡ ಪುರುಷರು ಬರುವರು.

ಈ ಎರಡು ಗುಂಪಿನವರಲ್ಲಿ ಯಾರು ಪ್ರಮುಖರೆಂದು ಹೇಳಲು ಆಗುವುದಿಲ್ಲ. ಏಕೆಂದರೆ ಇವರಿವರ ಅನುಯಾಯಿಗಳಿಗೆ, ಭಕ್ತರಿಗೆ ಇವರು ಮುಖ್ಯರಾಗಿರುತ್ತಾರೆ. ಗಾಜರಕೋಟದ ಶರಣರಾದ ಶ್ರೀ ಚನ್ನಪ್ಪಯ್ಯ, ಶ್ರೀ ಕಡ್ಲಪ್ಪಯ್ಯ, ಶ್ರೀ ರಾಚಪ್ಪಯ್ಯ, ತತ್ವಪದಕಾರರಾದ ಕೂಡಲೂರು ಬಸವಲಿಂಗ ಶರಣ, ಐನೂಲಿ ಕರಿಬಸವ, ಮೋಟನಳ್ಳಿ ಹಸನಸಾಬ, ಎಲೇರಾಜೋಳದ ಮುರುಘೇಂದ್ರಸ್ವಾಮಿ, ಅವಧೂತ ರಾಮಲಿಂಗ, ಸಾಧು-ಸಂತ, ಪವಾಡ ಪುರುಷರಲ್ಲಿ ಗುರುಮಠಕಲ್ಲಿನ ಶ್ರೀ ಶಾಂತವೀರಸ್ವಾಮಿ, ಯಾನಾಗುಂದಿಯ ಮಾತೆಮಾಣಿಕೇಶ್ವರಿ ಮುಖ್ಯರಾಗುತ್ತಾರೆ. ಈ ರೀತಿ ದೈವತ್ವಕ್ಕೇರಿದವರು ಹುಟ್ಟಿನಿಂದ, ಧರ್ಮದಿಂದ, ಜಾತಿಯಿಂದ ಈ ಮಟ್ಟಕ್ಕೆ ಏರಿರುವುದಿಲ್ಲ. ಅವರು ಈ ಮಟ್ಟಕ್ಕೆ ಏರಿರುವುದು ಕಾಯಕದಿಂದ. ಸಾಮಾನ್ಯ ಜನರ ಬದುಕಿನಲ್ಲಿ ಬೆರೆತು ಅವರಿಗೆ ಅನುಭಾವದ, ಜೀವನದ ತತ್ವವನ್ನು ತಿಳಿಸಿದ್ದರಿಂದ. ಹೀಗಾಗಿಯೇ ಮುಸ್ಲಿಂ ಧರ್ಮದಲ್ಲಿ ಹುಟ್ಟಿದ ಮೋಟನಳ್ಳಿ ಹಸನಸಾಬ ಮತ್ತು ಗಂಗಾಮತಸ್ಥ ಕೋಮಿಗೆ ಸೇರಿದ ಮಾತೆಮಾಣಿಕೇಶ್ವರಿಯನ್ನು ಎಲ್ಲ ಸಮುದಾಯದ ಜನ ದೈವತ್ವಕ್ಕೇರಿಸಿ ಪೂಜಿಸಿ, ಆರಾಧಿಸುವರು. ಅಷ್ಟೇ ಅಲ್ಲದೆ ಇವರ ಕುರಿತಾಗಿ ಕಥೆ, ಕಾವ್ಯ, ಹಾಡುಗಳನ್ನು ರಚಿಸುವರು. ಇಂತಹ ಈ ಎರಡು ಬಗೆಯ ಧಾರ್ಮಿಕ ತಾಣಗಳ ಪರಿಚಯ ಮತ್ತು ಅವು ಗಡಿಭಾಗದ ಜನರ ಸ್ಥಿತಿಗತಿಗಳ ಮೇಲೆ ಹೇಗೆ ಪ್ರಭಾವ ಬೀರಿವೆ ಎಂಬುದನ್ನು ಇಲ್ಲಿ ನೋಡಲಾಗಿದೆ.

**೩.೧.೧. ಯಾಕಾಂಬರಿ :**

ಏಕೀಕರಣಕ್ಕಿಂತಲೂ ಮುಂಚೆ ಯಾಕಂಬರಿ ಕರ್ನಾಟಕದ ಗುಲಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಗಡಿಗ್ರಾಮವಾಗಿತ್ತು. ಏಕೀಕರಣದ ನಂತರ ಈ ಗ್ರಾಮ ಆಂಧ್ರಪ್ರದೇಶದ ರಂಗಾರೆಡ್ಡಿ ಜಿಲ್ಲೆಯ ಬಸಿರಾಬಾದ್ ಮಂಡಲದ, ನೆಳಪಲ್ಲಿಯಲ್ಲಿ ವಿಲೀನವಾಗಿದೆ.

ಯಾಕಾಂಬರಿ ದೇವಸ್ಥಾನದಲ್ಲಿನ ದೈವ ಶಿವಲಿಂಗದ ರೂಪದಲ್ಲಿದೆ. ಇದನ್ನು ಈ ಮೊದಲು ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಶಿವಪುರದಿಂದ ಬಂದ ಮಲ್ಲಯ್ಯ ಸ್ವಾಮಿಗಳು ದೇವಸ್ಥಾನದ ಜೀರ್ಣೋದ್ಧಾರ ಮಾಡಿದ್ದರು. ಭೌತಿಕ ರಚನೆಯಲ್ಲಿ ಯಾಕಾಂಬರಿ ದೇವಸ್ಥಾನವು ಹಾಲುಬಾವಿ, ಎಣ್ಣೆಬಾವಿ, ಹೂವಿನಬಾವಿ, ಗಂಧದಬಾವಿ, ತುಪ್ಪದಬಾವಿ, ಕುಂಕುಮಬಾವಿ, ಅರಿಷಿಣ ಬಾವಿಗಳ ಮೇಲೆ ರಚನೆಗೊಂಡಿದೆಯಂತೆ-ಈ ಏಳು ಬಾವಿಗಳು ಒಂದಕ್ಕೊಂದು ಹತ್ತಿಕೊಂಡಿವೆ. ಇವುಗಳ

ಮೇಲೆಯೇ ಶ್ರೀ ಕ್ಷೇಮಲಿಂಗೇಶ್ವರ ದೇವಸ್ಥಾನ ನಿರ್ಮಾಣಗೊಂಡಿದೆ. ಈ ಏಳು ಬಾವಿಗಳ ಮೇಲಿನ ದೇವಸ್ಥಾನಕ್ಕೆ ಹೊಂದಿಕೊಂಡು ಯಾಕುಬಸಾಬ ಉಸ್ಮಾನ್‌ಪಾಶಾ (ಮುಸ್ಲಿಂ) ಸಂತನ ಸಮಾಧಿ ಇದೆ. ಈತನ ಕಾಲ ಕ್ರಿ.ಶ. ೧೮೯೦. ಇವರು ಜೀವಿಸಿದ್ದ ದಿನಗಳಲ್ಲಿ ಅನೇಕ ಪವಾಡಗಳನ್ನು ಮಾಡಿ, ತಮ್ಮನ್ನು ಹುಡುಕಿಕೊಂಡು ಬಂದ ಜನರಿಗೆ ಹಿಂದೂ-ಮುಸ್ಲಿಂ ಎನ್ನದೇ ತಮ್ಮಿಂದಾಗುವ ಬೌದ್ಧಿಕ, ಮಾನಸಿಕ ಮತ್ತು ಶಾರೀರಿಕ ಉಪಚಾರವನ್ನು ಮಾಡುತ್ತಿದ್ದರು.

ಇಂದಿಗೂ ಇಲ್ಲಿಗೆ ಬರುವ ಹಿಂದೂಗಳೇ ಆಗಿರಲಿ, ಮುಸ್ಲಿಂಮರೇ ಆಗಿರಲಿ ಜಾತಿ ಭೇದ ಮರೆತು ಈ ಎರಡು ದೇವಾಲಯಗಳಿಗೆ ನಡೆದುಕೊಳ್ಳುತ್ತಾರೆ. ಇಂದಿಗೂ ಕ್ಷೇಮಲಿಂಗ ದೇವಾಲಯದ ಹಿಂದೂ ಪೂಜಾರಿಯೇ ಈ ಮುಸ್ಲಿಂ ಸಂತನ ಸಮಾಧಿ ಪೂಜೆ ದಿನನಿತ್ಯ ಮಾಡುತ್ತಾನೆ. ಶ್ರಾವಣಮಾಸದ ಕಡೆಯ ಸೋಮವಾರ ಈ ಎರಡು ಕೋಮು ಸೌಹಾರ್ದತೆ ತಾಣಗಳ ಜಾತ್ರೆ ನಡೆಯುತ್ತದೆ. ಈ ಧಾರ್ಮಿಕ ತಾಣ ಎರಡು ಭಾಗದ ಗಡಿಗ್ರಾಮಗಳ ಸಾಂಸ್ಕೃತಿಕ ಆರಾಧನಾ ಸ್ಥಳವಾಗಿಯೂ ಬೆಳೆದು ಬಂದಿದೆ ಹಾಗೂ ಮುರುಘೇಂದ್ರ ಸ್ವಾಮಿಗಳು ಎಲೇರಾಜೋಳದಲ್ಲಿ ನೆಲೆಸುವುದಕ್ಕೂ ಪೂರ್ವ ತಮ್ಮ ಪತ್ನಿ ಮಾಣಿಕಮ್ಮನವರ ಜೊತೆ ಮೊಟ್ಟಮೊದಲ ಬಾರಿಗೆ ೩೧ ದಿನಗಳ ಅನುಷ್ಠಾನವನ್ನು ಮಾಡಿ ಸಮಾಜ ಕಲ್ಯಾಣ, ಲೋಕೋದ್ಧಾರ, ಸಮಾಜದಲ್ಲಿನ ತೊಡಕು-ಆತಂಕ, ವರ್ಗ-ಸಂಘರ್ಷ, ಜಾತಿ-ಭೇದದ ವಿರುದ್ಧ ಅನುಭಾವದ ಹಾಡುಗಳನ್ನು ಹಾಡುತ್ತ ಹೊರಬಿದ್ದದ್ದು ಈ ಸ್ಥಳದಿಂದಲೇ. ಆದ್ದರಿಂದಲೇ ಈ ಧಾರ್ಮಿಕ ತಾಣ ಇಲ್ಲಿನ ಕರ್ನಾಟಕ-ಆಂಧ್ರ ಎರಡು ಗಡಿಭಾಗದ ಜನರ ಸಾಂಸ್ಕೃತಿಕ ಆಗುಹೋಗುಗಳಿಗೆ ಮುಖ್ಯವಾಗಿದೆ.

**೩.೧.೨. ಮೈಲಾಪುರ :**

ಪ್ರಾಚೀನ ಕರ್ನಾಟಕದಲ್ಲಿ ಮೈಲಾರ ದೇವರ ಆಚರಣೆಗಳು ಪ್ರಚಲಿತದಲ್ಲಿರುವುದಕ್ಕೆ ಕ್ರಿ.ಶ. ೮-೯ನೇ ಶತಮಾನದ ಶಾಸನಗಳು ಮೈಲಾರ ಸಂಪ್ರದಾಯ ಈ ಭಾಗದಲ್ಲಿ ಬೇರೂರಿದ್ದುದಕ್ಕೆ ಆಧಾರಗಳ ನ್ನೊದಗಿಸುತ್ತವೆ. ಮೈಲಾರದೇವನ ವಾಹನ ಕುದುರೆ. ಈತನ ಭಕ್ತರನ್ನು ಗೊರವರೆಂದು ಕರೆಯಲಾಗುತ್ತದೆ. ಮೈಲಾರ ಸಂಪ್ರದಾಯ ಈ ಭಾಗದಲ್ಲಿ ಪ್ರಚಾರವಾಗಿತ್ತು ಎಂಬುದನ್ನು ಕ್ರಿ.ಶ. ೧೩೩೭ರ ಶಾಸನವು ತಿಳಿಸುತ್ತದೆ. ಇಂದಿಗೂ ಲಕ್ಷಾಂತರ ಜನ ಮಿಂದು ಮಡಿಗೊಳ್ಳುವ ಪುಣ್ಯತಾಣ ಮೈಲಾಪುರವಾಗಿದೆ. ಕರ್ನಾಟಕ-ಆಂಧ್ರ ಗಡಿಭಾಗದಲ್ಲಿದೆ. ಮಣಿ ಮಲ್ಲಾಸುರರೆಂಬ ದೈತ್ಯರು ಈ ಭಾಗದ ಅರಸರಾಗಿದ್ದರೆಂಬ ಐತಿಹ್ಯ ಇಲ್ಲಿದೆ. ಬೃಹತ್ತಾದ ಗುಡ್ಡದ ಮೇಲೆ ಮೈಲಾರಲಿಂಗನ ದೇವಸ್ಥಾನವಿದ್ದು, ನೂರಾರು ಮೆಟ್ಟಿಲುಗಳನ್ನು ಹತ್ತಿ ಮೇಲೇರಿದರೆ ಬಂಡೆಗಳ ಮಧ್ಯೆ ಇರುವ ಮೈಲಾರದೇವನ ದರ್ಶನವಾಗುತ್ತದೆ. ವರ್ಷದಲ್ಲಿ ಎರಡು ಬಾರಿ ನಡೆಯುವ ಈ ದೇವರ ಜಾತ್ರೆಯಲ್ಲಿ ಸಂಕ್ರಮಣದ ಜಾತ್ರೆ ಬಹಳ ವಿಶೇಷವಾದ ರೀತಿಯಲ್ಲಿ ಜರಗುತ್ತದೆ. ಇಲ್ಲಿನ ಸರಪಳಿ ಹರಿಯುವ ಕಾರ್ಯಕ್ರಮ ಅನುಪಮವಾಗಿ ತೋರುತ್ತದೆ. ಮೈಲಾರಲಿಂಗನ ದೇವಸ್ಥಾನದ ಜೊತೆಗೆ ಗಂಗಮಾಳಮ್ಮ, ತುರಂಗಬಾಲೆಯರ ಗುಡಿ, ಹೆಗ್ಗಣ ಪ್ರಧಾನಿ ದೇವಾಲಯ ಮುಂತಾದವುಗಳಲ್ಲದೆ ಹೊನ್ನಕೆರೆಯ ದಂಡೆಯ ಮೇಲೆ ತಿರುಪತಿ ತಿಮ್ಮಪ್ಪನ ಗುಡಿಗಳು ಕಂಡು ಬರುತ್ತವೆ. ಇಲ್ಲಿನ ಜನಪದರು ಮೈಲಾರಲಿಂಗ ದೇವರ ಕುರಿತು ರಚಿಸಿದ ಬಿಡಿ ಬಿಡಿ ತ್ರಿಪದಿಗಳ ಸಾಹಿತ್ಯ ಇಂತಿದೆ.

"ಮಲ್ಲಯ್ಯಗ ಹೋಗ್ಲಾಕ ಮಲ್ಲೀಗಿ ಹೂ ಬೇಕು
ಮಲ್ಲಿಗಿ ಎರಡು ಗೊನಿ ಬೇಕು | ಮೈಲಾಪುರ
ಮಲ್ಲಯ್ಯಗ ಹೋಗಿ ಬರಬೇಕು

ಮಲ್ಲಯ್ಯನಂದರ ಕಲ್ಲ ತಕೊಂಡ ನಿಂತ
ಮಲ್ಲಯ್ಯನಲ್ಲಿ ಮೈಲಾರಿ | ನೆನದಾರ
ಎತ್ತಿದ ಕಲ್ಲ ಇಳುವ್ಯಾನ

ಮಲ್ಲಯ್ಯಗ ಹೋಗದಕ ಮಂಜಾನ ಬಿದ್ದಾವ
ಒಬ್ಬ ಮಗನ್ಯಾ್ಯಂಗ ಕಳುವಲೆ | ಗುಡ್ಡದ ಮಲ್ಲ
ಒಬ್ಬನಿಗಿಬ್ಬರು ಜತಿ ಮಾಡು

ತಂದಿ ಬಂದಾನಂತ ತಂದೀನಿ ಕಾಲಿಗೆ ನೀರ
ತಂದೆಲ್ಲ ತವರು ಮನಿದೇವ | ಮೈಲಾಪುರದ
ಮಲ್ಲಯ್ಯಾ ಬಂದಾನ ಮನ ನೋಡಿ

ಗಂಗಿ ಮಾಳಮ್ಮನ ಗಂಡ ಪುಂಡ ಮೈಲಾರಲಿಂಗ
ಭಂಡಾರದ ಚೀಲ ಬಗಲೀಗ | ಹಾಕ್ಕೊಂಡು
ರಂಭಿ ಕುರಬರ ಮನಿ ಮುಂದ

ಸಂಜೇಲಿ ಊರ ಮುಂದ ಮಂದ್ಯಾಕ ನೆರದಾರೋ
ನಂದಿ ಕೋಲಾಟ ನವಿಲಾಟ | ಮೈಲಾಪುರ
ಮಲ್ಲಯ್ಯನ ಆಟ ಕೆರಿಮ್ಯಾಲ"[೨]

**೩.೧.೩. ಯಾನಾಗುಂದಿ :**

ಗುಲಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನಲ್ಲಿ ಯಾನಾಗುಂದಿ ಎಂಬ ಚಿಕ್ಕ ಗಡಿಗ್ರಾಮವಿದೆ. ಇದು ಗುರುಮಠಕಲ್ಲಿನಿಂದ ಒಂಬತ್ತು ಕಿ.ಮೀ. ದೂರದಲ್ಲಿದೆ. ಈ ಊರ ಸಮೀಪ ಒಂದು ಎತ್ತರದ ಗುಡ್ಡವಿದ್ದು ಅದನ್ನು ಸ್ಥಳೀಯರು ಸಿದ್ದೇಶ್ವರ ಬೆಟ್ಟವೆಂದು ಕರೆಯುತ್ತಾರೆ. ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಶಿವಯೋಗಿ ಸಿದ್ದರಾಮೇಶ್ವರರು ಕಲ್ಯಾಣಕ್ರಾಂತಿಯ ನಂತರ ಶ್ರೀಶೈಲಕ್ಕೆ ಹೋಗುವಾಗ ಈ ಬೆಟ್ಟದಲ್ಲಿ ಸ್ವಲ್ಪದಿನ ಉಳಿದಿದ್ದರಂತೆ. ಅಂದಿನಿಂದ ಇದನ್ನು ಸಿದ್ದೇಶ್ವರಬೆಟ್ಟವೆಂದು ಸ್ಥಳೀಯರು ಕರೆಯುತ್ತಿದ್ದಾರೆ. ಪ್ರತಿ ವರ್ಷ ಇಲ್ಲಿ ಸಿದ್ದೇಶ್ವರ ಜಾತ್ರೆ ನಡೆಯುತ್ತದೆ. ಈ ಮೊದಲು ಇಲ್ಲಿ ಸಿದ್ಧರಾಮೇಶ್ವರ ಗುಡಿಯೂ ಇತ್ತೆಂದು ಹೇಳುವುದುಂಟು. ಈ ಬೆಟ್ಟದಲ್ಲಿ ಮಾತಾಮಾಣಿಕೇಶ್ವರಿ ಎಂಬ ಯೋಗಿಣಿ ವಾಸವಾಗಿದ್ದು, ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಪ್ರಮುಖ ಧಾರ್ಮಿಕ ತಾಣವಾಗಿದೆ. ಮಾತಾ ಮಾಣಿಕೇಶ್ವರಿಯವರು ೨೭.೭.೧೯೩೪ರಲ್ಲಿ ಸೇಡಂ ತಾಲೂಕಿನ ಗಡಿಗ್ರಾಮ ಮಲ್ಲಾಬಾದ್‌ನಲ್ಲಿ ಜನಿಸಿದರು.

ಅಗಿನ್ನ ಈ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಆಗಿನ್ನು ಈ ಭಾಗ ನಿಜಾಂ ಅರಸರ ಆಡಳಿತದಲ್ಲಿತ್ತು. ಚಿಕ್ಕವಳಿರುವಾಗ ಮಾಣಿಕೇಶ್ವರಿ ಆಧ್ಯಾತ್ಮದ ಕಡೆಗೆ ತುಂಬಾ ಒಲವು ಉಳ್ಳವಳಾಗಿದ್ದಳು. ದೊಡ್ಡವಳಾದ ಮೇಲೆ ಹಿರಿಯರೆಲ್ಲರೂ ಸೇರಿ ಅದೆ ಗಡಿಗ್ರಾಮದ ಶಿಲಾರ ಕೋಟರ್ಕಿಯ ಮಾಣಿಕಪ್ಪನೊಂದಿಗೆ ಮದುವೆ ಮಾಡಿದರು. ಮದುವೆಯ ನಂತರ ಗಂಡನೊಂದಿಗೆ ಬಹಳ ದಿನ ಸಂಸಾರ ಮಾಡದೆ ಆಧ್ಯಾತ್ಮದ ಕಡೆಗೆ ಮಾಣಿಕೇಶ್ವರಿ ವಾಲಿದಳು.

ಮಾಣಿಕೇಶ್ವರಿ ಆಧ್ಯಾತ್ಮ ಜೀವನ ಪ್ರಾರಂಭಿಸಿದ ಮೇಲೆ ಧರ್ಮಗ್ರಂಥಗಳನ್ನು ಓದಬೇಕೆಂದರೆ ಓದು, ಬರಹ ಗೊತ್ತಿರಲಿಲ್ಲ. ಇದನ್ನು ತಿಳಿದ ಯಾನಾಗುಂದಿಯ ವೀರಪ್ಪ ಮತ್ತು ರಾಮರೆಡ್ಡಿ ಗೌಡರು ಒಬ್ಬ ಅಕ್ಷರ ವಿದ್ಯೆ ನೀಡುವ ಕಾನಕುರ್ತಿ(ಆಂಧ್ರದ ಗಡಿಗ್ರಾಮ)ಯ ಚೆನ್ನಬಸವಯ್ಯ ಎಂಬ ಗುರುವನ್ನು ಗೊತ್ತು ಮಾಡಿದರು. ಗುರುಗಳು ಅವಳ ಮಾತೃಭಾಷೆಯಾದ ತೆಲುಗು ಭಾಷೆಯಲ್ಲಿಯೇ ಓದಲು, ಬರೆಯಲು ಕಲಿಸಿದರು. ಇದರಿಂದ ತೆಲುಗು ಭಾಷೆಯಲ್ಲಿನ ಧಾರ್ಮಿಕ ಗ್ರಂಥಗಳನ್ನು ಮುಂದೆ ಮಾಣಿಕೇಶ್ವರಿ ಓದಿಕೊಂಡಳು. ಮಾತಾಮಾಣಿಕೇಶ್ವರಿಯವರು ಇಂದು ಈ ಭಾಗದಲ್ಲಿ ಮನೆಮಾತಾಗಿದ್ದಾರೆ. ಧರ್ಮ, ಭಾಷೆ, ಗಡಿಗಳೆನ್ನದೇ ಇವರ ದರ್ಶನ, ಆಶೀರ್ವಾದಕ್ಕೆ ಅಪಾರ ಭಕ್ತರು ಈ ಯಾನಾಗುಂದಿಯಲ್ಲಿ ಬಂದು ಸೇರುತ್ತಾರೆ. ಪ್ರಶಾಂತವಾದ ಮತ್ತು ಆಹ್ಲಾದಕರವಾದ ವಾತಾವರಣದಿಂದ ಕೂಡಿರುವ ಯಾನಾಗುಂದಿ ಬೆಟ್ಟದಲ್ಲಿ ಮಾಣಿಕೇಶ್ವರಿಯವರ ಆಶ್ರಮ ದೇವಾಲಯವಿದೆ. ಸದಾಕಾಲ ಮುಂಜಾನೆ ಮತ್ತು ಸಾಯಂಕಾಲ ಇಲ್ಲಿ ಪ್ರಾರ್ಥನೆ ನಡೆಯುತ್ತದೆ. ಅಮವಾಸೆ ಮತ್ತು ಇನ್ನಿತರ ವಿಶೇಷ ಸಂದರ್ಭಗಳಲ್ಲಿ ಪುರಾಣ, ಪ್ರವಚನ, ಕೀರ್ತನೆ, ಭಜನೆ, ಪ್ರಾರ್ಥನೆಗಳು ವಾದ್ಯಗಳ ಸಡಗರದೊಂದಿಗೆ ನಡೆಯುತ್ತಿರುತ್ತವೆ. ಪ್ರತಿ ವರ್ಷ ಶಿವರಾತ್ರಿಯಂದು ಶಿವನಿಗೆ ರುದ್ರಪೂಜೆ, ಭಜನೆಗಳು ನಡೆಯುವುದರೊಂದಿಗೆ ಆ ದಿನ ಮಾಣಿಕೇಶ್ವರಿಯವರು ಬಂದಂತಹ ಎಲ್ಲ ಭಕ್ತರಿಗೆ ದರ್ಶನ ನೀಡಿ ಭಕ್ತರ ಮನಸ್ಸನ್ನು ಆನಂದಗೊಳಿಸುತ್ತಾ ಸಕಲ ಭಕ್ತರಿಗೆ ಆಶೀರ್ವಾದ ನೀಡಿ ಪುನಃ ತಮ್ಮ ಗುಹೆಯ ಒಳಗೆ ಹೋಗುವರು. ದೈವತ್ವಕ್ಕೇರಿಸಿದ ಜನ ಇವರನ್ನು 'ಅಮ್ಮ'ನವರೆಂದು ಕರೆಯುತ್ತಾರೆ. ಇಲ್ಲಿಗೆ ಆಂಧ್ರ-ಕರ್ನಾಟಕದ ಮೂಲೆ ಮೂಲೆಗಳಿಂದ ಭಕ್ತರು ಅಮ್ಮನವರ ದರ್ಶನಕ್ಕೆ ಬರುತ್ತಿರುತ್ತಾರೆ.

049178

ಈ ಬೆಟ್ಟದಲ್ಲಿ ಈಗ 'ಶ್ರೀಮಾತಾಮಾಣಿಕೇಶ್ವರಿ ಟ್ರಸ್ಟ್' ರಚಿಸಲಾಗಿದ್ದು, ಬರುವ ಭಕ್ತರಿಗೆ ದಿನನಿತ್ಯ ಅನ್ನ ದಾಸೋಹ ಹಾಗೂ ಬಡಮಕ್ಕಳ ವಸತಿಶಾಲೆ ಅಲ್ಲದೆ, ಕನ್ನಡ ಮಾಧ್ಯಮ ಪ್ರಾಥಮಿಕ ಶಿಕ್ಷಣದಿಂದ ಪ್ರೌಢಶಿಕ್ಷಣದವರೆಗೆ ಶಿಕ್ಷಣ ಸಂಸ್ಥೆಯನ್ನು ನಡೆಸಲಾಗುತ್ತದೆ. ಮಾತಾಮಾಣಿಕೇಶ್ವರಿಯವರು ಕರ್ನಾಟಕ-ಆಂಧ್ರ ಗಡಿಗಳಲ್ಲಿ ಅನೇಕ ಗುಡಿ, ಮಠ, ಆಶ್ರಮಗಳನ್ನು ಕಟ್ಟಿದ್ದರಿಂದ, ಕನ್ನಡಿಗರು ಮತ್ತು ತೆಲುಗರು ಇವರನ್ನು ದೈವತ್ವಕ್ಕೇರಿಸಿ ಆರಾಧಿಸುತ್ತಿದ್ದಾರೆ.

**ಮಾತಾಮಾಣಿಕೇಶ್ವರಿಯವರ ಕರ್ನಾಟಕ-ಆಂಧ್ರದಲ್ಲಿನ ಕೆಲವು ಆಶ್ರಮಗಳು**

| ಕರ್ನಾಟಕ | ಆಂಧ್ರಪ್ರದೇಶ |
|---|---|
| ೧. ಯಾನಾಗುಂದಿ | ೧. ಶ್ರೀಶೈಲ |
| ೨. ಗುಲಬರ್ಗಾ | ೨. ಕರೀಂನಗರ |

| | |
|---|---|
| ೩. ಗುರುಮಠಕಲ್ | ೩. ಮಿರ್ಯಾನ |
| ೪. ಸೇಡಂ | ೪. ನೆಲಗೊಂಡಾ |
| ೫. ಅಫಜಲ್‌ಪುರ | ೫. ಕಸ್ತೂರಪಲ್ಲಿ |
| ೬. ದುಗನೂರು | ೬. ಬಷೀರಾಬಾದ |
| ೭. ಕೋಲಕುಂದಾ | ೭. ಕೋಸಗಿ |
| ೮. ಕಾನಾಕುರ್ತಿ | ೮. ಮೆಹಬೂಬನಗರ |
| ೯. ಮುಧೋಳ | ೯. ಕೋಡಂಗಲ |
| ೧೦. ನಾಚ್ವಾರ | ೧೦. ತಾಂಡೂರು |
| ೧೧. ನಾಡೇಪಲ್ಲಿ | ೧೧. ಮುಕ್ತಲ |
| ೧೨. ಚಂದಾಪುರ - ಮುಂತಾದವು. | ೧೨. ನಾರಾಯಣಪೇಟೆ - ಮುಂತಾದವು. |

**೩.೧.೪. ಗಾಜರಕೋಟ :**

ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ 'ಗಾಜರಕೋಟ' ಚಾರಿತ್ರಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕ ವಾಗಿ ತುಂಬಾ ವಿಶಿಷ್ಟ ಗ್ರಾಮವಾಗಿದೆ. ಪ್ರಾಚೀನ ಕಾಲದಲ್ಲಿ ಈ ಗ್ರಾಮದಲ್ಲಿ ಕಾಜಿನ (ಗಾಜಿನ) ಬಳೆಗಳನ್ನು ತಯಾರಿಸಿ ಮಾರಾಟ ಮಾಡುತ್ತಿದ್ದರು. ಊರ ಸುತ್ತಲಿರುವ ಕೋಟೆಯೊಳಗೆ ಬಳೆಗಳನ್ನು ತಯಾರಿಸುವ ಕಾರ್ಖಾನೆಗಳಿದ್ದುದ್ದರ ಕುರುಹುಗಳು ಇಂದಿಗೂ ಕಾಣಸಿಗುತ್ತವೆ. ಹೆಸರೇ ಸೂಚಿಸುವಂತೆ ಬಳೆಗಳನ್ನು ತಯಾರಿಸುವ ಕೇಂದ್ರವಾಗಿ ಪ್ರಸಿದ್ಧಿ ಪಡೆದ ಸ್ಥಳ ಗಾಜರಕೋಟ. 'ಗಾಜಲು' ಎಂಬುದು ತೆಲುಗು ಭಾಷೆಯ ಪದವಾಗಿದ್ದು ಇದರ ಕನ್ನಡದ ಅರ್ಥ ಬಳೆಯಾಗಿದೆ. ಆಂಧ್ರ ನಾಡಿನ ಜೊತೆಗೆ ಹೆಚ್ಚಾಗಿ ವ್ಯಾಪಾರ ಸಂಪರ್ಕವಿರುವುದರಿಂದ ತೆಲುಗು ಭಾಷೆಯ ಹೆಸರು ಹಾಗೂ ಬಳೆಗಳ ತಯಾರಿಕೆ ಯಿಂದಾಗಿ ಮತ್ತು ಸುತ್ತಲೂ ಕೋಟೆಯನ್ನು ಹೊಂದಿದ್ದರಿಂದ ಈ ಗ್ರಾಮಕ್ಕೆ 'ಗಾಜರಕೋಟ' ಎಂಬ ಹೆಸರು ಬಂದಿದೆ.

ಈ ಗಡಿಗ್ರಾಮದಲ್ಲಿ ಅನೇಕ ಚಾರಿತ್ರಿಕ ಘಟನೆಗಳು ನಡೆದಿವೆ. ಬ್ರಿಟಿಷರ ಕಾಲದಲ್ಲಿ ಆಡಳಿತವನ್ನು ಸುಗಮಗೊಳಿಸಲು ಅವರು ಅಧಿಕಾರದಲ್ಲಿ ವಿಕೇಂದ್ರೀಕರಣವನ್ನು ಜಾರಿಗೆ ತಂದಿದ್ದರು. ಅವರ ಕೆಳಗೆ ಅನೇಕ ಅಧಿಕಾರಿ ವರ್ಗಗಳನ್ನು ನೇಮಿಸಿಕೊಂಡಿದ್ದರು. ದೇಶಮುಖರು, ದೇಶಪಾಂಡೆಗಳು, ದೇಸಾಯಿಗಳು ಸ್ಥಳೀಯವಾಗಿ ಅವರ ಪರವಾಗಿ ಕೆಲಸ ಮಾಡುತ್ತಿದ್ದರು. ಇವರೆಲ್ಲರೂ ಮುಖ್ಯವಾಗಿ ಸ್ಥಳೀಯ ಭೂಮಿಯ ಮೇಲೆ ಹಿಡಿತ ಹೊಂದಿ, ಅದರಿಂದ ಸಂಗ್ರಹವಾಗುವ ಕಂದಾಯ, ತೆರಿಗೆಗಳನ್ನು ರಾಜಬೊಕ್ಕಸಕ್ಕೆ ಸಲ್ಲಿಸುವ ಕೆಲಸ ಮಾಡುತ್ತಿದ್ದರು. ಬ್ರಿಟಿಷರ ನಂತರ ಹೈದ್ರಾಬಾದ್ ನಿಜಾಮನ ಆಳ್ವಿಕೆಗೆ ಈ ಭಾಗ ಒಳಪಟ್ಟಾಗ ಈ ದೇಶಮುಖರು, ದೇಶಪಾಂಡೆ, ದೇಸಾಯಿಗಳು ಹಾಗೇ ಮುಂದುವರೆದರು. ಇವರಿಗೆ ಅನೇಕ

ಸೌಲಭ್ಯಗಳನ್ನು ನೀಡಲಾಗಿತ್ತು. ಇವರು ತಮ್ಮ ರಕ್ಷಣೆಗಾಗಿ ಸೈನಿಕರ ತುಕಡಿಯನ್ನು ಇಟ್ಟುಕೊಳ್ಳುತ್ತಿದ್ದರು. ಇಂತಹ ದೇಶಪಾಂಡೆ, ದೇಸಾಯಿ, ದೇಶಮುಖರು ನಾಡೇಪಲ್ಲಿ, ಮದನಾ ಕಾಕಲವಾರ, ಗಡಿಚರ್ಲಾಗಳಲ್ಲಿ ತಮ್ಮ ಅಧಿಕಾರವನ್ನು ಚಲಾಯಿಸುತ್ತಿದ್ದರು.

ಗಾಜರಕೋಟ ಕಾಕಲವಾರ ದೇಶಮುಖರ ವ್ಯಾಪ್ತಿಗೊಳಪಟ್ಟಿತ್ತು. ಈ ಗ್ರಾಮದ ಜನತೆ ಭೂ ತೆರಿಗೆ ನೀಡದಿದ್ದುದ್ದಕ್ಕಾಗಿ ದೇಶಮುಖರ ಸೈನಿಕರು ಕೃಷಿಕರ ಚಟುವಟಿಕೆಗಳಿಗೆ ಅಗತ್ಯವಾಗಿ ಬೇಕಾಗುವ ದನಕರುಗಳನ್ನೆಲ್ಲ ಕೊಂಡವಾಡಿಗೆ ಹಾಕಿದರು. ಇವುಗಳನ್ನು ಬಿಡಿಸಿಕೊಂಡು ಬರಲು ಊರಿನ ಅಚ್ಚಪ್ಪ ಮತ್ತು ಆತನ ಸಂಗಡಿಗರು ಸೈನಿಕರ ಜೊತೆ ಕಾದಾಡುತ್ತ ಸೈನಿಕರನ್ನು ಸೋಲಿಸಿ ದನಕರುಗಳನ್ನು ಬಿಡಿಸಿ ಕೊಂಡು ಬರುವಾಗ ಸೈನಿಕರಿಂದ ಹತ್ಯೆಗೊಳಗಾಗುತ್ತಾನೆ. ಈ ಅಚ್ಚಪ್ಪ ಮತ್ತು ಆತನ ಸಂಗಡಿಗರ ನೆನಪಿ ಗಾಗಿ ಊರಿನ ಜನ ಅವರ ವೀರಗಲ್ಲುಗಳನ್ನು ನೆಟ್ಟು ಇಂದಿಗೂ ಪೂಜಿಸುತ್ತಿದ್ದಾರೆ.

ಇಂತಹ ಚರಿತ್ರೆಯನ್ನೊಳಗೊಂಡ ಗಾಜರಕೋಟ ಗ್ರಾಮವು ವೀರಗಲ್ಲು ಮತ್ತು ದೇವಾಲಯಗಳಿಗೆ ಪ್ರಸಿದ್ಧವಾಗಿದೆ. ಇಲ್ಲಿರುವ ದೇವಾಲಯಗಳಲ್ಲಿನ ದೇವರು ಗತಿಸಿ ಹೋದ ಶರಣರೇ ಹೊರತು ಶಿವ, ಪಾರ್ವತಿ, ಗಣೇಶನ ಹಾಗೇ ಅಯೋನಿಜರಲ್ಲ. ಶ್ರೀ ಗವಿಸಿದ್ಧಲಿಂಗೇಶ್ವರ, ಶ್ರೀ ರುದ್ರಮುನಿ ಶಿವಾಚಾರ್ಯ, ಶ್ರೀ ಚನ್ನಪ್ಪಯ್ಯ, ಶ್ರೀ ಕಡ್ಲಯಪ್ಪ, ಶ್ರೀ ರಾಚಪ್ಪಯ್ಯ ಶರಣರು ಪ್ರಸಿದ್ಧರಾದವರು. ಇವರೆ ಇಲ್ಲಿನ ದೈವಗಳು. ಈ ಶರಣರು ಗತಿಸಿದ ಮೇಲೆ ಜನಪದರು ಅವರ ಮೇಲಿನ ನಂಬಿಕೆ, ಪ್ರೀತಿ, ಗೌರವದಿಂದ ಅವರ ಗುಡಿಗಳನ್ನು ಕಟ್ಟಿ ಆ ಎಲ್ಲ ಶರಣರನ್ನು ದೈವತ್ವಕ್ಕೇರಿಸಿದ್ದಾರೆ. ಊರಿನ ಮುಂಭಾಗದಲ್ಲಿ ಕಡ್ಲಪ್ಪಯ್ಯ, ರಾಚಪ್ಪಯ್ಯನ ದೇವಾಲಯವಿದ್ದರೆ, ಹಿಂಭಾಗದಲ್ಲಿ ಶಿಲ್ಪಕಲೆಗಳಿಂದ ಕೂಡಿದ ಮಲ್ಲಿಕಾರ್ಜುನ ದೇವಾಲಯ ಭಕ್ತರನ್ನು ಮಾತ್ರವಲ್ಲದೆ ಪ್ರವಾಸಿಗರನ್ನು ಆಕರ್ಷಿಸುತ್ತದೆ. ಶ್ರೀ ಚನ್ನಪ್ಪಯ್ಯ ಶರಣರನ್ನು ಈ ಭಾಗದಲ್ಲಿ ಚನ್ನಪ್ಪಯ್ಯ ತಾತನೆಂದೇ ಕರೆಯುತ್ತಾರೆ.

ಶ್ರೀ ಚನ್ನಪ್ಪಯ್ಯ ಶರಣರು ಶ್ರೀಶೈಲ ಮಲ್ಲಿಕಾರ್ಜುನನ ಪರಮ ಭಕ್ತರು. ಗಾಜರಕೋಟದಲ್ಲಿರುವ ಮಲ್ಲಿಕಾರ್ಜುನ ದೇವಾಲಯವನ್ನು ಈ ಶರಣರೇ ಕಟ್ಟಿಸಿದ್ದಾರೆ. ದೇವಾಲಯವನ್ನು ಕಟ್ಟಿಸುವಾಗ ಕೂಲಿಕಾರರಿಗೆ ಕೂಲಿ ಕೊಡುತ್ತಿರಲಿಲ್ಲವಂತೆ. ಕೂಲಿಕಾರರು ತಮ್ಮ ಕೆಲಸ ಮುಗಿಸಿ ಸಾಯಂಕಾಲ ಮನೆಗೆ ಹೋಗುವಾಗ, ಪ್ರತಿಯೊಬ್ಬರೂ ಒಂದೊಂದು ಮರಳಿನ ಕುಪ್ಪೆ ಮಾಡಿ ಹೋಗುತ್ತಿದ್ದರಂತೆ. ಮಾರನೆಯ ದಿನ ಆ ಕುಪ್ಪೆಯನ್ನು ತೆಗೆದಾಗ ಅದರಲ್ಲಿ ಅವರಿಗೆ ಹಿಂದಿನ ದಿನ ಮಾಡಿದ ಕೂಲಿ ಹಣ ಲಭ್ಯವಾಗುತ್ತಂತೆ. ದೇವಾಲಯ ಕಟ್ಟುವ ಕಾರ್ಯ ಮುಗಿದ ನಂತರ ಅದರಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡುವ ಉದ್ದೇಶದಿಂದ ಶರಣರು ಗಾಜರಕೋಟದ ಜನಸಮೂಹದೊಂದಿಗೆ ಕಾಲ್ನಡಿಗೆಯಲ್ಲಿ ಶ್ರೀಶೈಲದ ಯಾತ್ರೆ ಕೈಗೊಂಡರು. ಶರಣರು ವಿಶ್ರಾಂತಿಗಾಗಿ ತಂಗಿದಲ್ಲಿ ಬಸವಪುರಾಣ ಹೇಳುತ್ತಾ, ಪ್ರತಿ ದಿನ ದಾಸೋಹ ಮಾಡುತ್ತಾ ಸಾಗುತ್ತಿದ್ದು, ತಮ್ಮ ಸಂಚಾರದಲ್ಲಿ ಶ್ರೀಶೈಲ ಸಮೀಪದ ವಟವರ್ಲಪಲ್ಲಿ ಎಂಬ ಗ್ರಾಮದ ಅರಣ್ಯದಲ್ಲಿ ನೀರು ಪಡೆಯಲು ಬಾವಿ ತೋಡಲಾರಂಭಿಸಿದರು. ಆದರೆ ಮೂರು ದಿನಗಳವರೆಗೂ ಅವರ ಶ್ರಮ ಮುಂದುವರೆದರೂ, ನೀರಿನ ತೇವಾಂಶ ಕಾಣಲಿಲ್ಲವಂತೆ, ಶರಣರು ಕೊನೆಗೆ ವೈರಾಗ್ಯ ತಾಳಿ, ಮಹಾಮಂತ್ರ ವನ್ನು ಜಪಿಸುತ್ತಾ ಗಂಗಾಮಾತೆಯನ್ನು ಸ್ಮರಣೆ ಮಾಡಿದಾಗ ಕೂಡಲೇ ನೀರು ಪುಟಿದೆದ್ದು ಹರಿಯಿತು

ಎಂಬ ಕಥೆ ಇವರ ಚರಿತ್ರೆಯಲ್ಲಿ ಬರುತ್ತದೆ. ಹೀಗೆ ಶ್ರೀಶೈಲದವರೆಗೆ ಪಾದಯಾತ್ರೆ ಮಾಡಿ, ಅಲ್ಲಿಂದ ಶಿವಲಿಂಗ ತಂದು ಗಾಜರಕೋಟದ ಭವ್ಯವಾದ ಮಲ್ಲಿಕಾರ್ಜುನ ದೇವಾಲಯದಲ್ಲಿ ಪ್ರತಿಷ್ಠಾಪನೆ ಮಾಡಿದರು. ತಮ್ಮ ಆಸ್ತಿಪಾಸ್ತಿಯನ್ನೆಲ್ಲ ಈ ಮಲ್ಲಿಕಾರ್ಜುನ ದೇವಾಲಯಕ್ಕೆ ಉಂಬಳಿಯಾಗಿ ಕೊಟ್ಟಿದ್ದಾರೆ.

ಶ್ರೀ ಚನ್ನಪ್ಪಯ್ಯ ಶರಣರು ಲಿಂಗೈಕ್ಯರಾಗಿ ಸುಮಾರು ೩೦೦ ವರ್ಷಗಳು ಕಳೆದರೂ ಇಂದಿಗೂ ಇವರನ್ನು ಸ್ಥಳೀಯರು ಆರಾಧ್ಯ ದೈವರೆಂದು ಪೂಜಿಸುತ್ತಾರೆ. ಇವರ ಜೀವನದಲ್ಲಿ ನಡೆದ ಘಟನೆ, ಕಥೆ, ಪವಾಡಗಳ ಮೌಖಿಕ ಆಧಾರಗಳನ್ನು ಬಳಸಿಕೊಂಡು ಶ್ರೀ ಎಲ್.ಬಿ.ಕೆ. ಅಲ್ದಾಳರು ಒಂದು ನಾಟಕವನ್ನು ರಚಿಸಿದ್ದಾರೆ. ಶ್ರೀ ಕಡ್ಲಪ್ಪಯ್ಯ ಮತ್ತು ರಾಚಪ್ಪಯ್ಯ ದೇವಸ್ಥಾನ ಊರಿನ ಮುಂಭಾಗದಲ್ಲಿದ್ದು, ವರ್ಷಕ್ಕೊಮ್ಮೆ ದೊಡ್ಡ ಪ್ರಮಾಣದಲ್ಲಿ ಜಾತ್ರೆ, ಉತ್ಸವ ನಡೆಯುತ್ತದೆ. ಇವರು ಚಿತ್ತಾಪುರ ತಾಲೂಕಿನ ಮಂಗಲಗಿ ಗ್ರಾಮದವರೆಂದು ಜನಪದರು ಹೇಳಿದರೆ, ಚಿಂಚೋಳಿ ತಾಲೂಕಿನ ಸುಲೇಪೇಟದವರೆಂದು ಲಿಖಿತ ದಾಖಲೆಗಳು ಹೇಳುತ್ತವೆ. ಇವರು ಅಲ್ಲಿಂದ ಗಾಜರಕೋಟ ಗ್ರಾಮಕ್ಕೆ ಬಂದು ಕೆಲವು ವರ್ಷಗಳು ಇದ್ದರೆಂದು ಮತ್ತು ಮುಂದೆ ಸುರಪುರದ ಮುಮ್ಮಡಿ ಪಾಮನಾಯಕ (ಕ್ರಿ.ಶ. ೧೭೫೭-೧೭೭೪) ಮತ್ತು ಇಮ್ಮಡಿ ವೆಂಕಟಪ್ಪ ನಾಯಕ (ಕ್ರಿ.ಶ. ೧೭೭೪-೧೮೦೨)ರ ಅವಧಿಯಲ್ಲಿ ಸುರಪುರ ಸಂಸ್ಥಾನದಲ್ಲಿ ಸಚಿವರಾಗಿ ಕಾರ್ಯ ನಿರ್ವಹಿಸಿದರೆಂದು ತಿಳಿದುಬರುತ್ತದೆ. ಸುರಪುರಕ್ಕೆ ಬರುವುದಕ್ಕಿಂತ ಮುಂಚೆ ಗಾಜರಕೋಟದಲ್ಲಿ ಮಠವೊಂದನ್ನು ಕಟ್ಟಿದರು. ಗಡಿಭಾಗದಲ್ಲಿನ ಇವರ ಜಾತ್ರೆಗೆ ಕರ್ನಾಟಕ-ಆಂಧ್ರ ಗಡಿಗ್ರಾಮದ ಜನರು ದೊಡ್ಡ ಪ್ರಮಾಣದಲ್ಲಿ ಸೇರಿ ಇಲ್ಲೊಂದು ಸಾಂಸ್ಕೃತಿಕ ಕೊಡು-ಕೊಳ್ಳುವಿಕೆಯ ಪರಿಸರ ನಿರ್ಮಿಸಿದ್ದಾರೆ.

**೩.೧.೫. ಗುರುಮಠಕಲ್ :**

ಯಾದಗಿರಿ ತಾಲ್ಲೂಕಿನ ಗುರುಮಠಕಲ್ ತಾಲೂಕು ಕೇಂದ್ರದಿಂದ ಈಶಾನ್ಯಕ್ಕೆ ನಲವತ್ತು ಕಿ.ಮೀ. ದೂರದಲ್ಲಿದೆ. ಈ ಮಠಕ್ಕೆ ಮೊದಲು ನಾರಾಯಣಪುರ ಎಂಬ ಹೆಸರಿತ್ತು. ಈ ಗ್ರಾಮವು ವ್ಯಾಪಾರಸ್ಥರ ಕೇಂದ್ರವಾಗಿತ್ತು. ಈ ಗ್ರಾಮದಲ್ಲಿ ವೀರಶೈವ ಧರ್ಮ ಬಹಳ ಶ್ರೀಮಂತವಾಗಿ ಬೆಳೆದು ಧರ್ಮ ಜಾಗೃತಿಯನ್ನುಂಟು ಮಾಡಿದೆ. ಈ ಗ್ರಾಮದಲ್ಲಿ ಒಟ್ಟು ಅರವತ್ತೂರು ಮಠಗಳು ಸ್ಥಾಪನೆಯಾಗಿದ್ದವು ಎಂದು ಹೇಳುತ್ತಾರೆ. ಗುರುಮಠಕಲ್ಲಿನ ಹೊರಭಾಗದಲ್ಲಿ ಸ್ಥಾಪನೆಯಾಗಿರುವ ಶ್ರೀಶಾಂತವೀರ ಮಠವು, ಮುರುಘಾಮಠವಾಗಿ ಚಿತ್ರದುರ್ಗ ಬೃಹನ್ಮಠದ ಶಾಖಾಮಠವಾಗಿ ಬೆಳೆದಿದೆ. ಸುಮಾರು ಮುನ್ನೂರು ವರ್ಷಗಳ ಹಿಂದೆ ಶ್ರೀ ಶಾಂತವೀರ ಸ್ವಾಮಿಗಳು ಲೋಕಸಂಚಾರ ಕೈಗೊಂಡು ನಾರಾಯಣಪುರದ (ಗುರುಮಠಕಲ್) ಕಾಡಿನಲ್ಲಿ ಬಂದು ನೆಲೆಸುತ್ತಾರೆ. ನಿರ್ಜನ ಪ್ರದೇಶದಲ್ಲಿ ತಪಸ್ಸಿಗೆ ಕುಳಿತುಕೊಂಡ ಗುರುಗಳು ದೀರ್ಘಕಾಲ ಗಡ್ಡೆಗೆಣಸುಗಳನ್ನು ಆಹಾರವನ್ನಾಗಿ ಸೇವಿಸಿಕೊಂಡು ಬದುಕಿದ್ದರಂತೆ.

**ಗುರುಮಠಕಲ್ಲಿನೊಂದಿಗಿನ ಪವಾಡ ಕಥೆಗಳು**

**ಘಟನೆ ೧ :** ಗುರುಗಳು ಯಾರ ಕಣ್ಣಿಗೂ ಬೀಳದಂತಿದ್ದ ಸಂದರ್ಭದಲ್ಲಿ, ಒಂದು ದಿನ ಆ ಕಾಡಿನ ಕಾಲುದಾರಿಯಿಂದ ದಂಪತಿಗಳಿಬ್ಬರು ತಮ್ಮ ಚೊಚ್ಚಲ ಗಂಡುಮಗುವಿನೊಡನೆ ಶ್ರೀಶೈಲಕ್ಕೆ ಹೋಗುತ್ತಿದ್ದರು. ಪೂಜ್ಯರು ಕುಳಿತ ಆಲದ ಮರವನ್ನು ದಾಟಿ ಸ್ವಲ್ಪ ಮುಂದಕ್ಕೆ ಹೋಗುವಷ್ಟರಲ್ಲಿ ಆ ಮಗುವು ಹೊಟ್ಟೆನೋವಿನಿಂದ ಮರಣ ಹೊಂದಿತು. ಆಗ ತಂದೆತಾಯಿಗಳಿಗೆ ಅತ್ಯಂತ ದುಃಖವಾಗಿ

ಗೋಳಿಡಲಾರಂಭಿಸಿದರು. ಈ ಅರಣ್ಯ ರೋದನದಿಂದ ಶಿವಯೋಗದಿಂದ ಎಚ್ಚೆತ್ತ ಶಿವಯೋಗಿಗಳು ಚಿಂತಾಮಗ್ನರಾಗಿ ವಿಚಾರಿಸಿದರು. ಈ ರೋದನವು ಎಲ್ಲಿಂದ ಬರುತ್ತಿದೆ? ಯಾರು ಅಳುತ್ತಿರಬಹುದೆಂದು ಆಲದ ಗಿಡದಿಂದಿಳಿದು ಬಂದು ದಂಪತಿಗಳಿದ್ದಲ್ಲಿಗೆ ನಡೆದರು. ಏಕೆ ಅಳುವಿರೆಂದು ವಿಚಾರಿಸಿದಾಗ ದಂಪತಿಗಳು ತಮ್ಮ ಮುಂದಿರುವ ಮಗನ ಹೆಣ ತೋರಿಸಿ, ಸ್ವಾಮಿ ನಾವು ಈ ಮಗುವಿನ ಜವಳ ತೆಗೆಯಲು ಶ್ರೀಶೈಲಕ್ಕೆ ಹೊರಟಿದ್ದೆವು. ಮಾರ್ಗ ಮಧ್ಯದಲ್ಲಿ ಹೀಗಾಗಿದೆ. ದಿಕ್ಕು ಕಾಣದವರಾಗಿದ್ದೇವೆ ಎಂದರು. ಶ್ರೀಶಾಂತವೀರ ಶಿವಯೋಗಿಗಳು ಆಗಲಿ, ಇದನ್ನೆಲ್ಲ ಮಾಡಿದವನು ಶ್ರೀಶೈಲ ಮಲ್ಲಿಕಾರ್ಜುನನು. ನಿಮ್ಮ ಭಕ್ತಿಯ ಪರೀಕ್ಷೆ ಮಾಡುವುದಕ್ಕೆ ಹೀಗಾಗಿದೆ. ನೀವು ಅಲ್ಲಿರುವ ಆಲದ ಮರದ ಕೆಳಗೆ ಈ ಮಗುವಿನ ದೇಹವನ್ನು ಮಲಗಿಸಿ, ನೀವು ದೂರ ಹೋಗಿ ಕುಳಿತುಕೊಳ್ಳಿರಿ. ಒಂದು ತಾಸಿನ ನಂತರ ನಿಮ್ಮ ಮಗನನ್ನು ಕರೆದುಕೊಂಡು ಹೋಗಿರಿ ಎಂದು ಹೇಳಿ ಅವರು ಆಲದ ಮರದ ಪೊಟರೆಯಲ್ಲಿ ಪೂಜೆಗೆ ಕುಳಿತರು. ಆ ದಂಪತಿಗಳು ತಮ್ಮ ಮಗನ ಹೆಣವನ್ನು ಆಲದ ಗಿಡದ ಕೆಳಗೆ ಮಲಗಿಸಿ ದೂರ ಹೋಗಿ ಕುಳಿತರು. ಒಂದು ತಾಸಿನಲ್ಲಿ ಪೂಜ್ಯ ಶಿವಯೋಗಿಗಳು ಪೂಜೆಯನ್ನು ಮುಗಿಸಿಕೊಂಡು ಪಾದೋದಕ ಪ್ರಸಾದವನ್ನು ಆ ಹುಡುಗನ ಹೆಣದ ಮೇಲೆ ಸಿಂಪಡಿಸಲು ಹುಡುಗನು ನಿದ್ರೆಯಿಂದ ಎಚ್ಚರವಾದಂತೆ ಮೇಲಕ್ಕೆದ್ದು ಆಡಲಿಕ್ಕೆ ಪ್ರಾರಂಭಿಸಿದನು. ಇದನ್ನು ನೋಡಿದ ತಂದೆತಾಯಿಗಳು ಮಗ ಬದುಕಿದ್ದನ್ನು ಕಂಡು ಆನಂದಭರಿತರಾದರು. ಗುರುಗಳು ಸಾಮಾನ್ಯರಲ್ಲ, ಇವರೊಬ್ಬ ಮಹಾನ್ ದೈವಿಶಕ್ತಿಯುಳ್ಳ ಪರಮಾತ್ಮನ ಸ್ವರೂಪ ಸಾಕ್ಷಾತ್ ಶ್ರೀಶೈಲ ಮಲ್ಲಿಕಾರ್ಜುನನೇ ಇವರೆಂದು ಕೊಂಡಾಡಿದರು. ಅಪ್ಪಾ, ನಾವು ನಿಮ್ಮ ಸಮಕ್ಷಮದಲ್ಲಿಯೇ ಹುಡುಗನ ಜವಳ ತೆಗೆಯುತ್ತೇವೆ. ಶ್ರೀಶೈಲ ಮಲ್ಲಿಕಾರ್ಜುನನ ರೂಪದಲ್ಲಿ ನೀವು ನಮಗೆ ಪ್ರತ್ಯಕ್ಷರಾಗಿರುವಿರಿ ಎಂದೇಳಲು ಶ್ರೀಗಳು ಇದಕ್ಕೆ ಒಪ್ಪಲಿಲ್ಲ. ನಿಮ್ಮ ಹರಕೆ ಶ್ರೀಶೈಲಕ್ಕೆ ಹೋಗುವುದಾಗಿದೆ. ನೀವು ಅಲ್ಲಿಗೆ ಹೋಗಿಯೆ ಹುಡುಗನ ಜವಳ ತೆಗೆದುಕೊಂಡು ಬನ್ನಿರಿ ಎಂದು ಅಪ್ಪಣೆ ಮಾಡಲು ಆ ದಂಪತಿಗಳು ಹುಡುಗನನ್ನು ಕರೆದುಕೊಂಡು ಶ್ರೀಶೈಲಕ್ಕೆ ಹೋದರು.

**ಘಟನೆ ೨ :** ಕಾಕಲವಾರ ಸಣ್ಣ ಗ್ರಾಮವಾಗಿದ್ದರೂ ಅಲ್ಲಿ ದೇಶಮುಖರ ಆಳ್ವಿಕೆ ಇತ್ತು. ಕಾಕಲವಾರ ಸಂಸ್ಥಾನವನ್ನು ಆಳುತ್ತಿದ್ದ ರಾಜಾ ಲಕ್ಷ್ಮಣಪ್ಪ ಎಂಬ ದೊರೆ ಬಹಳ ಕಷ್ಟದಲ್ಲಿದ್ದ. ಶಾಪದಿಂದ ಅನ್ನಕ್ಕೆ ಕೈ ಮುಟ್ಟಿದ್ದೇ ತಡ ಅನ್ನವೆಲ್ಲಾ ಹುಳವಾಗುತ್ತಿತ್ತು. ಇದರ ನಿವಾರಣೆಗಾಗಿ ವೈದ್ಯರಿಗೆ ತೋರಿಸಿದರು. ಮಂತ್ರ, ಯಂತ್ರ, ತಂತ್ರ ಹೀಗೆ ಎಲ್ಲ ಉಪಚಾರಗಳನ್ನು ಮಾಡಿದರು. ಯಾವುದರಿಂದಲೂ ಪರಿಹಾರ ಕಾಣದೇ ಬಹಳ ಚಿಂತಾಕ್ರಾಂತರಾಗಿದ್ದರು. ಅಷ್ಟೊತ್ತಿಗೆ ಪೂಜ್ಯಶ್ರೀ ಶಾಂತವೀರ ಶಿವಯೋಗಿಗಳ ಮಹತ್ವವು ಕಾಳ್ಗಿಚ್ಚಿನಂತೆ ಊರ ತುಂಬ ಹಬ್ಬಿತು. ಈ ಸುದ್ದಿಯು ದೊರೆಗಳಾದ ಲಕ್ಷ್ಮಣಪ್ಪ ದೊರೆ ತಿಳಿಯಿತು. ಆಗ ಕಾಕಲವಾರ ದೊರೆಗಳು ತಡಮಾಡದೆ ತಮ್ಮ ಸಂಗಡ ೫-೬ ಜನ ಭಟರನ್ನು ಕರೆದುಕೊಂಡು ಕುದುರೆಯನ್ನೇರಿ ಪೂಜ್ಯ ಶಿವಯೋಗಿಗಳು ಇದ್ದ ಆಲದ ಮರಕ್ಕೆ ಬಂದರು. ಇವರ ಭಕ್ತಿ ಪರೀಕ್ಷೆ ಮಾಡಬೇಕೆಂದು ಪೂಜ್ಯರು ಅಲ್ಲಿಯೇ ಆಸೀನರಾದರು. ಲಕ್ಷ್ಮಣಪ್ಪ ದೊರೆಗಳು ಕತ್ತಲಾಗುತ್ತಲೇ ತಮ್ಮ ಸೇವಕರನ್ನು ಕಾಕಲವಾರಕ್ಕೆ ಹೋಗಲು ಹೇಳಿದರು. ಆದರೆ ಸೇವಕರು ದೊರೆಗಳನ್ನು ಬಿಟ್ಟು ಹೋಗಲು ಒಪ್ಪಲಿಲ್ಲ. ದೊರೆಗಳು "ನಾನು ಪೂಜ್ಯ ಗುರುಗಳ ದರ್ಶನಕ್ಕಾಗಿ ಬಂದಿರುವೆ. ಎಷ್ಟೇ ದಿನಗಳಾದರೂ,

ಎಷ್ಟೇ ಕಷ್ಟಗಳು ಬಂದರೂ ನಾನು ಅವರ ದರ್ಶನ ಮಾಡಿಕೊಂಡೇ ಬರುತ್ತೇನೆ. ನಾನು ಅಲ್ಲಿಗೆ ಬಂದಾದರೂ ಏನು ಮಾಡುವೆ? ಅನ್ನವಿಲ್ಲದೆ ಎಷ್ಟು ದಿನ ಬದುಕುವೆ? ಏನೇ ಆದರೂ ಆ ಮಹಾತ್ಮರ ದರ್ಶನ ಪಡೆದು ಅವರ ಆಶೀರ್ವಾದ ಪಡೆದುಕೊಂಡೇ ಬರುವೆ. ನೀವು ಮಾತ್ರ ಊರಿಗೆ ಹೋಗಿರಿ" ಎಂದು ಸಮಾಧಾನ ಮಾಡಿ ಸೇವಕರನ್ನು ಕಳಿಸಿಕೊಟ್ಟರು. ರಾತ್ರಿಯಾಯಿತು ದೊರೆಗಳು ಅಲ್ಲಿಯೇ ಗಿಡದ ಕೆಳಗೆ ರಾತ್ರಿ ಕಳೆದರು. ಬೆಳಗಾಯಿತು, ಪೂಜ್ಯರು ಕಾಣಲಿಲ್ಲ. ಮಹಾತ್ಮರ ದರ್ಶನವಾಗಲಿಲ್ಲವೆಂದು ಬಹಳ ಚಿಂತೆಯಿಂದ ಗಿಡದ ಕೆಳಗೆ ದೊರೆ ವಿಶ್ರಮಿಸಿದನು. ಶಾಂತವೀರ ಶಿವಯೋಗಿಗಳು ಇವನೊಬ್ಬ ಮಹಾಪಾಪಿ. ಇವನಿಗೆ ಈಗಲೇ ದರ್ಶನ ಕೊಡಬಾರದು. ಇವನ ಭಕ್ತಿ ದೃಢವಾಗಿದೆಯೋ ಇಲ್ಲವೋ ನೋಡಬೇಕೆಂದು ಮೂರು ದಿನಗಳವರೆಗೆ ಆಲದ ಮರದ ಪೊಟರಿನಲ್ಲಿ ಹಾಗೇ ಕುಳಿತರು. ದೊರೆಗಳು ಸಹ ಮೂರು ದಿವಸಗಳವರೆಗೆ ಕಾಡು ಸುತ್ತಾಡಿ ಅದೇ ಗಿಡದ ಬುಡದಲ್ಲಿ ವಿಶ್ರಮಿಸಿ ಬಹಳ ಬೇಸರ ವಾಯಿತು. ನಾಲ್ಕನೇ ದಿವಸ ಮುಂಜಾನೆ ಎದ್ದು ದೃಢಸಂಕಲ್ಪ ಮಾಡಿ ಇಂದು ಸಂಜೆಯ ಒಳಗಾಗಿ ಮಹಾತ್ಮರ ದರ್ಶನವಾದರೆ ಒಳ್ಳೆಯದಾಯಿತು, ಇಲ್ಲವಾದರೆ ಇದೇ ಗಿಡಕ್ಕೆ ನೇಣು ಹಾಕಿಕೊಂಡು ಸಾಯುತ್ತೇನೆಂದು ಶಪಥ ಮಾಡಿ ಒಂಟಿ ಕಾಲ ಮೇಲೆ ದೊರೆ ನಿಂತನು. ದೊರೆಯ ನಿರ್ಧಾರವನ್ನು ಪೂಜ್ಯರು ಅಂತರಂಗದಲ್ಲರಿತು, ಗಿಡದಿಂದ ಹೊರಗೆ ಬಂದು ದೊರೆಗೆ ದರ್ಶನವಿತ್ತರು. ದೊರೆ "ಮಹಾತ್ಮರೆ, ನಾನು ಊಟ ಮಾಡುವ ಅನ್ನವೆಲ್ಲಾ ಹುಳವಾಗುತ್ತಿದೆ. ಹೊಟ್ಟೆಗೆ ಅನ್ನವಿಲ್ಲದೆ ಕೊರಗುತ್ತಿದ್ದೇನೆ. ಎಷ್ಟೇ ಪ್ರಯತ್ನಪಟ್ಟರೂ ಯಾರಿಂದಲೂ ಗುಣಪಡಿಸಲಾಗುತ್ತಿಲ್ಲ, ನನ್ನ ಕಷ್ಟ ತಮ್ಮಿಂದ ಪರಿಹಾರವಾಗುವುದೆಂದೇ ನಂಬಿ ತಮ್ಮ ಆಶೀರ್ವಾದಕ್ಕಾಗಿ ಬಂದಿರುವೆನು. ನನ್ನನ್ನು ಉದ್ಧರಿಸಬೇಕು" ಎಂದು ಬೇಡಿಕೊಂಡನು.

ಆಗ "ಪೂಜ್ಯರು ದೊರೆಗಳೇ ನೀವು ಒಬ್ಬ ಪತಿವ್ರತಾ ಹೆಣ್ಣು ಮಗಳಿಗೆ ಅತ್ಯಾಚಾರ ಮಾಡಿರುವಿರಿ. ಅವಳು ಒಂದು ಮಹಾಶಕ್ತಿಯಾಗಿ, ಬ್ರಹ್ಮಪಿಶಾಚಿಯಾಗಿ ನಿಮ್ಮ ಅನ್ನವನ್ನೆಲ್ಲಾ ಹುಳ ಆಗುವಂತೆ ಶಾಪ ಕೊಟ್ಟಿದ್ದಾಳೆ. ಆಕೆಯ ಶಾಪದಿಂದ ನಿಮಗೆ ಇಂತಹ ಸ್ಥಿತಿ ಒದಗಿದೆ. ಅದರ ನಿವಾರಣೆಗಾಗಿ ನೀವು ಮೊದಲು ಲಿಂಗಧಾರಿಯಾಗಿ ವೀರಶೈವ ಧರ್ಮ ಸ್ವೀಕಾರ ಮಾಡಬೇಕು. ಪೂಜೆಗಾಗಿ ಬೆಳ್ಳಿ, ಬಂಗಾರದ ಸಹಸ್ರ ಹೂ ಪತ್ರಿಗಳು, ಲೋಟ, ತಂಬಿಗೆ, ಗಂಗಾಳಗಳು ಅಲ್ಲದೆ ಸಹಸ್ರ ದೀಪಾರಾಧನೆ ಪಂಚವಾದ್ಯಗಳು ಬೇಕು. ನಿಮ್ಮ ಸಲುವಾಗಿ ಮಾಡುವ ಈ ಪೂಜೆಯು ನಿಮ್ಮ ವಂಶಪರಂಪರೆಯಾಗಿ ನಡೆದುಕೊಂಡ ಬರಬೇಕೆಂದರು". ದೊರೆಗಳು ಸಹಪರಿವಾರದೊಡನೆ ಶ್ರೀಶಾಂತವೀರ ಸ್ವಾಮಿಗಳ ಎದುರಿಗೆ ಕುಳಿತರು. ಪಂಚವಾದ್ಯಗಳು ನುಡಿಯುತ್ತಿದ್ದಂತೆ ದೊರೆಗಳ ಮೈಮೇಲೆ ಇರುವ ಬ್ರಹ್ಮಪಿಶಾಚಿಯು ಎದ್ದು ತಾಳ ಹಾಕುತ್ತ ಕುಣಿಯಲಾರಂಭಿಸಿತು. ಶ್ರೀಗಳು ರುದ್ರಘೋಷ ಮಹಾಮಂತ್ರವನ್ನು ರುದ್ರಾವೇಶದಿಂದ ಹೇಳಲಾರಂಭಿಸಿದರು. ಇದರಿಂದ ಬ್ರಹ್ಮಪಿಶಾಚಿಯು ಆರ್ಭಟಿಸುತ್ತಾ "ಹೇ ಸ್ವಾಮಿಯೇ ನಾನು ಬೃಷ್ಟಾನ್ನ ವನ್ನು ಭಕ್ಷಿಸುತ್ತಾ ಈ ದೊರೆಯ ಹತ್ತಿರ ಸುಖವಾಗಿ ಇದ್ದೆ, ಈಗ ನಾನು ಎಲ್ಲಿಗೆ ಹೋಗಲಿ ನನಗೊಂದು ಸ್ಥಾನವನ್ನು ತೋರಿಸಿರಿ. ಇಲ್ಲವಾದರೆ ನಿಮ್ಮನ್ನೇ ನುಂಗಿ ಬಿಡುವೆನೆಂದಿತು. ಆಗ ಶ್ರೀಶಾಂತವೀರ ಶಿವಯೋಗಿ ಗಳು ಬಾ ಮುಂದಕ್ಕೆ ಎಂದು ಕರೆದು ತಲೆಯ ಮೇಲೆ ಹಸ್ತವನ್ನಿಟ್ಟರು. ಆಗ ಬ್ರಹ್ಮಪಿಶಾಚಿಯ ತನ್ನ ಸ್ವರೂಪ ಬದಲಾಯಿಸಿ ಶಕ್ತಿ ಸ್ವರೂಪಿಣಿಯಾದಳು." ಆಗ ಪೂಜ್ಯರು ನೀನು ಬ್ರಹ್ಮಪಿಶಾಚಿಯಲ್ಲ ನೀನು

ಅನ್ನಪೂರ್ಣೆ, ನಡೆ ನಮ್ಮೊಡನೆ ನಾವು ಕರೆದುಕೊಂಡು ಹೋಗುತ್ತೇವೆಂದು ಅಭಯ ನೀಡಿದರು. ಹೀಗೆ ಕಾಕಲವಾರದ ದೊರೆಗಳಿಗೆ ಬ್ರಹ್ಮಪಿಶಾಚಿಯಿಂದ ಗುರುಗಳು ಮುಕ್ತಗೊಳಿಸಿದರು.

**ಘಟನೆ ೩ :** ಚಿತ್ರದುರ್ಗದ ಜಗದ್ಗುರುಗಳಾದ, ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗುರುಪಾದ ಮುರುಘರಾಜೇಂದ್ರ ಮಹಾಸ್ವಾಮಿಗಳು ತಮ್ಮ ಸಂಗಡ ೭೦೦ ಜನ ಭಕ್ತ ಸಮೂಹದೊಡನೆ ತಮ್ಮ ಸರಂಜಾಮ ಪಲ್ಲಕ್ಕಿ, ಮೇಣೆ, ಕುದುರೆ, ಆನೆ, ಸಕಲ ಬಿರುದಾವಳಿಗಳೊಂದಿಗೆ ಕಾಶಿ ಮತ್ತು ಶ್ರೀಶೈಲ ಕ್ಷೇತ್ರಕ್ಕೆ ಯಾತ್ರೆ ಹೊರಟಿದ್ದರು. ಇಂಥ ದಟ್ಟವಾದ ಅರಣ್ಯದಲ್ಲಿ ಭಾವಭಕ್ತಿಯಿಂದ ಹಾಡುವ ಇಂಪಾದ ಸ್ವರವು ದೂರದಲ್ಲಿ ಕೇಳಿತು. ಸಂಗೀತದ ರಾಗಕ್ಕೆ ದುಂಬಿಯು ಮಕರಂದ ಪುಷ್ಪವನ್ನು ಹುಡುಕುತ್ತಾ ಹೋದಂತೆ ಜಗದ್ಗುರುಗಳು ಸಂಗೀತದ ನಾದದ ಕಡೆಗೆ ತಮ್ಮ ಸಿಬ್ಬಂದಿಯನ್ನು ತಿರುಗಿಸಿದರು. ಅವರೆಲ್ಲಾ ಮಠ ಕಟ್ಟುವ ಸ್ಥಳಕ್ಕೆ ಬಂದರು. ಎಲ್ಲರೂ ಜೈಕಾರ ಮಾಡುವ ಸಪ್ಪಳ ಕೇಳಿ ಪೂಜ್ಯ ಶಾಂತವೀರ ಸ್ವಾಮಿಗಳು ಎದುರುಗೊಳ್ಳಲು ನೋಡಿದಾಗ ಏನಾಶ್ಚರ್ಯ? ತಮ್ಮ ಗುರುಗಳೇ ಎದುರಿಗೆ ನಿಂತಿದ್ದಾರೆ. ಪೂಜ್ಯರು ಜಗದ್ಗುರುಗಳಿಗೆ ಸಾಷ್ಟಾಂಗವೆರಗಿ ಬರಮಾಡಿಕೊಂಡರು. ಜಗದ್ಗುರುಗಳು ಬಹಳ ಸಂತೋಷವಾಗಿ ಕಟ್ಟಡವನ್ನು ನೋಡಿ ಇದೇನು? ಶಾಂತವೀರಾ ಈ ವೈಭವ ಎಂದು ಕೇಳಿದರು. ಆ ಮಾತಿಗೆ ಶಾಂತವೀರ ಸ್ವಾಮಿಗಳು ಬುದ್ಧಿ ಇದು ಸ್ವರ್ಗ, ಇದು ಕೈಲಾಸ ಇದು ವೈಕುಂಠವೆಂದು ಮೂರು ಭಾವಗಳಿಗೆ ಕೈ ಮಾಡಿ ತೋರಿಸಿದರು. ಇದನ್ನು ಕೇಳಿದಾಗ ಜಗದ್ಗುರುಗಳಿಗೆ ಅಂತರಂಗದ ಅರಿವಾಯಿತು. ಶಾಂತವೀರ ನೀನು ನನಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿರುವಿ. ನಾವು ತೀರ್ಥಯಾತ್ರೆಯಿಂದ ಸಂತೋಷಪಡ ಬೇಕೆಂದು ಅದರಿಂದಲೇ ಮುಕ್ತಿ ಬಯಸಿದ್ದೆವು. ಆದರೆ ಇಂದು ನಮಗೆ ಅಂತರಂಗದ ಅರಿವು ಮಾಡಿಕೊಟ್ಟೆ. ಸ್ವರ್ಗ, ಕೈಲಾಸ, ವೈಕುಂಠಗಳು ಇಲ್ಲೇ ಇದ್ದ ಬಳಿಕ ನಾವು ಮುಂದೆ ಯಾತ್ರೆಗೆ ಯಾಕೆ ಹೋಗಬೇಕು? ಮರಳಿ ಚಿತ್ರದುರ್ಗಕ್ಕಾದರೂ ಏಕೆ ಹೋಗಬೇಕು? ನಾನು ಇಲ್ಲಿಯೇ ಇದ್ದು ನಿರ್ವಿಕಲ್ಪ ಸಮಾಧಿಸ್ಥರಾಗಿ ಉಳಿಯುತ್ತೇವೆಂದು ಹೇಳಿದರು. ಆದರೆ ಸಂಗಡ ಬಂದ ಶಿಷ್ಯರು ಒಪ್ಪಲಿಲ್ಲ. ಏನ್ರೀ ಬುದ್ಧಿ ಮಹಾಸಂಸ್ಥಾನ ಬಿಟ್ಟು ಈ ಕಾಡಿನಲ್ಲಿ ಇರುವುದು ಯೋಗ್ಯವಲ್ಲ. ತಮ್ಮ ವೈಭವ ಶಿಷ್ಯ ಕೋಟಿಯನ್ನು ಅಗಲಿ ಇರುವುದು ಬೇಡ, ನಾವು ಮರಳಿ ದುರ್ಗಕ್ಕೆ ಹೋಗೋಣ. ಯಾತ್ರೆ ಇಲ್ಲಿಗೆ ಮುಗಿಸೋಣವೆಂದು ಸಂಗಡ ಬಂದಿರುವ ಖಾಸಾ ಚರಮೂರ್ತಿಗಳಾದ ಖಟ್ವಾಲಿಂಗೇಶ್ವರ ಸ್ವಾಮಿ ಹೇಳಿದನು. ಆಗ ಶಾಂತವೀರ ಸ್ವಾಮಿಗಳು ಜಗದ್ಗುರು ಗಳ ಇಂಗಿತವನ್ನರಿತು, ಆಗಲಿ ಈಗ ನೀವೆಲ್ಲಾ ಮಾರ್ಗ ಆಯಾಸವಾಗಿ ಬಂದಿರುವಿರಿ. ೪-೫ ದಿವಸ ಇಲ್ಲಿಯೇ ಇದ್ದು ವಿಶ್ರಾಂತಿ ಪಡೆಯಿರಿ. ಜಗದ್ಗುರುಗಳಿಗೂ ಶಾಂತಿ ಸಮಾಧಾನ ಲಭಿಸುತ್ತದೆ. ನಂತರ ನೀವು ನಿಮ್ಮ ಗುರುಗಳನ್ನು ಕರೆದುಕೊಂಡು ಯಾತ್ರೆಗಾದ್ರೂ ಹೋಗಿರಿ, ಇಲ್ಲವೆ ಚಿತ್ರದುರ್ಗಕ್ಕಾದರೂ ಹೋಗಿರಿ ಎಂದು ಸಮಾಧಾನಪಡಿಸಿದರು. ಎಲ್ಲರೂ ಶಾಂತವೀರಸ್ವಾಮಿಯವರ ವಚನಕ್ಕೆ ಬದ್ಧರಾಗಿ ಉಳಿದುಕೊಂಡರು.

ಹೀಗಿರುತ್ತಿರಲಾಗಿ ಒಂದು ದಿವಸ ಜಗದ್ಗುರುಗಳು ಶಾಂತವೀರ ನಾವು ಈ ಗುಹೆಯಲ್ಲಿಯೇ ಲಿಂಗಪೂಜೆ ಅನುಷ್ಠಾನಕ್ಕೆ ಕುಳಿತುಕೊಳ್ಳುವೆವು. ಸೇವಕರಿಗೆ ತಿಳಿಸಿ ಗದ್ದುಗೆ ಹಾಕಲು ತಿಳಿಸಿರಿ ಎಂದರು. ಜಗದ್ಗುರುಗಳ ಇಂಗಿತವನ್ನರಿತ ಶಾಂತವೀರ ಸ್ವಾಮಿಗಳು ಗುಹೆಯಲ್ಲಿಯೇ ಎಲ್ಲಾ ವ್ಯವಸ್ಥೆ ಮಾಡಿಸಿದರು.

ಚಿತ್ರದುರ್ಗದ ಶಿಷ್ಯರಿಗೂ ಹಾಗೂ ದಾಸೋಹ ಚರಮೂರ್ತಿಗಳಾದ ಖಟ್ವಾಲಿಂಗೇಶ್ವರ ಸ್ವಾಮಿಗಳಿಗೂ ನೀವೆಲ್ಲಾ ಸ್ನಾನ ಮಾಡಿ ಮಡಿಯಿಂದ ಜಗದ್ಗುರುಗಳವರ ಪಾದಪೂಜೆಗೆ ಬನ್ನಿರಿ. ಇಂದು ಎಲ್ಲರೂ ಊರಿಗೆ ಹೋಗುವಿರಂತೆ ಎನ್ನಲು, ಎಲ್ಲರೂ ಸಂತೋಷಪಟ್ಟರು. ಜಗದ್ಗುರುಗಳು ಸ್ನಾನ ಮಾಡಿ ಗುಹೆ ಯಲ್ಲಿಯೇ ಶಿವಯೋಗ ಸಾಧನೆಗೈಯತೊಡಗಿದರು. ಶಾಂತವೀರ ಸ್ವಾಮಿಗಳು ಜಗದ್ಗುರುಗಳ ಅಂತರಂಗದ ಆತ್ಮಜ್ಯೋತಿ ಬೆಳಗುವುದನ್ನು ತಮ್ಮ ಅಂತರಂಗದಲ್ಲಿ ನೋಡುತ್ತಾ ಹೊರಗೆ ಕುಳಿತಿದ್ದರು. ಯಾವಾಗ ಜಗದ್ಗುರುಗಳು ನಿರ್ವಿಕಲ್ಪ ಸಮಾಧಿಯಲ್ಲಿ ಐಕ್ಯಸ್ಥಳ ಮುಟ್ಟಿದರೋ, ಆಗ ಶಾಂತವೀರ ಸ್ವಾಮಿಗಳು ಎಲ್ಲರನ್ನು ಕರೆದು ಕಾಯಿ, ಕರ್ಪೂರ ಬೆಳಗುತ್ತಿರುವಾಗಲೇ, ಜಗದ್ಗುರುಗಳು ಒಂದು ದೊಡ್ಡ ಭಸ್ಮದ ಗಟ್ಟಿಯಾದರು. ರುದ್ರಾಕ್ಷಿ, ಭಸ್ಮ ದೀಪ ಎಲ್ಲವೂ ಬೆಳಗುತ್ತಿದ್ದವು. ಇಂತಹ ಹಲವಾರು ಪವಾಡಗಳನ್ನು ಇಲ್ಲಿ ಕಾಣಬಹುದಾಗಿದೆ.

ಮಠವನ್ನು ಸ್ಥಾಪಿಸಿ ಮಠದ ಅಧಿಕಾರವನ್ನು ವಹಿಸಿಕೊಂಡ ಶ್ರೀ ಶಾಂತವೀರ ಸ್ವಾಮಿಗಳು ಅಪೂರ್ಣಗೊಂಡಿದ್ದ ಕಟ್ಟಡವನ್ನು ಪೂರ್ಣಗೊಳಿಸಿ ಅನೇಕ ಪವಾಡಗಳನ್ನು ನಡೆಸಿ ಎರಡನೆಯ ಶಾಂತವೀರ ಸ್ವಾಮಿಗಳಿಗೆ ಪಟ್ಟಾಧಿಕಾರದ ಅನುಗ್ರಹವನ್ನು ನೀಡಿ ಲೋಕ ಕಲ್ಯಾಣಾರ್ಥ ಲೋಕಸಂಚಾರ ಹೊರಟು ಬಾಗೋಡಿಯಲ್ಲಿ ಲಿಂಗೈಕ್ಯರಾಗುತ್ತಾರೆ.

**ಪೀಠ ಪರಂಪರೆ :**

೧. ಶ್ರೀ ಮ.ನಿ.ಪ್ರ. ಶಾಂತವೀರ ಸ್ವಾಮಿಗಳು

೨. ಶ್ರೀ ಮ.ನಿ.ಪ್ರ. ಎರಡನೆಯ ಶಾಂತವೀರ ಸ್ವಾಮಿಗಳು

೩. ಶ್ರೀ ಮ.ನಿ.ಪ್ರ. ಶಿವಪೂಜಪ್ಪ ಸ್ವಾಮಿಗಳು

೪. ಶ್ರೀ ಮ.ನಿ.ಪ್ರ. ರುದ್ರಪ್ಪ ಸ್ವಾಮಿಗಳು

೫. ಶ್ರೀ ಮ.ನಿ.ಪ್ರ. ಮಲ್ಲಿಕಾರ್ಜುನ ಸ್ವಾಮಿಗಳು

೬. ಶ್ರೀ ಮ.ನಿ.ಪ್ರ. ಮುರುಘೇಂದ್ರ ಸ್ವಾಮಿಗಳು

೭. ಶ್ರೀ ಮ.ನಿ.ಪ್ರ. ಬಸವಣ್ಣಪ್ಪ ಸ್ವಾಮಿಗಳು

೮. ಶ್ರೀ ಮ.ನಿ.ಪ್ರ. ಶಾಂತವೀರ ಸ್ವಾಮಿಗಳು

೯. ಶ್ರೀ ಮ.ನಿ.ಪ್ರ. ಸಂಗಮೇಶ್ವರ ಸ್ವಾಮಿಗಳು

೧೦. ಶ್ರೀ ಮ.ನಿ.ಪ್ರ. ಶಾಂತವೀರ ಮುರುಘರಾಜೇಂದ್ರ ಸ್ವಾಮಿಗಳು

ಈ ರೀತಿ ಗುರು ಮಠದ ಪರಂಪರೆಯು ಬೆಳೆದು ಬಂದಿದೆ. ಕರ್ತೃ ಗುರುಗಳ ನಂತರ ಬಂದ ಎಲ್ಲಾ ಗುರುಗಳು ಮಠದ ಪರಂಪರೆಯನ್ನು ಎತ್ತಿಹಿಡಿಯುವಲ್ಲಿ ಶ್ರಮವಹಿಸಿದ್ದಾರೆ. ಮಠದ ಪರಂಪರೆಯ ಎಂಟನೆಯ ಗುರುಗಳಾದ ಶ್ರೀಶಾಂತವೀರ ಸ್ವಾಮಿಗಳು ಕ್ರಿ.ಶ. ೧೮೮೬ರಲ್ಲಿ ಲಿಂಗೈಕ್ಯರಾದ ಮೇಲೆ,

ಎಪ್ಪತ್ತೊಂಬತ್ತು ವರ್ಷಗಳ ಕಾಲ ಉತ್ತರಾಧಿಕಾರಿಗಳಿಲ್ಲದೆ ಮಠವು ಖಾಲಿಯಾಗಿ ಉಳಿದಿತ್ತು. ನಂತರ ಮಠದ ಪರಂಪರೆಯ ಒಂಬತ್ತನೆಯ ಗುರುಗಳಾಗಿ ಶ್ರೀ ಸಂಗಮೇಶ್ವರ ಸ್ವಾಮಿಗಳು ಕ್ರಿ.ಶ. ೧೯೬೫ರ ಮೇ ೧೩ರಂದು ಮಠದ ಅಧಿಕಾರವನ್ನು ವಹಿಸಿಕೊಂಡು ಮಠದ ಧಾರ್ಮಿಕ ಕಾರ್ಯಗಳನ್ನು ಮುನ್ನೆಡಿಸಿ ಕೊಂಡು ಬಂದರು. ಶ್ರೀ ಸಂಗಮೇಶ್ವರ ಸ್ವಾಮಿಗಳು ಲಿಂಗೈಕ್ಯರಾದ ನಂತರ ಈಗ ಚೆನ್ನಗಿರಿ ತಾಲೂಕಿನ ತೋಪಿನಹಳ್ಳಿಯ ಶ್ರೀ ಬಸಯ್ಯ ಮತ್ತು ಶ್ರೀಮತಿ ರತ್ನಮ್ಮನವರ ಪುತ್ರರಾದ ಶ್ರೀಶಾಂತವೀರ ಮುರುಘೇಂದ್ರ ಸ್ವಾಮಿಗಳು ಉತ್ತರಾಧಿಕಾರಿಯಾಗಿ ನೇಮಕಗೊಂಡಿದ್ದಾರೆ.

**ಸುತ್ತಮುತ್ತಲಿನ ಗಡಿಗ್ರಾಮಗಳ ಜನರ ಮತ್ತು ಮಠದೊಂದಿಗೆ ಉಳಿದುಕೊಂಡ ಮಹತ್ವದ ಘಟನೆಗಳು**

೧. ಸತ್ತ ಮಗುವನ್ನು ಬದುಕಿಸಿದ್ದು.

೨. ಬ್ರಹ್ಮಪಿಶಾಚಿಯನ್ನು ಶಾಪ ವಿಮೋಚನೆಗೈದು ಅನ್ನಪೂರ್ಣದೇವಿಯನ್ನಾಗಿ ಮಾಡಿದ್ದು.

೩. ಕಾಕಲವಾರ ದೇಶಮುಖರ ಹೆಣ್ಣುಮಗಳನ್ನು ಸಿಟ್ಟಿನಿಂದ ಸುಟ್ಟು ಭಸ್ಮಗೊಳಿಸಿದ್ದು.

೪. ಕಾಕಲವಾರ ದೇಶಮುಖರು ಶಾಪಕ್ಕೆ ಒಳಗಾಗಿ ಮುಟ್ಟಿದ ಅನ್ನವೆಲ್ಲ ಹುಳುವಾಗುತ್ತಿದ್ದಾಗ ಶ್ರೀಗಳು ತಮ್ಮ ತಪೋಶಕ್ತಿಯಿಂದ ಶಾಪ ವಿಮೋಚನೆಗೊಳಿಸಿದ್ದು.

೫. ಚಿತ್ರದುರ್ಗದ ಶ್ರೀಗುರುಪಾದ ಮುರುಘರಾಜೇಂದ್ರ ಸ್ವಾಮಿಗಳು ಇಲ್ಲಿ ಜೀವಂತ ಸಮಾಧಿಯಾಗಿದ್ದು.

೬. ಯಾನಾಗುಂದಿಯ ಮಾತಾಮಾಣಿಕೇಶ್ವರಿಗೆ ಆರ್ಶೀವದಿಸಿ ಅವಳಿಗೆ ಬೇತಾಳ ಬೆತ್ತವನ್ನು ನೀಡಿದ್ದು.

೭. ಗಾಜರಕೋಟದ ಶ್ರೀ ಚನ್ನಪ್ಪಯ್ಯನ ಮತ್ತು ಕಾಕಲವಾರ ದೊರೆಯ ಜಗಳದಲ್ಲಿ ಮಧ್ಯಸ್ಥಿಕೆ ವಹಿಸಿದ್ದು.

೮. ಅಜಮೀರದ ಮುತ್ತಾವಲ್ಲಿ ಹುಸೇನ ಸಾಹೇಬರಿಗೆ ತಮ್ಮ ಮಠದ ಎದುರಿಗಿರುವ ಗುಡ್ಡದಲ್ಲಿ ನೆಲೆಸುವಂತೆ ಮಾಡಿದ್ದು.

೯. ಹೈದರಾಬಾದ್ ನಿಜಾಮನ ಆಡಳಿತದ ಸಂದರ್ಭದಲ್ಲಿ ಮಠದಲ್ಲಿ ಕನ್ನಡ ಬೋಧನೆ ಮಾಡಿದ್ದು.

೧೦. ಮಠದಲ್ಲಿ ಸಂಗ್ರಹಿಸಿಟ್ಟು ಅಪಾರ ಪ್ರಮಾಣ ಕನ್ನಡ ಹಸ್ತಪ್ರತಿಗಳಿಂದ ಇಲ್ಲಿಯ ಜನರು ಕನ್ನಡಕ್ಕೆ ಮತ್ತು ಮಠಕ್ಕೆ ಗೌರವ ಕೊಟ್ಟಿದ್ದು.

ಗುರುಮಠಕಲ್ಲಿನ ಶ್ರೀ ಶಾಂತವೀರ ಮಠದೊಂದಿಗೆ ಕರ್ನಾಟಕಾಂಧ್ರದ ಈ ಗಡಿಗ್ರಾಮಗಳು ಸಾಂಸ್ಕೃತಿಕ ಸಂಬಂಧವನ್ನು ಬೆಳೆಸಿಕೊಂಡಿವೆ.

೧. ಕಾಕಲವಾರ
೨. ಗಾಜರಕೋಟ
೩. ಮೇದಕ
೪. ಪುಟಪಾಕ
೫. ಚಂದ್ರಕಲಾ
೬. ರಿಬ್ಬನಪಲ್ಲಿ

೭. ಕಸ್ತೂರಪಲ್ಲಿ ೮. ಯಾನಾಗುಂದಿ

೯. ಚಂಡರ್ಕಿ ೧೦. ಕಾನಕುರ್ತಿ

೧೧. ಮುಧೋಳ ೧೨. ಚಿತ್ರದುರ್ಗ

**೩.೨. ಜನಪದ ದೈವಾಚರಣೆ**

ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಜನಪದರು ಹಲವು ದೈವಗಳನ್ನು, ಆಚರಣೆಗಳನ್ನು ಸಾಂಪ್ರದಾಯಿಕವಾಗಿ ಆಚರಿಸಿಕೊಂಡು ಬಂದಿರುವುದನ್ನು ನೋಡಬಹುದು. ಗಡಿಯುದ್ದಕ್ಕೂ ಅನೇಕ ಗ್ರಾಮಗಳು ಸ್ತ್ರೀ ದೇವರನ್ನೇ ಊರದೈವವಾಗಿ ಸ್ವೀಕರಿಸಿವೆ. ಜನಪದ ದೈವಾಚರಣೆ ದೀಢಿರನೆ ಹುಟ್ಟಿಕೊಂಡವಲ್ಲ. ಅವುಗಳಿಗೆಲ್ಲ ಒಂದು ಚರಿತ್ರೆ ಎನ್ನುವುದಿರುತ್ತದೆ. ಶಿಷ್ಟ ಸಾಹಿತ್ಯದಲ್ಲಿ ಈ ಚರಿತ್ರೆಗಳು ಕಂಡುಬರದಿದ್ದರೂ ಮೌಖಿಕ ಸಾಹಿತ್ಯ ಚರಿತ್ರೆಯಲ್ಲಿ ಈ ದೈವಾಚರಣೆಗಳು ಉಲ್ಲೇಖಗೊಂಡಿರುತ್ತವೆ.

**೩.೨.೧. ಘುತ್ತರಗಿ ಸಿಡಿಬಂಡಿ ಆಚರಣೆ :**

'ಘುತ್ತರಗಿ ಭಾಗಮ್ಮ' ಎನ್ನುವ ದೈವ ಅಫಜಲ್‌ಪೂರ್ ತಾಲೂಕಿನಲ್ಲಿದ್ದರೂ ಸೇಡಂ ಮತ್ತು ಯಾದಗೀರ ಗಡಿಗ್ರಾಮಗಳಲ್ಲಿನ ಜನಪದರ ಮೇಲೆ ಬಹಳಷ್ಟು ಪ್ರಭಾವ ಬೀರಿದೆ. ಇದರ ಕುರಿತು ಒಂದು ಜನಪದ ಕಥೆಯು ಹೀಗಿದೆ. "ಒಂದು ದಿನ ಘುತ್ತರಗಿಯ ಊರಗೌಡನಿಗೆ ಕನಸೊಂದು ಬಿದ್ದು, ಕನಸ್ಸಿನಲ್ಲಿ ಭಾಗಮ್ಮದೇವಿ ನಾನು ವಿಜಯನಗರದ ರಾಜರಾಜೇಶ್ವರಿ. ಆ ಸಾಮ್ರಾಜ್ಯ ಪತನಗೊಂಡಿದ್ದರಿಂದ ನದಿಯಲ್ಲಿ ಹಾವಾಗಿ ಹರಿದು ಬಂದು ನಿನ್ನ ಮನೆಯಲ್ಲಿ ನೆಲೆಸಲು ನಿರ್ಧರಿಸಿದ್ದೇನೆ. ನನ್ನನು ಆರಾಧಿಸುವ ಜನರನ್ನು ನಾನು ಉದ್ಧಾರ ಮಾಡುತ್ತೇನೆ. ಭಕ್ತರು ಉದ್ಧಾರವಾಗಬೇಕಾದರೆ ನನಗೆ 'ಸಿಡಿ' ಹರಕೆ ನೆರವೇರಿಸಬೇಕು" ಎಂದಳಂತೆ. ಸಿಡಿ ಆಡುವ ರೀತಿಯೆಂದರೆ ಬೆನ್ನಿಗೆ ಉಕ್ಕಿನ ಮಳೆಯನ್ನು (ಕೊಂಡಿಯನ್ನು) ಸಿಕ್ಕಿಸಿಕೊಂಡು ಒಂದು ಉದ್ದವಾದ ಕಟ್ಟಿಗೆಯ ಮೇಲೆ ಜೋತು ಬಿದ್ದು ಹೊಳೆಯಿಂದ ದೇವಸ್ಥಾನದವರೆಗೆ ನೇತಾಡಿಕೊಂಡು ಬರಬೇಕು. ಹಾಗೇ ಬಂದರೆ ನನ್ನ ಹರಕೆ ತೀರಿದಂತೆ ಎಂದು ಭಾಗಮ್ಮದೇವಿ ಹೇಳಿದಳಂತೆ" ಇಂದಿಗೂ ಅದೇ ಪದ್ಧತಿಯಲ್ಲಿ ಈ ಆಚರಣೆ ನಡೆದುಕೊಂಡು ಬಂದಿದೆ.

"ಸಿಡಿಯಾಡುವೆ ನಾ ಸಿಡಿಯಾಡುವೆ ನಾ ..... ಸಿಡಿಯಾಡುವೆ
ಅಮ್ಮನ ಜ್ಞಾನವ ಮಾಡುತಲಿ ಭಾಗಮ್ಮನ ದರುಶನ
ಪಡೆಯುತಲಿ .... ನಾ ಸಿಡಿಯಾಡುವೆ ||ಪಲ್ಲವಿ||

ಜಗದ ರಕ್ಷಿತಿ ನೀನಮ್ಮ ಭಕ್ತರ ಪೋಷಕಿ ನೀನಮ್ಮ
ತ್ರಿಲೋಕದಾರಿ ನೀನಮ್ಮಾ |
ಮಾನವ ಕೋಟೆಗೆ ಭಾಗಮ್ಮ
ಸಿಡಿಯಾಡುವೆ ನಾ ಸಿಡಿಯಾಡುವೆ ||೧||

ದಿವ್ಯ ಶಕ್ತಿಯೂ ನೀನಮ್ಮ ಎಂಥ ಮಹಿಮೆ ತುಂಬಿದೆಯಮ್ಮ
ಭಾಗಮ್ಮ ಎಂದಾಗ ಏನಾನಂದ |

ಸಿಡಿಯಾಡುವೆ ನಾ ಸಿಡಿಯಾಡುವೆ
ಜಾತಿಭೇದ ನಿನಗಿಲ್ಲಮ್ಮಾ | ||೨||

ಎಲ್ಲರೂ ನಿನಗೆ ಸರಿಸಮಾನಮ್ಮಾ
ಸಿಡಿಯಾಡಲು ಬರುವ ಭಕ್ತರಿಗೆ
ಮುಕ್ತಿಯ ಮಾರ್ಗವ ತೋರಮ್ಮಾ
ಸಿಡಿಯಾಡುವೆ ..... ನಾ .... ಸಿಡಿಯಾಡುವೆ"[೨] ||೩||

ಎಂಬಿತ್ಯಾದಿಯಾಗಿ ಭಾಗಮ್ಮನನ್ನು ಆರಾಧಿಸುವ ಭಕ್ತಾದಿಗಳು ಅವಳ ಹಾಡು ಹಾಡುತ್ತಾರೆ.

ಈ ಆಚರಣೆಯ ಪ್ರಾಚೀನತೆಯನ್ನು ಹುಡುಕುತ್ತಾ ಹೋದರೆ ಅದು ವಿಜಯನಗರದ ಕಾಲಕ್ಕೆ ಹೋಗಿ ನಿಲ್ಲುತ್ತದೆ. ವಿಜಯನಗರಕ್ಕೆ ಬಂದಿದ್ದು **ದು ಆರ್ತೆ ಬಾರ್ಬೋಸ್** (ಕ್ರಿ.ಶ.೧೫೦೪-೧೫೧೪) ವಿದೇಶಿ ಯಾತ್ರಿಕನು ಈ ಜನಪದ ಆಚರಣೆಗೆ ಹೋಲುವಂತೆ ಒಂದು ಬಗೆಯ ಆಚರಣೆಯನ್ನು ಉಲ್ಲೇಖಿಸುತ್ತಾನೆ. "ತನ್ನಿಚ್ಛೆ ನೆರವೇರಿದಾಗ ಆಕೆ ಗಂಡನ ಅನುಮತಿ ಪಡೆದು ದೇವರಿಗೆ ತನ್ನ ರಕ್ತ ಚೆಲ್ಲುವ ಹರಕೆಯನ್ನು ಸಲ್ಲಿಸುತ್ತಾಳೆ. ಅದನ್ನು ನಡೆಸುವ ರೀತಿ ಹೀಗಿದೆ. ಎತ್ತಿನ ಗಾಡಿಯ ಮೇಲೆ ಬಾವಿಯಿಂದ ನೀರೆತ್ತುವ ಎತ್ತದಂತಹ ಏತವನ್ನು ಹೂಡುತ್ತಾರೆ. ಆ ಏತದ ತುದಿಯಲ್ಲಿ ಎರಡು ಕಬ್ಬಿಣದ ಕೊಕ್ಕೆಗಳಿರುತ್ತವೆ. ಹರಕೆ ಸಲ್ಲಿಸುವ ಹೆಣ್ಣು ತನ್ನ ತಂದೆ ತಾಯಿ ಬಂಧುಬಳಗದೊಡಗೂಡಿ, ವಾದ್ಯ ನೃತ್ಯಗಾಯನ ಸಮೇತ ಮೆರವಣಿಗೆ ಹೊರಡುತ್ತಾಳೆ. ಸೊಂಟದಿಂದ ಕೆಳಕ್ಕೆ ಮಾತ್ರ ಹತ್ತಿಯ ಬಟ್ಟೆಯನ್ನುಟ್ಟಿರುತ್ತಾಳೆ. ದೇವರಗುಡಿಯ ಮುಂದೆ ಹೆಬ್ಬಾಗಿಲಿನ ಬಳಿ ಎತ್ತಿನ ಗಾಡಿ ನಿಲ್ಲುತ್ತೆ. ಅಲ್ಲಿಗೆ ಹೋದ ಮೇಲೆ ಏತವನ್ನು ಬಗ್ಗಿಸಿ ಅದರ ತುದಿಯಲ್ಲಿರುವ ಕೊಕ್ಕೆಗಳನ್ನು ಸೊಂಟಕ್ಕೆ ಚುಚ್ಚುತ್ತಾರೆ. ಕೊಕ್ಕೆಗಳು ಚರ್ಮವನ್ನು ಹೊಕ್ಕು ಮಾಂಸಖಂಡಕ್ಕೆ ಚುಚ್ಚಿಕೊಳ್ಳುತ್ತವೆ. ಆಕೆಯ ಒಂದು ಕೈಗೆ ಕಠಾರಿಯನ್ನು, ಮತ್ತೊಂದು ಕೈಗೆ ಗುರಾಣಿಯನ್ನು ಕೊಡುತ್ತಾರೆ. ಅನಂತರ ಏತವನ್ನು ಮೇಲೆ ಏತ್ತುತ್ತಾರೆ. ಕೆಳಗೆ ನಿಂತ ಜನಸಮೂಹ ಊಘೇ ಎನ್ನುತ್ತದೆ. ಏತದಿಂದ ನೇತಾಡುವ ಆಕೆಯ ಸೊಂಟದಿಂದ ಹೊರಟ ರಕ್ತ ಕಾಲುಗಳ ಮೇಲೆ ಹರಿದು ತೊಟ್ಟಿಕ್ಕುತ್ತಿರುತ್ತದೆ. ಆದರೆ ಆಕೆ ಕೊಂಚವು ಮುಖ ಚುಳ್ಳಿಸದೆ ನಗುನಗುತ್ತ ತನ್ನ ಕಠಾರಿಯನ್ನು ಬೀಸುತ್ತಿರುತ್ತಾಳೆ. ತನ್ನ ಗಂಡನ ಕಡೆಗೂ ಸಂಬಂಧಿಗಳ ಕಡೆಗೂ ನಿಂಬೆಹಣ್ಣುಗಳನ್ನು ಎಸೆಯುತ್ತಿರುತ್ತಾಳೆ. ಈ ರೀತಿ ಸಿಡಿ ಆಡಿಸಿ ಆಕೆಯನ್ನು ದೇವರ ಮುಂದೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಆಕೆಯನ್ನು ಏತದಿಂದ ಇಳಿಸಿ ಗಾಯಗಳಿಗೆ ಔಷಧಿ ಹಾಕುತ್ತಾರೆ. ಆಕೆ ದೇವರಿಗೆ ಪೂಜೆ ಮಾಡಿ ನೆರೆದವರಿಗೂ ಬ್ರಾಹ್ಮಣರಿಗೂ ಅನ್ನ ಸಂತರ್ಪಣೆ ನಡೆಸಿ ದಾನಧರ್ಮ ಮಾಡುತ್ತಾಳೆ."[೩]

ಈ ವಿದೇಶಿ ಯಾತ್ರಿಕನು ದಾಖಲಿಸಿದ ಮಾಹಿತಿ ಮತ್ತು ನಮ್ಮ ಜನಪದ ದೈವಾಚರಣೆಯಲ್ಲಿ ಇಂದಿಗೂ ಪ್ರಚಲಿತದಲ್ಲಿರುವ ಸಿಡಿ ಆಡುವ ಆಚರಣೆ ಒಂದೇ ಆಗಿರುವುದು ಈ ಕೆಳಗಿನ ಅಂಶಗಳಿಂದ ಖಚಿತಪಡಿಸಿಕೊಳ್ಳಬಹುದು.

೧. ಜನಪದರ ಕಥೆಯಲ್ಲಿ ಭಾಗಮ್ಮದೇವಿ ನದಿಯ ಮೂಲಕ ಹಾವಿನ ರೂಪದಲ್ಲಿ ಊರನ್ನು ಪ್ರವೇಶಿಸುತ್ತಾಳೆ.

೨. ವಿಜಯನಗರದ ರಾಜರಾಜೇಶ್ವರಿಯಾದ ಇವಳು ಅದು ಪತನ ಹೊಂದಿದ ನಂತರ ಘುತ್ತರಗಿಯಲ್ಲಿ ಬಂದು ನೆಲೆಸಿದಳು.

೩. ಜನಪದರು ಈ ಆಚರಣೆಗೆ 'ಸಿಡಿ' ಆಡುವುದು ಎಂದು ಕರೆಯುತ್ತಾರೆ. ದು ಆತ್ ಬಾರ್ಬೊಸ್‌ನು ಇದನ್ನು 'ಸಿಡಿ' ಆಡುವುದು ಎಂದೇ ಕರೆದಿರುತ್ತಾನೆ.

೪. ಜನಪದರು ಇಂದು ಬಳಸುವ 'ಸಿಡಿ' ಆಡುವ ಏತ ಮತ್ತು ಅಂದಿನ ಏತಗಳು ಒಂದೇ ರೂಪದ್ದಾಗಿವೆ. ಅಲ್ಲದೇ ಕಬ್ಬಿಣದ ಕೊಕ್ಕೆ ಸೊಂಟದ ಮೇಲೆಯೆ ಚುಚ್ಚುವುದಾಗಿದೆ.

ಈ ಆಧಾರಗಳಲ್ಲಿ ನದಿ, 'ಸಿಡಿ' ಎಂಬವುಗಳು ಒಂದೇ ಆಗಿರುವುದರಿಂದ ನಮ್ಮ ಜನಪದರು ಇಂದು ಆಡುವ 'ಸಿಡಿ' ಎಂಬ ಆಚರಣೆ ವಿಜಯನಗರ ಕಾಲಕ್ಕೆ ಪ್ರಚಲಿತದಲ್ಲಿತ್ತು. ಈ ಆಚರಣೆಯ ಮುಂದುವರೆದ ಭಾಗವೆಂಬಂತೆ ಈ ಭಾಗದಲ್ಲಿನ ಅನೇಕರು ಭಾಗ್ಯವಂತಿದೇವಿಯ ಆರಾಧಕರಾಗಿದ್ದಾರೆ. ಈ ದೇವಿಯ ಆಚರಣೆಗಳನ್ನು ಇವತ್ತಿಗೂ ಹಾಗೆಯೇ ಮುಂದುವರಿಸಿಕೊಂಡು ಬಂದಿದ್ದಾರೆ. ಮೊದಲಿನಿಂದಲೂ ಈ ಗಡಿಗ್ರಾಮಗಳಲ್ಲಿ ಗ್ರಾಮದೇವತೆಯರ ಆರಾಧನೆ ನಡೆದುಕೊಂಡು ಬಂದಿದೆ. "ಕ್ರಿ.ಶ. ೧೨೮೯-೧೩೨೩ರವರೆಗೆ ರಾಜ್ಯವಾಳಿದ ಕಾಕತೀಯರಲ್ಲಿನ ಕೊನೆಯ ರಾಜನಾದ ಪ್ರತಾಪರುದ್ರನು ಎಲ್ಲಮ್ಮನನ್ನು ಮದುವೆಯಾಗಲು ಬಯಸಿ ಅವಳಿಂದ ನಾನಾ ಬಗೆಯ ರೋಗರುಜಿನಗಳಿಗೆ ಸಿಕ್ಕಿ ಅವಳ ಭಕ್ತನಾದಂತೆ ಜನಪದ ಸಾಹಿತ್ಯ ಹೇಳಿದೆ."[೪] ಕಾಳಿ, ದ್ಯಾವಮ್ಮ, ಪೋತಮ್ಮ, ದುರ್ಗಮ್ಮ, ಎಲ್ಲಮ್ಮ, ಚೌಡಮ್ಮ, ಎಕ್ಕಲಮ್ಮ ಈ ಸಪ್ತಮಾತೃಕೆಯ ಶಿಲ್ಪಗಳು ಬುರುಕಪಲ್ಲಿ, ಬನ್ನೂರು, ಇಟಗಲ್, ಮೇದಕ, ಚಂದಾಪುರ, ಕೋಲಕುಂದಾ, ಮುಧೋಳ, ಮದನಾ ಗಡಿಗ್ರಾಮಗಳಲ್ಲಿ ಕಂಡುಬರುತ್ತವೆ. ಇವುಗಳ ಜಾತ್ರೆ ೩ ವರ್ಷ ಅಥವಾ ೧ ವರ್ಷಕ್ಕೊಮ್ಮೆ ದೇವಿಯ ಹೆಸರಿನಲ್ಲಿ ಕುರಿ, ಕೋಣ ಕಡಿಯುವುದರೊಂದಿಗೆ ಮಾಡಲಾಗುತ್ತದೆ. ಈ ದೇವಿಯ ಹೆಸರಿನಲ್ಲಿ ಬಸವಿ ಬಿಡುವ ಪದ್ಧತಿ ಇನ್ನೂ ಜೀವಂತವಾಗಿದೆ. ಒಂದು ಮೂಲದ ಪ್ರಕಾರ ಬಸವಿ ಬಿಡುವ ಪದ್ಧತಿ ಈ ಭಾಗಕ್ಕೆ ಆಂಧ್ರದಿಂದ ಬಂದಿರುವ ಸಾಧ್ಯತೆಯನ್ನು ಊಹಿಸಬಹುದು.

ಈ ದೇವಿಯರ ಕುರಿತಾಗಿ ಇಲ್ಲಿನ ಗರತಿಯರು ಅನೇಕ ಜನಪದ ತ್ರಿಪದಿಗಳನ್ನು, ಹಾಡುಗಳನ್ನು ಹಾಡುತ್ತಾರೆ.

"ಅಲ್ಲಾರು ದುರ್ಗಮ್ಮ ಹಾರುರ ಮಗಳಮ್ಮ
ರಂಗ ಬೇಡ್ಯಾಳ ರೈತರಗಿ-ಕಟ್ಟೆಮ್ಮ
ಕುಂಬ ಬೇಡ್ಯಾಳ ಕುರಿ-ಕ್ವಾಣ

ಅಲ್ಲೂರ ದುರ್ಗಮ್ಮ ಹಾರೂರ ಮಗಳಮ್ಮ
ಕುಂಬ ಬೇಡ್ಯಾಳ ಕುರಿ ಕ್ವಾಣ - ಯಾದಗಿರಿ
ರಂಗ ಬೇಡ್ಯಾಳ ರಾಯಚೂರ

ಎಲ್ಲಮ್ಮ ನೆಂಬಕ್ಕ ಯಾರಿಗಿ ಬಳ್ಳೆಕ್ಕಿ
ಬಲ್ಲವರ ಭಂಗ ಕಳದಾಳ - ಯಲ್ಲಮ್ಮ
ಹಲ್ಲೀಲೆ ಬೇವು ಇಳಿಸ್ಯಾಳ

ಬಳ್ಳುಡಿಗಿ ಎಲ್ಲಮ್ಮ ಬಗಲೆಲ್ಲ ಖ್ಯಾದಿಗಿ
ಹಾಸ ಮಂಚಲ್ಲ ಹವಳಾವ - ಅಲ್ಲೂರ ದುರ್ಗ
ಬೀಸು ಸೆರಗಲ್ಲ ಬಿಳಿ ಮುತ್ತು"[೫]

**೩.೨.೨. ಈರೋಡ್ಯಾ (ನಾಗಾರಾಧನೆ) :**

ಈ ಪ್ರದೇಶದಲ್ಲಿ ಅನೇಕಾನೇಕ ಹಬ್ಬ ಹರಿದಿನ, ಆಚರಣೆ, ಸಂಪ್ರದಾಯಗಳು ಕಂಡುಬರುತ್ತವೆ. ಇವುಗಳಲ್ಲಿಯ ಕೆಲವೊಂದು ವಿಶಿಷ್ಟ ಆಚರಣೆಗಳು ಪ್ರಾಚೀನ ಕಾಲದಿಂದ ಇಂದಿಗೂ ಪ್ರಚಲಿತದಲ್ಲಿವೆ. ಇಂತಹ ಜನಪದ ಆಚರಣೆಗಳ ಸಾಲಿನಲ್ಲಿಯೇ 'ಈರೋಡ್ಯಾ' ಎಂಬ ಆಚರಣೆ ಬೆಳೆದುಕೊಂಡು ಬಂದಿದೆ.

'ಈರೋಡ್ಯಾ' ಎಂಬ ಜನಪದ ಆಚರಣೆ ನಾಗದೇವತೆಗೆ ಸಂಬಂಧಿಸಿದ್ದು. ನಾಗದೇವರ ಬನಗಳು ಕರಾವಳಿಯ ಕಡೆ (ಮಂಗಳೂರು ಸುತ್ತಮುತ್ತ) ಪ್ರಮುಖವಾದ ದೇವರು. ಅಲ್ಲೆಲ್ಲ ದೊಡ್ಡ ದೊಡ್ಡ ನಾಗಬನಗಳಿವೆ. ಕರಾವಳಿಯ ತೀರ ಪ್ರದೇಶವನ್ನು ನಾಗಭೂಮಿ ಎಂದು ಕರೆಯಲಾಗುತ್ತದೆ. ನಾಗದೇವತೆಗಳು ಸಮುದ್ರ ತಳದ ಪಾತಾಳಲೋಕದಲ್ಲಿ ವಾಸವಾಗಿರುತ್ತಾರೆ. ಪಾತಾಳವೇ ಅವರ ಲೋಕ. ಈ ಸಮುದ್ರದಂಚಿನ ತೀರ ಭೂಮಿಗೆ ನಾಗದೇವರ ಇಲ್ಲವೇ ನಾಗ ಕುಟುಂಬಗಳು ಪಾತಾಳ ಲೋಕದಿಂದ ತೀರ ಭೂಮಿಗೆ ಬಂದು ಹೋಗುತ್ತವೆ ಎಂಬ ನಂಬಿಕೆಯಿಂದಲೇ ಈ ತೀರ ಪ್ರದೇಶಗಳಲ್ಲಿನ ಜನರು ನಾಗಾರಾಧನೆಯಲ್ಲಿ ತೊಡಗುತ್ತಾರೆ.

ಇದರಂತೆ ನಾಗಾರಾಧನೆ ಬಹಳ ಪ್ರಾಚೀನ ಕಾಲದಿಂದಲೂ ಈ ಗಡಿಭಾಗದಲ್ಲಿ ಪ್ರಚಲಿತವಿರುವ ಆಚರಣೆಯಾಗಿದೆ. ಇಲ್ಲಿನ ಶಾಸನ, ದೇವಾಲಯ, ವೀರಗಲ್ಲು, ಮಾಸ್ತಿಗಲ್ಲುಗಳ ಮೇಲೆ ನಾಗಚಿತ್ರಗಳು ಕಂಡುಬರುತ್ತವೆ. ಅಲ್ಲದೇ ಸ್ವತಂತ್ರವಾದ ಶಿಲೆಗಳಲ್ಲಿ ಜೋಡಿ ನಾಗಗಳು, ಒಂಟಿ ನಾಗಗಳು ಇಲ್ಲವೇ ಮುಖ ಮನುಷ್ಯ, ದೇಹ ಹಾವಿನ ರೂಪದ ಶಿಲ್ಪಗಳ ನಾಗ-ನಾಗಿಣಿಯರ, ಮನುಷ್ಯ-ಪ್ರಾಣಿಗಳ ರೂಪದ ಅನೇಕ ಶಿಲ್ಪಗಳು ಈ ಭಾಗದಲ್ಲಿ ಕಂಡುಬರುತ್ತವೆ. ಹಾವಿನ ರೂಪದ ನಾಗ ಮತ್ತು ನಾಗ ದಂಪತಿಗಳ ಶಿಲ್ಪಗಳು ಬಂದೆಪಲ್ಲಿ ಗುಂಡೇಪಲ್ಲಿಗಳಲ್ಲಿ ಮೇಲಿನ ಭಾಗ ಮನುಷ್ಯ ಮತ್ತು ಕೆಳಗಿನ ಭಾಗ ಹಾವಿನ ರೂಪದ ಶಿಲ್ಪಗಳು ಇಲ್ಲಿವೆ. ಮೇದಕ್‌ನ ಒಂದು ಶಿಲ್ಪದಲ್ಲಿ ಬೆತ್ತಲೆ ಅಡ್ಡಗಾಲನ್ನಿಟ್ಟು ನಿಂತ ಮಹಿಳೆ ತನ್ನ ತೊಡೆಗೆ ನಾಗರಹಾವನ್ನು ಸುತ್ತಿ ಕಟ್ಟಿಕೊಂಡಿದ್ದಾಳೆ-ಈ ಮೇಲಿನ ಅಂಶಗಳಿಂದ ಈ ಭಾಗದಲ್ಲಿ ನಾಗ, ಹಾವುಗಳ ಕಲ್ಪನೆ ಇದ್ದದ್ದು ಕಂಡುಬರುತ್ತದೆ. ಈ ಶಿಲ್ಪಗಳನ್ನು ಇಂದಿಗೂ ಇಲ್ಲಿ ಪೂಜಿಸಲಾಗುತ್ತದೆ.

'ಈರೋಡ್ಯಾ' ಎಂಬುದು ನಾಗಾರಾಧನೆಯ ಒಂದು ಬಗೆ. ಈರೋಡ್ಯಾ (ನಾಗ) ದೇವರು ಒಂದು ಕಡೆಯಿಂದ ಇನ್ನೊಂದು ಕಡೆ ಸಂಚರಿಸುವ ನಂಬಿಕೆಯು ತುಂಬಾ ವಿಶಿಷ್ಟವಾದುದು. ಒಬ್ಬರ

ಮನೆಯಲ್ಲಿ ಈರೋಡ್ಯಾ ದೇವರಿಗೆ ಪೂಜೆ ಮಾಡಿ ನೈವೇದ್ಯವಿಟ್ಟು, ಆ ನೈವೇದ್ಯವನ್ನು ಮನೆಯವರಲ್ಲದೆ ಬೇರೆ ಯಾರು ಉಣ್ಣುವಂತಿಲ್ಲ. ಒಂದು ವೇಳೆ ಬೇರೆ ಯಾರಾದರು ತಿಂದರೆ ಅವರ ಜೊತೆಗೆ ಈ ಈರೊಡ್ಯಾ ದೇವರು ಹೋಗಿ ಅವರಿಗೆ ಕಷ್ಟಗಳನ್ನು ಕೊಡುವನಂತೆ ಈ ಈರೋಡ್ಯಾ ದೇವರು ಬೇರೆ ಬೇರೆ ರೀತಿಯಲ್ಲಿ ವಾಸವಿರುವನು. ಒಂದು ಕಡೆ ಕಂಬದಲ್ಲಿ, ಒಂದು ಕಡೆ ಗಿಡದಲ್ಲಿ, ಒಂದು ಕಡೆ ಹೊಸ್ತಿಲಲ್ಲಿ, ಒಂದು ಕಡೆ ಮಂಜಿಗೆ ಕಂಬದಲ್ಲಿ ನೆಲೆಸಿರುವಂತೆ ಈರೋಡ್ಯಾ ದೇವರು ತನಗಿಟ್ಟ ಎಡೆಯ ಮುಖಾಂತರ ಒಂದು ಊರಿನಿಂದ ಇನ್ನೊಂದು ಊರಿಗೆ ಪ್ರಯಾಣ ಬೆಳೆಸುತ್ತದೆ. ಈ ದೇವರ ಎಡೆ ಉಂಡವರಿಗೆ ಈರೋಡ್ಯಾ (ನಾಗ) ತಮ್ಮ ಹಿಂದೆ ಬಂದಿರುವ ಲಕ್ಷಣಗಳು ಮೇಲಿಂದ ಮೇಲೆ ಗೋಚರಿಸಿ, ಕೊನೆಗೆ ಅವರೇ ಮಾನಸಿಕವಾಗಿ ಈರೋಡ್ಯಾ ನಮ್ಮೊಂದಿಗೆ ಬಂದಿದ್ದಾನೆ ಎಂದು ನಂಬುತ್ತಾರೆ. ಹಿಂದೆ ಈ ಈರೋಡ್ಯಾ (ನಾಗ) ದೇವರು ಎಡೆ ಉಂಡವರ ಜೊತೆಗೆ ಬಂದಾಗ, ಈ ದೇವರಿಗೆ ಇಷ್ಟವಾದಂತೆ ನಡೆದುಕೊಳ್ಳಬೇಕು. ಇಲ್ಲದಿದ್ದರೆ ಅವತ್ತಿನಿಂದಲೇ ಅವರಿಗೆ ಕಷ್ಟಗಳು ಅವರಿಗೆ ಪ್ರಾರಂಭವಾಗುತ್ತವೆ. ಈರೋಡ್ಯಾ ದೇವರು ಎಲ್ಲಿ ವಾಸವಾಗಿರುವನೋ ಆ ಮನೆಯು ಯಾವತ್ತೂ ಸಂಪದ್ಭರಿತವಾಗಿರುತ್ತದೆ ಎಂಬ ನಂಬಿಕೆ ಇಲ್ಲಿನ ಜನರಲ್ಲಿ ಅಚಲವಾಗಿದೆ. ಹಾಗೆಂದು ಬೇರೆಯವರ ಮನೆಯಿಂದ ಉದ್ದೇಶಪೂರ್ವಕವಾಗಿ ಈರೋಡ್ಯಾ ದೇವರನ್ನು ಕರೆತರುವಂತಿಲ್ಲ. ಒಂದು ವೇಳೆ ಹಾಗೇ ಕರೆತಂದರೆ ಅವರಿಗೆ ಸಂಕಷ್ಟ, ತೊಂದರೆ ಗಳುಂಟಾಗುತ್ತವೆ. ಇದಕ್ಕೆ ಪರಿಹಾರವೆಂದರೆ ಯಾರ ಜೊತೆಗೆ ಈರೋಡ್ಯಾ ದೇವರು ಬಂದಿರುವನೋ ಅವರ ಮಗಳ ಮೊದಲ ಮಗುವಿನ ಜೊತೆಗೆ ಬಂದು ಈ ಈರೋಡ್ಯಾ ದೇವರಿಗೆ ನೈವೇದ್ಯ ನೀಡಿದರೆ ಮಾತ್ರ ಈರೋಡ್ಯಾ ದೇವರು ಶಾಂತನಾಗುತ್ತಾನೆ.

ಇಂತಹ ವಿಶಿಷ್ಟ ಆಚರಣೆ ಈ ಭಾಗದ ತುಂಬೆಲ್ಲ ಪ್ರಚಲಿತದಲ್ಲಿದೆ. ಕರ್ನಾಟಕದ ಒಂದು ಗಡಿ ಹಳ್ಳಿಯಿಂದ ಆಂಧ್ರದ ಗಡಿಹಳ್ಳಿಗೆ, ಆಂಧ್ರದ ಗಡಿಹಳ್ಳಿಯಿಂದ ಇಲ್ಲಿನ ಗಡಿಹಳ್ಳಿಗಳಿಗೆ ಈ ಈರೋಡ್ಯಾ ದೇವರ ಆಚರಣೆ ಪ್ರಸಾರಗೊಳ್ಳುತ್ತಾ ಎರಡು ಕಡೆ ಒಂದು ರೀತಿಯ ಸಾಂಸ್ಕೃತಿಕ ಸಂಬಂಧವನ್ನು ಈ ಈರೋಡ್ಯಾ (ನಾಗಾರಾಧನೆ) ದೇವರು ಏರ್ಪಡಿಸುತ್ತಿದೆ.

**೩.೨.೩. ಪುರುವಂತಿಕೆ :**

ಇತರ ಗ್ರಾಮೀಣ ಪ್ರದೇಶಗಳಲ್ಲಿರುವಂತೆಯೇ ಪುರುವಂತಿಕೆ (ವೀರಪೂಜೆ) ಆಚರಣೆಯು ಈ ಭಾಗದ ಹಳೆ ಸಂಪ್ರದಾಯದಲ್ಲಿ ಒಂದಾಗಿದೆ. ಪ್ರತಿಯೊಂದು ಪ್ರಾಚೀನ ಐತಿಹಾಸಿಕ ಸ್ಥಳದಲ್ಲಿ ಹುತಾತ್ಮರಾದ ವೀರರ ಶಿಲೆಗಳ ಮುಂದೆ (ವೀರಗಲ್ಲು) ಈ ವೀರ ನರ್ತನ ಮಾಡುವುದು ಕಂಡು ಬರುತ್ತದೆ. ವೀರಶೈವ ಧರ್ಮದ ಅನುಯಾಯಿಗಳಾದ ಕಾಕತೀಯ ಅರಸರ ಕಾಲಕ್ಕೆ ಪುರುವಂತಿಕೆ ಪ್ರಾಮುಖ್ಯತೆಯನ್ನು ಪಡೆದಿತ್ತು. ಪೌರಾಣಿಕ ಕಥೆಯಲ್ಲಿ ದಕ್ಷರಾಜ ಹೋಮ ಮಾಡುವಾಗ ತನ್ನ ಎಲ್ಲ ಬಂಧು-ಬಳಗದವರನ್ನೆಲ್ಲ ಕರೆದು ಪಾರ್ವತಿ ದೇವಿಯನ್ನು ಬೇಕೆಂತಲೇ ಕರೆದಿರುವುದಿಲ್ಲ. ಪಾರ್ವತಿ ದೇವಿ ತನ್ನ ತಂದೆ ಹೀಗೆ ಮಾಡುವವರಲ್ಲ. ಎಲ್ಲೋ ಮರೆತಿರಬಹುದು ಎಂದು ತಿಳಿದು ತಂದೆಯ ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಶಿವನ ಅನುಮತಿ ಬೇಡಿದಾಗ ಶಿವನು, ನಿಮ್ಮ ತಂದೆ ಉದ್ದೇಶಪೂರ್ವಕವಾಗಿ ಹೀಗೆ ಮಾಡಿದ್ದಾನೆ. ನೀನು ಅಲ್ಲಿಗೆ ಹೋದರೆ ನಿನಗೆ ಅವಮಾನವಾಗುವುದಂತೂ ಖಚಿತ ಎಂದಾಗ ಪಾರ್ವತಿ ಕೇಳದೆ, ತನ್ನ ತಂದೆ

ಹಾಗೇ ಮಾಡುವವರಲ್ಲ ಎಂದು ಹಠದಿಂದ ಶಿವನ ಒಪ್ಪಿಗೆ ಪಡೆದು ತಂದೆಯ ಮನೆಗೆ ಹೋಗುತ್ತಾಳೆ, ದಕ್ಷರಾಜನು ಪಾರ್ವತಿಯನ್ನು ಅವಮಾನಿಸುತ್ತಾನೆ. ಆಗ ಪಾರ್ವತಿಯು ಗಂಡನ ಮಾತು ಕೇಳದೆ ಇಲ್ಲಿಗೆ ಬಂದೆ. ಈ ಅವಮಾನದ ಮುಖ ಹೊತ್ತುಕೊಂಡು ಪುನಃ ಗಂಡನಲ್ಲಿಗೆ ಹೇಗೆ ಹೋಗಲಿ ಎಂದು ಅದೇ ಯಜ್ಞಕುಂಡದಲ್ಲಿ ಹಾರಿ ಪ್ರಾಣತ್ಯಾಗ ಮಾಡುತ್ತಾಳೆ. ಈ ವಿಷಯ ಅರಿತ ಶಿವ ಕ್ರೋಧಭರಿತನಾಗಿ ತನ್ನ ಹಣೆಯ ಬೆವರಿನಿಂದ ವೀರಭದ್ರನನ್ನ ಸೃಷ್ಟಿಸಿ ದಕ್ಷನ ಸಂಹಾರಕ್ಕೆ ಕಳಿಸುತ್ತಾನೆ. ಶಿವನ ಸಿಟ್ಟಿನಿಂದ ಹುಟ್ಟಿದ ವೀರಭದ್ರನ ಅವತಾರವು ಭಯಂಕರವಾಗಿದ್ದು, ದಕ್ಷರಾಜನನ್ನು ಸಂಹರಿಸಿದ ನಂತರ ವೀರಭದ್ರ ಶಾಂತನಾಗುತ್ತಾನೆ. ಈ ಕಥೆಯಲ್ಲಿನ ವೀರಭದ್ರನ ಕ್ರೋಧದ ಕುಣಿತವೇ ಪುರುವಂತಿಕೆಯಾಗಿದ್ದು, ವೀರನಾಟ್ಯದ ರೂಪ ಪಡೆದುಕೊಂಡಿದೆ. ಮುಂದೆ ಇದು ಯುದ್ಧದಲ್ಲಿ ಹೋರಾಡಿ ಮಡಿದ ವೀರರ ನೆನಪಿಗಾಗಿ ಅವರ ವೀರಗಲ್ಲುಗಳ ಮುಂದೆ ಈ ತರಹದ ವೀರ ನೃತ್ಯಗಳನ್ನು ಮಾಡುವ ರೂಢಿ ಪ್ರಚಲಿತಕ್ಕೆ ಬಂದಿತು. ಕರ್ನಾಟಕದ ಗಡಿಗ್ರಾಮಗಳಾದ ಚಾಂಗಲೇರ, ಕೋಲಕುಂದಾ, ರಾಚೋಟಿ ಮತ್ತು ಆಂಧ್ರ ಗಡಿಗ್ರಾಮಗಳಾದ ಕಾರೆಂಪುಡಿ, ಗುರುಜಾಲ, ಮಾಚರ್ಲ, ಕಾನಾಗಡ್ಡಿಗಳ ವೀರಭದ್ರ ದೇವರಗುಡಿಗಳಲ್ಲಿ ಈ ನೃತ್ಯ ವಿಧಾನವು ಬಹಳ ಪ್ರಚಲಿತದಲ್ಲಿದೆ. ಈ ನೃತ್ಯದಲ್ಲಿ ಪಾಲ್ಗೊಳ್ಳುವವರು ಒಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯಲ್ಲಿ ಗುರಾಣಿಯನ್ನು ಹಿಡಿದು ನೃತ್ಯಗಾರನು ವೀರಾಭಿನಯ ಮಾಡುತ್ತಾ ವೀರಣಂ ಅಥವಾ ವೀರಂಗಂ ಎನ್ನುವ ಒಂದು ಭೀಕರ ಶಬ್ದಭೇರಿಯ ನಾದಕ್ಕೆ ತಕ್ಕಂತೆ ಹೆಜ್ಜೆಯಿಡುತ್ತಾ ಕುಣಿಯುತ್ತಿರುತ್ತಾನೆ. ಕುಣಿಯುವಾಗ ಇವರು ಹ...ಹ...ಹ... ವೀರಭದ್ರ, ನನ್ನ ಈ ಆವೇಶಕ್ಕೆ ಕಾರಣರಾರು ಹ...ಹ...ಹ... ಎಂಬ ಕೆಲವು ಪದ್ಯಗಳನ್ನು ಹಾಡುಗಳನ್ನು ಹಾಡುತ್ತಿರುತ್ತಾರೆ. ಈ ವೀರನೃತ್ಯ ಮಾಡುವವರನ್ನು ಪುರುವಂತಿಕೆಯವರು ಎನ್ನುತ್ತಾರೆ. ಈ ವೀರನೃತ್ಯ ತಾಂಡವ ವರ್ಗಕ್ಕೆ ಸೇರುತ್ತದೆ. ಇವುಗಳಲ್ಲಿ ಊರ್ಧ್ವ ತಾಂಡವ ಎಂಬುದು ವಿಶಿಷ್ಟವಾದದ್ದು. ಇದನ್ನು ವೀರಭದ್ರ ದೇವರ ಉತ್ಸವ; ಮಹಾಶಿವರಾತ್ರಿಯ ಲಿಂಗೋದ್ಭವದ ನಡುರಾತ್ರಿ ಮತ್ತು ವೀರಶೈವರ ಮದುವೆಯ ದಿನಗಳಂದು ಈ ನೃತ್ಯ ಭಕ್ತಿಪೂರ್ವಕವಾಗಿ ಮಾಡಲಾಗುತ್ತದೆ.

ಮೋಟನಳ್ಳಿ ಹಸನ ಸಾಹೇಬನು ಇಟಗಾ ವೀರಭದ್ರನನ್ನೇ ತನ್ನ ಆರಾಧ್ಯ ದೈವವನ್ನಾಗಿಸಿಕೊಂಡು ತನ್ನ ಅಂಕಿತವನ್ನು 'ಇಟಪುರೀಶ' ಎಂದು ತತ್ವಪದಗಳಲ್ಲಿ ಬಳಸಿದ್ದಾನೆ. ಈ ವೀರಭದ್ರ ದೇವರ ಪುರುವಂತಿಕೆ ಯನ್ನು ಹಸನಸಾಬ ಈ ರೀತಿ ತನ್ನ ತತ್ವಪದದಲ್ಲಿ ಹಿಡಿದಿಟ್ಟಿದ್ದಾನೆ.

"ಆಡೋ ಗುಗ್ಗಳ ಅಡಿಗಡಿಗಾಡಿಸೋ ಗುಗ್ಗಳ
ಆಡಿಯಾಡಿ ಉಗ್ಗಡಿಸೋ ಗುಗ್ಗಳ
ಪುರುವಂತರ ಕೈಯ ಶಸ್ತ್ರ ಕಸಿದುಕೊಂಡ
ಈಡ ಪಿಂಗಳವೆಂಬ ಜೋಡಿನ ಗೆಳೆಯರು

ಕೂಡಿಕೊಂಡು ನಡೆದಾಡಿ ಬೆಳಗಿನೊಳು
ಆರು ಸ್ಥಲಗಳ ಹಿಡಿದು ಆರು ಅಕ್ಷರ ನುಡಿದು
ಭಾರಿ ನಗಾರಿ ನೌಬತ್ತು ಬಾಬಿಯಿಂದ
ಕೇರಿ ಕೇರಿ ಖತ್ ಖಲಲಲವೆನಿಸುತ

ಎಚ್ಚರದಲಿ ನೋಡು ಒಳಂಬರ ಬಿಚ್ಚಿ ಬಯಲ ಮಾಡು
ಪಶ್ಚಿಮ ಪೀಠದಿ ನಿಶ್ಚಯ ಪಥವಿದು
ಆಶ್ಚರ್ಯ ಮಾಡದೆ ತೋಂರೆಟಿ ಧಿಮಿಯೆಂದು
ಸಟಿಯಾಗದ ಒಂದು ಘಟಿಸಿತು ಉನ್ಮನಿಯ ಸಂದು
ಇಟಪುರೀಶನ ಹಿತದಿಂದೆ ಭಜಿಸು
ಪುಟಿದು ಪುಟಿದು ಬಹುಪರಾಕ ಪಾರಾಕೆಂದು"[3]

ಈ ಗಡಿಭಾಗದಲ್ಲಿನ ಧಾರ್ಮಿಕ ತಾಣಗಳಾದ ಯಾಕಾಂಬರಿ, ಯಾನಾಗುಂದಿ, ಗುರುಮಠಕಲ್ಲ, ಮೈಲಾರಲಿಂಗ, ಕಸ್ತೂರಪಲ್ಲಿಯ ಲುಂಕೆಬಸವಣ್ಣ ಮುಂತಾದವುಗಳಿಂದ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ಒಂದು ಸೌಹಾರ್ದತೆ ಬೆಳೆದಿದೆ. ಇಂತಹ ಧಾರ್ಮಿಕ ತಾಣಗಳು ಕೇವಲ ಧಾರ್ಮಿಕ ಕೆಲಸ ಮಾಡದೆ ಗಡಿಸಮಸ್ಯೆಗಳು, ಭಾಷಾ ಸಮಸ್ಯೆ ಮತ್ತು ಮತೀಯ ಸಮಸ್ಯೆಗಳು ಇಲ್ಲಿ ಉಂಟಾಗದಂತೆ ನೋಡಿಕೊಳ್ಳುತ್ತವೆ. ಮತ್ತು ಅವುಗಳಿಗೆ ಪರಿಹಾರಗಳನ್ನು ಸೂಚಿಸುತ್ತವೆ. ಎರಡು ಭಾಗದ ಜನರು ಒಂದೇ ದೇವರಿಗೆ ನಡೆದು ಕೊಳ್ಳುತ್ತಾರೆಂದರೆ, ಆ ದೇವರಿರುವ ಧಾರ್ಮಿಕ ತಾಣಗಳಿಗೆ ಜಾತ್ರೆ, ಉತ್ಸವಗಳಿಗೆ ಬಂದು ಹೋಗುತ್ತಾರೆ. ಹೀಗೆ ಬಂದು ಹೋಗುವ ಜನರು ಮೇಲಿಂದ ಮೇಲೆ ಭೇಟಿಯಾಗುತ್ತಾರೆ. ಇಲ್ಲಿ ನಡೆಯುವ ಆಚರಣೆಗಳು ಸಾಮಾನ್ಯವಾಗಿ ಒಂದೇ ಊರಿನ ಜನರ ಆಚರಣೆಯಾಗಿರುವುದಿಲ್ಲ. ತನ್ನ ಸುತ್ತಮುತ್ತಲಿನ ಎಲ್ಲಾ ಹಳ್ಳಿ ಗಳನ್ನು ಒಳಗೊಂಡಿರುವುದನ್ನು ಕಾಣಬಹುದು. ಒಂದು ಊರಿನಿಂದ ಪಲ್ಲಕ್ಕಿ ಬಂದರೆ ಇನ್ನೊಂದು ಊರಿನಿಂದ ಕಳಸ, ನಂದಿಕೋಲು ಬರುತ್ತದೆ. ಈ ರೀತಿಯ ವಾಡಿಕೆ ತಲಾತಲಾಂತರದಿಂದ ಬಂದಿರುತ್ತದೆ. ತಮಗೆ ದಕ್ಕಿದ ಈ ರೀತಿಯ ಹಕ್ಕನ್ನು ಪಡೆದವರು ನನ್ನ ಭಾಷೆ, ನನ್ನ ಗಡಿ ಬೇರೆ ಎಂಬ ಮನೋಭಾವವನ್ನು ಇವರೆಂದು ತಾಳುವುದಿಲ್ಲ. ಈ ರೀತಿ ವಿಂಗಡಣಾ ಮನೋಭಾವವು ಇಲ್ಲಿ ಉದ್ಭವಾಗುವುದಿಲ್ಲ. ಏಕೆಂದರೆ ಈ ಗಡಿಯಲ್ಲಿನ ಜನರು ಹೋಗದೆ ಆ ಗಡಿಯಲ್ಲಿನ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವುದೇ ಇಲ್ಲ. ಯಾಕಾಂಬರಿಯ ಶ್ರೀ ಕ್ಷೇಮಲಿಂಗೇಶ್ವರ ದೇವಸ್ಥಾನ ಇಂದು ಆಂಧ್ರಪ್ರದೇಶಕ್ಕೆ ಸೇರಿದ ಧಾರ್ಮಿಕ ತಾಣವಾಗಿದೆ. ಇಲ್ಲಿನ ಜಾತ್ರೆಯ ಸಂದರ್ಭದಲ್ಲಿ ಕರ್ನಾಟಕದ ಆಡಕಿ ಗ್ರಾಮದಿಂದ ಪಲ್ಲಕ್ಕಿ ಹೋಗುತ್ತದೆ. ಇದು ಹೋದ ನಂತರವೇ ಜಾತ್ರೆಯ ಕಾರ್ಯಕ್ರಮ ನಡೆಯುವುದು. ಹಾಗೆಯೇ ಕರ್ನಾಟಕದಿಂದ ಬಂದ ಈ ಪಲ್ಲಕ್ಕಿಯನ್ನು ಆಂಧ್ರದ ಟ್ರಸ್ಟಿಗಳು ಗೌರವಾಧಾರಗಳಿಂದ ಬರಮಾಡಿಕೊಳ್ಳುತ್ತಾರೆ. ಹೀಗೆ ಎರಡು ಗಡಿಭಾಗದ ಜನರು ಸೇರಿಯೇ ಸಾಂಸ್ಕೃತಿಕ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ.

ಕೇವಲ ಜಾತ್ರೆ, ಉತ್ಸವದ ಸಂದರ್ಭಕ್ಕೆ ಈ ರೀತಿಯ ಚಟುವಟಿಕೆಗಳು ನಡೆಯದೆ ದೇವಸ್ಥಾನ, ಧಾರ್ಮಿಕ ತಾಣದ ಜೀರ್ಣೋದ್ಧಾರದ ಸಂದರ್ಭದಲ್ಲಿ ಪಟ್ಟಿ(ಹಣ ಸಂಗ್ರಹಣೆ)ಯನ್ನು ಎರಡು ಕಡೆಗಳಿಂದ ಸಂಗ್ರಹಿಸಲಾಗುತ್ತದೆ. ಕರ್ನಾಟಕದ ಗಡಿ ಧಾರ್ಮಿಕ ತಾಣಕ್ಕೆ ಸಂಬಂಧಪಟ್ಟವರು ಪಕ್ಕದ ಆಂಧ್ರದ ಗಡಿಹಳ್ಳಿಗಳಿಗೆ ಹೋದರೆ ಅವರೂ ಪಟ್ಟಿ ಕೊಡುತ್ತಾರೆ. ಅಂತಲೇ ಅಲ್ಲಿನವರು ಇಲ್ಲಿನ ಗಡಿಹಳ್ಳಿಗೆ ಬಂದರೆ ಇಲ್ಲಿನವರು ಪಟ್ಟಿ ಕೊಡುತ್ತಾರೆ. ಒಟ್ಟಾರೆ ಧಾರ್ಮಿಕ ತಾಣದ, ದೇವಸ್ಥಾನ ಸಂದರ್ಭಕ್ಕೆ ಅನುಗುಣವಾಗಿ ಇಲ್ಲಿಯವರೆಗೂ ಎರಡು ಗಡಿಗ್ರಾಮಗಳ ಜನರು ಸೌಹಾರ್ದತೆಯನ್ನು ಬೆಳೆಸಿಕೊಂಡಿದ್ದಾರೆ.

ಇಲ್ಲಿ ಆಗಿಹೋದ ತತ್ವಪದಕಾರರನ್ನು ಇಲ್ಲಿನ ಜನರು ದೈವತ್ವಕ್ಕೇರಿಸಿ ಅವರ ಗುಡಿಗಳನ್ನು ಕಟ್ಟಿ, ಅವರ ಆರಾಧನೆಯನ್ನು ಮಾಡುತ್ತಿದ್ದಾರೆ. ಈ ಗಡಿಗಳಲ್ಲಿ ಆಗಿ ಹೋದ ತತ್ವಪದಕಾರರು ಕರ್ನಾಟಕಕ್ಕೆ ಸೇರಿದವರು, ಆಂಧ್ರಕ್ಕೆ ಸೇರಿದವರು ಎಂಬ ಭಾವನೆ ಇಲ್ಲಿಯ ಜನರಲ್ಲಿ ಕಂಡುಬರುವುದಿಲ್ಲ. ಕರ್ನಾಟಕದ ಗಡಿಯಲ್ಲಿ ಅನೇಕ ತತ್ವಪದಕಾರರ ಗುಡಿಗಳಿರುವಂತೆ, ಆಂಧ್ರದ ಗಡಿಗಳಲ್ಲಿಯೂ ಇವರ ಗುಡಿಗಳು ಕಂಡುಬರುವುದರ ಜೊತೆಗೆ ಈ ಎಲ್ಲ ತತ್ವಪದಕಾರರ ಅನುಯಾಯಿಗಳು ತಮ್ಮ ಆರಾಧ್ಯ ದೈವದ ಬಗೆಗಿನ ದೈವತ್ವವನ್ನು ಸೌಹಾರ್ದತೆಯಲ್ಲಿ ತೋರ್ಪಡಿಸುತ್ತಾರೆ.

ಧಾರ್ಮಿಕ ತಾಣಗಳಂತೆ ಕರ್ನಾಟಕ-ಆಂಧ್ರ ಗಡಿಗ್ರಾಮಗಳಲ್ಲಿನ ಆಚರಣೆಗಳು ಎರಡೂ ಕಡೆಯ ಜನರಲ್ಲಿ ಒಂದು ಗಟ್ಟಿ ಸಂಬಂಧವನ್ನು ಬೆಳೆಸಿವೆ. ಈ ಭಾಗದಲ್ಲಿನ ವೀರಭದ್ರ ದೇವರ ಆರಾಧಕರು ವೀರಭದ್ರ ದೇವರ ಉತ್ಸವ, ಆಚರಣೆಯಂದು 'ಪುರುವಂತಿಕೆ' ಎಂಬ ವೀರಕುಣಿತವನ್ನು ಪ್ರದರ್ಶಿಸುತ್ತಾರೆ. ಈ 'ಪುರುವಂತಿಕೆ' ಎರಡು ಕಡೆಗಳಲ್ಲಿ ಇರುವಂತಹದು. ನಮ್ಮ ಗಡಿಯಲ್ಲಿ ಈ 'ಪುರುವಂತಿಕೆ'ಯ ಒಡಪುಗಳನ್ನು ಕನ್ನಡದಲ್ಲಿ ಹೇಳುವುದೇನೋ ಸಹಜ. ಆದರೆ ಆಂಧ್ರದ ಗಡಿಗ್ರಾಮಗಳಲ್ಲಿ ವೀರಭದ್ರ ದೇವರ ಪುರುವಂತಿಕೆಯ ಒಡಪುಗಳನ್ನು ಕನ್ನಡದಲ್ಲಿ ಬಳಸಲಾಗುತ್ತದೆ. ಏಕೆಂದರೆ ಆಂಧ್ರದ ಗಡಿಗ್ರಾಮಗಳಲ್ಲಿನ ಈ ಒಡಪುಗಳನ್ನು ಹೇಳುವವರು ಕನ್ನಡದಲ್ಲಿನ ಒಡಪುಗಳನ್ನೇ ಕಲಿತಿರುತ್ತಾರೆ. ಇಲ್ಲಿ ಬಳಸುವ ಕನ್ನಡದ ಒಡಪುಗಳಿಂದ ತೆಲುಗರಿಗೆ ಕನ್ನಡ ಸವಿ ಉಣಿಸಿದಂತಾಗುತ್ತದೆ.

ಹೀಗೆ ಒಟ್ಟಾರೆಯಾಗಿ ಧಾರ್ಮಿಕ ತಾಣಗಳು ಮತ್ತು ಸಾಂಸ್ಕೃತಿಕ ಆಚರಣೆಗಳ ಸಾಮರಸ್ಯಗಳೇ ಕರ್ನಾಟಕ-ಆಂಧ್ರದ ಗಡಿಗ್ರಾಮಗಳಲ್ಲಿ ಸೌಹಾರ್ದತೆಗೆ ಕಾರಣವಾಗಿವೆ. ಈ ಸೌಹಾರ್ದತೆ ಇಲ್ಲದೇ ಹೋಗಿದ್ದರೆ ಗಡಿಯಲ್ಲಿನ ಧಾರ್ಮಿಕ ತಾಣಗಳು ಇಂದು ದುಃಸ್ಥಿತಿಯಲ್ಲಿ ಕಂಡುಬರುತ್ತಿರಲಿಲ್ಲ. ಇಂತಹ ಗಡಿಯಲ್ಲಿನ ಧಾರ್ಮಿಕ ತಾಣಗಳು ಮತ್ತು ಅಲ್ಲಿನ ಸಾಂಸ್ಕೃತಿಕ ಸಾಮರಸ್ಯ ಇಂದು ಎಲ್ಲ ಕಡೆ ಅವಶ್ಯವಿರುತ್ತದೆ.

**ಗಡಿಗ್ರಾಮಗಳಲ್ಲಿನ ಪ್ರಮುಖ ಜಾತ್ರೆ/ಉರುಸುಗಳು ನಡೆಯುವ ಸ್ಥಳಗಳು**

**ಕೋಷ್ಟಕ-೧**

| ದೇವರ/ಸಂತರ ಹೆಸರು | ಜಾತ್ರೆ/ಉರುಸು ನಡೆಯುವ ಸ್ಥಳ | ಜಾತ್ರೆಗೆ ಸೇರುವ ಅಂದಾಜು ಜನಸಂಖ್ಯೆ |
|---|---|---|
| ೧. ಹಾರಕೂಡ ಚೆನ್ನಬಸವೇಶ್ವರ | ಚಿಂಚೋಳಿ | ೧೦ ಸಾವಿರ |
| ೨. ಲೋಕೇಶ್ವರ | ಹಂದರಕಿ | ೬ ಸಾವಿರ |
| ೩. ಶ್ರೀರಾಮದೇವರು | ಯಾನಗುಂದಿ | ೮ ಸಾವಿರ |
| ೪. ಬಲಭೀಮಸೇನ | ಮೋತಕಪಲ್ಲಿ | ೧೫ ಸಾವಿರ |
| ೫. ಮೌಲಾಲಿ ದರ್ಗಾ | ಯಾನಾಗುಂದಿ | ೬ ಸಾವಿರ |

| | | |
|---|---|---|
| ೬. ಸಂಗಮೇಶ್ವರ | ಕುರಕುಂಟಾ | ೫ ಸಾವಿರ |
| ೭. ಕೊತ್ತಲ ಬಸವೇಶ್ವರ | ಸೇಡಂ | ೨೦ ಸಾವಿರ |
| ೮. ವೀರಭದ್ರೇಶ್ವರ | ಕೋಲಕುಂದಾ | ೮ ಸಾವಿರ |
| ೯. ರಾಮಸ್ವಾಮಿ | ಮುಧೋಳ | ೬-೮ ಸಾವಿರ |
| ೧೦. ವೆಂಕಟೇಶ್ವರ | ಆಡಕಿ | ೫-೬ ಸಾವಿರ |
| ೧೧. ಗೋಪಾಲಸ್ವಾಮಿ | ಮುಧೋಳ | ೫ ಸಾವಿರ |
| ೧೨. ಶಂಕರಲಿಂಗೇಶ್ವರ | ಇಡ್ಲೂರು | ೧೦ ಸಾವಿರ |
| ೧೩. ಮೈಲಾರಲಿಂಗೇಶ್ವರ | ಮೈಲಾಪುರ | ೪ ಲಕ್ಷ |
| ೧೪. ರಾಚಪ್ಪಯ್ಯ, ಕಡ್ಲಪ್ಪಯ್ಯ | ಗಾಜರಕೋಟ | ೧೨ ಸಾವಿರ |
| ೧೫. ಬಸವಲಿಂಗಪ್ಪ | ಕೂಡಲೂರು | ೧೫ ಸಾವಿರ |
| ೧೬. ಮಾರಮ್ಮ | ಬಳಿಚಕ್ರ | ೧೫ ಸಾವಿರ (೩ ವರ್ಷಕ್ಕೊಮ್ಮೆ) |
| ೧೭. ವೆಂಕಟರಮಣ | ಅಲ್ಲಾಪುರ ತಾಂಡಾ | ೧೦ ಸಾವಿರ |

ಆಧಾರ : ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ.

ಹೀಗೆ ಈ ಸ್ಥಳಗಳಲ್ಲಿ ನಡೆಯುವ ಜಾತ್ರೆ/ಉರುಸುಗಳಲ್ಲಿ ಈ ಪ್ರದೇಶದ ಗಡಿಗೆ ಹೊಂದಿಕೊಂಡಿರುವ ಜನರು ಸೇರುತ್ತ ಸೌಹಾರ್ದತೆಯನ್ನು ಬೆಳೆಸಿಕೊಂಡಿದ್ದಾರೆ.

### ೩.೩. ಜನಪದ ಸಾಹಿತ್ಯ

ಚರಿತ್ರೆಯನ್ನು ಕಟ್ಟುವುದು ಎಂದರೆ ಕಾಲಾನುಕ್ರಮಗಳ ಘಟನೆಗಳನ್ನು ದಾಖಲಿಸುವುದು. ಅದು ಭೌಗೋಳಿಕ ನೆಲೆಯ ಚರಿತ್ರೆಯಾಗಿರಬಹುದು. ರಾಷ್ಟ್ರೀಯ ಚರಿತ್ರೆಯಾಗಿರಬಹುದು, ಜನಾಂಗೀಯ ಚರಿತ್ರೆಯಾಗಿರಬಹುದು. ಕಲೆಯ, ಭಾಷೆಯ, ಸಾಹಿತ್ಯದ ಇಲ್ಲವೆ ಜನಪದರ ಚರಿತ್ರೆಯಾಗಿರಬಹುದು. ಒಟ್ಟಾರೆಯಾಗಿ ಚರಿತ್ರೆಯನ್ನು ತಳಮಟ್ಟದಿಂದ ಆಳವಾಗಿ ಕಟ್ಟಿದಾಗಲೇ ಅದು ನಿಜವಾದ ಚರಿತ್ರೆಯಾಗುತ್ತದೆ. ಇದರಂತೆಯೇ ಜನಪದ ಸಾಹಿತ್ಯ ಚರಿತ್ರೆಯನ್ನು ತಳಮಟ್ಟದಿಂದ, ಆಳವಾಗಿ ಕಟ್ಟಿದಾಗಲೇ ಅದಕ್ಕೊಂದು ನಿಜವಾದ ಅರ್ಥ ಬರುತ್ತದೆ. ಜನಪದ ಸಾಹಿತ್ಯ ಎಲ್ಲ ಶಿಷ್ಟ ಸಾಹಿತ್ಯದ ಮೇಲೆ ಪ್ರಭಾವ ಬೀರಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಬಹುಶಃ ಜಗತ್ತಿನ ಎಲ್ಲ ಪಳಗಿದ ಶಿಷ್ಟಭಾಷೆಗಳಲ್ಲಿರುವಂತೆ ಕನ್ನಡ ಶಿಷ್ಟ ಭಾಷೆಯಲ್ಲಿಯೂ ಜನಪದ ಸಾಹಿತ್ಯ ತನ್ನ ಪಡಿಯಚ್ಚನ್ನು ಉಳಿಸಿಕೊಂಡು ಬಂದಿದೆ. ಕ್ರಿ.ಶ. ೨ನೇ ಶತಮಾನದ ಪ್ರಸಿದ್ಧ ತಮಿಳು ಕೃತಿ 'ಶಿಲಪ್ಪದಿಗಾರಂ' ಕೃತಿಯಲ್ಲಿ ವರ್ಣಿಸಲಾದ ನೀಲಗಿರಿಯ ಕನ್ನಡತಿಯರ

'ಕುಣಿತದ ಹಾಡು', ಕ್ರಿ.ಶ. ೭ನೆಯ ಶತಮಾನದಲ್ಲಿ ಚಿತ್ತಾಣ-ಬೆದಂಡೆಗಳಲ್ಲಿನ ಕನ್ನಡ ಛಂದೋರೂಪಗಳು, ಕಪ್ಪೆಅರೆಭಟ್ಟನ ಶಾಸನಗಳಲ್ಲಿನ ತ್ರಿಪದಿಗಳು ಜನಪದ ಸಾಹಿತ್ಯದ ಹಳಮೆಗೆ ಉದಾಹರಣೆಗಳಾಗಬಹುದು.

ಜನಪದ ಸಾಹಿತ್ಯ ಚರಿತ್ರೆ ಕಟ್ಟುವುದು ಸುಲಭ ಸಾಧ್ಯವಿಲ್ಲದಿದ್ದರೂ ಅದರ ಬಹುದೀರ್ಘ ಹಳಮೆ, ತರತರಹದ ರೂಪ, ಹಲವಾರು ಬಗೆಯ ರೀತಿಗಳನ್ನು ಇಡಿಯಾಗಿ ಅಧ್ಯಯನದ ದೃಷ್ಟಿಯಿಂದ, ಪ್ರಾದೇಶಿಕತೆಯ ನೆಲೆಯಲ್ಲಿ ವಿಭಾಗಿಸುವುದು ಇಂದು ಮುಖ್ಯವಾಗುತ್ತದೆ. ಜನಪದ ಸಾಹಿತ್ಯದ ಸ್ವರೂಪ, ಕಾಲ ಮತ್ತು ಅದರ ವೈಶಿಷ್ಟ್ಯಗಳ ಬಗ್ಗೆ ಇರುವ ಮೂಲಭೂತ ಆಕರಗಳನ್ನು ಮತ್ತೆ ಮತ್ತೆ ಕೆದಕುವುದು ಅನಿವಾರ್ಯವಾಗುತ್ತದೆ. ಇಲ್ಲಿ ಪ್ರಾದೇಶಿಕವಾಗಿ ವಿಭಾಗಿಸುವುದು ಎಂದರೆ ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶವನ್ನು ವ್ಯಾಪ್ತಿಯಾಗಿರಿಸಿಕೊಂಡು ಆ ಪರಿಸರದಲ್ಲಿನ ಮೌಖಿಕ ಆಕರಗಳನ್ನೆಲ್ಲ ಒಂದುಗೂಡಿಸಿ ಅವುಗಳನ್ನು ವಿಭಾಗಿಸಿ ವಿಶ್ಲೇಷಿಸುವುದಾಗಿದೆ. ಹೀಗೆ ಪ್ರಾದೇಶಿಕವಾಗಿ ನೋಡಿದಾಗ ಅದರ ವಿಸ್ತಾರ ಇನ್ನು ಹೆಚ್ಚಾಗುತ್ತದೆ. ಪ್ರಾದೇಶಿಕತೆಯಲ್ಲಿ ಸಮುದಾಯಗಳು ಕೆಳಮಟ್ಟದಿಂದ ತಮ್ಮ ಇರುವನ್ನು ತಮ್ಮ ಅಸ್ಮಿತೆಯನ್ನು, ತಮ್ಮ ಸ್ಥಿತಿವಂತಿಕೆಯನ್ನು ಹೊರಹಾಕಿರುತ್ತವೆ. ಹಾಗಾಗಿ ಅಲ್ಲೊಂದು ವಿಶಿಷ್ಟ ಸಂಸ್ಕೃತಿಯೊಂದು ಉಳಿದುಕೊಂಡು ಬಂದಿರುತ್ತದೆ.

ಜನಪದ ಸಾಹಿತ್ಯವನ್ನು ಭಾಷೆಯ ದೃಷ್ಟಿಯಿಂದ ಪ್ರಾದೇಶಿಕವಾಗಿ, ಅದರಲ್ಲೂ ಗಡಿಭಾಗದ ಭಾಷೆಯನ್ನು ನೋಡಿದಾಗ ಅಲ್ಲಿ ಎರಡು, ಮೂರು ಭಾಷೆಗಳು ಕೂಡಿ ಹೊಸದೊಂದು ಮಿಶ್ರಭಾಷೆ ಹುಟ್ಟಿ, ಆ ಮಿಶ್ರಭಾಷೆಯಲ್ಲಿಯೆ ಜನಪದ ಸಾಹಿತ್ಯ ಹುಟ್ಟು ಪಡೆದುಕೊಳ್ಳುತ್ತದೆ. ಜಾನಪದದ ಪ್ರಕಾರಗಳು ಎಲ್ಲ ಕಡೆ ಒಂದೇ ಆಗಿದ್ದರೂ ಅದರಲ್ಲಿಯೇ ಭಿನ್ನತೆಯನ್ನು ಅವು ಹೊಂದಿರುತ್ತವೆ. ಹಳೆ ಮೈಸೂರಿನ ಕಡೆ ವೀರಗಾಸೆ ಎಂದು ಕರೆಯಲ್ಪಡುವ ಜಾನಪದ ಕುಣಿತ ಗುಲಬರ್ಗಾ ಭಾಗದಲ್ಲಿ 'ಪುರುವಂತಿಕೆ' ಎಂದು ಕರೆಯಲಾಗುತ್ತದೆ. ಈ ವೀರಗಾಸೆ ಮತ್ತು ಪುರುವಂತಿಕೆ ಹೆಚ್ಚು ಕಡಿಮೆ ಒಂದೇ ಆಗಿದ್ದು ವೇಷಭೂಷಣ, ಆಚರಣಾ ಪದ್ಧತಿ ಎಲ್ಲ ಒಂದೇ ಆಗಿದ್ದು, ಎಲ್ಲೋ ಕೆಲವೊಂದು ಅಂಶಗಳು ಬೇರೆ ಯಾದರೂ ಹೆಚ್ಚಿನ ಅಂಶಗಳೆಲ್ಲ ಒಂದಕ್ಕೊಂದು ತುಂಬ ಹತ್ತಿರವಾಗಿವೆ. ಈ ಒಂದು ಪ್ರಕಾರವನ್ನೇ ನಾವು ಪ್ರಾದೇಶಿಕವಾಗಿ, ಆಳವಾಗಿ ಅಧ್ಯಯನಕ್ಕೆ ಒಳಪಡಿಸಿದಾಗ ಅವೆರಡು ಬೇರೆ ಬೇರೆಯಾಗಿಯೇ ನಿಲ್ಲುತ್ತವೆ.

ಕರ್ನಾಟಕ-ಆಂಧ್ರ ಗಡಿಭಾಗದಲ್ಲಿರುವ ಕನ್ನಡಿಗರ ಜನಪದ ಸಾಹಿತ್ಯ ವಿಶಿಷ್ಟವಾಗಿರುವುದಲ್ಲದೇ ಅದು ಒಂದು ಬಗೆಯ ಶಿಷ್ಟ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿರುವುದು ಅಲ್ಲಲ್ಲಿ ಕಂಡುಬರುತ್ತದೆ. ಇಲ್ಲಿನ ಜನಪದ ಸಾಹಿತ್ಯ ಬೇರೆ ಭಾಗಗಳಿಗಿಂತ ಭಿನ್ನ ಭಿನ್ನವಾದ ವಿಶಿಷ್ಟ ರೂಪ ತಳೆದಿದೆ. ಜನಪದರು ಹಾಡುವ ಹಾಡುಗಳನ್ನು ಭಾಷೆಯ ದೃಷ್ಟಿಯಿಂದ ನೋಡಿದಾಗ ಅವೆಲ್ಲ ಮೇಲ್ನೋಟಕ್ಕೆ ತೆಲುಗು ಭಾಷೆಯನ್ನು ಅಳವಡಿಸಿಕೊಂಡಿವೆ ಎಂದರೂ, ಅವೆಲ್ಲ ಮೂಲದಲ್ಲಿ ಕನ್ನಡದವೆಂದು ನಿಖರವಾಗಿ ಹೇಳಬಹುದು. ಕನ್ನಡದಲ್ಲಿ ರಚನೆಗೊಳಪಟ್ಟಿದ್ದರೂ ಅಲ್ಲಲ್ಲಿ ಕನ್ನಡದ ಜೊತೆಜೊತೆಗೆ ತೆಲುಗು ಪದಗಳು ಮಧ್ಯೆ ಮಧ್ಯೆ ಬೆರಕೆಗೊಂಡಿವೆ. ಇಲ್ಲಿನ ಜನಪದರು ಹಾಡುಗಳನ್ನು ಹಾಡುವಾಗ ಕನ್ನಡ ಮತ್ತು ತೆಲುಗು ಪದಗಳನ್ನು ಬಿಡಿಸಿ ಬೇರೆ ಬೇರೆಯಾಗಿ ಹಾಡುವುದಿಲ್ಲ. ಬಹಳ ಸರಳ ಸ್ವಾಭಾವಿಕವಾಗಿಯೇ ಈ ರೀತಿಯಾಗಿ ಎರಡು ಭಾಷೆಗಳನ್ನು ಬಳಸುವುದು ಕನ್ನಡ ಮತ್ತು ತೆಲುಗು ದ್ವಿಭಾಷಿಕ ಪರಿಸರದ ಪ್ರಭಾವದಿಂದ.

ಜನಪದ ಸಾಹಿತ್ಯ ಪ್ರಕಾರಗಳು ಬೇರೆ ಬೇರೆ ಪರಿಸರ, ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಬೆಳೆದುಕೊಂಡು ಬಂದಿವೆ. ಒಟ್ಟಾರೆಯಾಗಿ ಕರ್ನಾಟಕ-ಆಂಧ್ರ ಗಡಿಭಾಗದ ಜನಪದ ಸಾಹಿತ್ಯ ಪ್ರಕಾರಗಳ ಭಾಷೆ ಮತ್ತು ಘಟ್ಟಗಳ ಮಿಶ್ರತೆಯನ್ನು ಈ ರೀತಿ ನೋಡಬಹುದು.

**ಕರ್ನಾಟಕ-ಆಂಧ್ರ ಗಡಿಭಾಗದ ಜನಪದ ಸಾಹಿತ್ಯ ಪ್ರಕಾರಗಳ ಪ್ರಮುಖ ಘಟ್ಟಗಳು**

ಕೋಷ್ಟಕ-೨

| ಘಟ್ಟಗಳು | ರಾಜಾಶ್ರಯ | ಕಾಲ | ಭಾಷೆ |
|---|---|---|---|
| ೧. ಕವಿರಾಜಮಾರ್ಗ ಪರಿಸರದ ಜನಪದ ಸಾಹಿತ್ಯ | ರಾಷ್ಟ್ರಕೂಟರು | ೯-೧೧ನೇ ಶತಮಾನ | ಹಳಗನ್ನಡ |
| ೨. ವಚನ ಚಳುವಳಿಯಲ್ಲಿ ಜನಪದ ಸಾಹಿತ್ಯ | ಕಲಚೂರಿಗಳು | ೧೧-೧೪ನೇ ಶತಮಾನ | ನಡುಗನ್ನಡ |
| ೩. ಅನುಭಾವಿಗಳ ಜನಪದ ಸಾಹಿತ್ಯ | ಬಹಮನಿ ಹೈ.ನಿಜಾಂ | ೧೪-೨೦ನೇ ಶತಮಾನ | ಉರ್ದು, ಅರೇಬಿಕ್ ಹೊಸಗನ್ನಡ, ಮರಾಠಿ, ತೆಲುಗು |

**೩.೩.೧. ಕವಿರಾಜಮಾರ್ಗ ಪರಿಸರದ ಜನಪದ ಸಾಹಿತ್ಯ :**

ಪ್ರಾಚೀನ ಸಾಹಿತ್ಯ ರೂಪಗಳಾದ ಒನಕೆವಾಡು, ಬೆದಂಡೆ, ಚಿತ್ತಾಣ, ಪರಗಣಗಳಂತಹ ಅವೆಷ್ಟೋ ಸಾಹಿತ್ಯ ಮತ್ತು ಛಂದೋರೂಪಗಳು ಇಂದು ಶಿಷ್ಟ ಸಾಹಿತ್ಯದಿಂದ ದೂರ ಸರಿದಿವೆ. ಇಲ್ಲವೆ ಬದಲಾವಣೆಗೊಳಪಟ್ಟಿವೆ. ಹೀಗೆ ಬದಲಾದ ಛಂದೋರೂಪಗಳು ಶಿಷ್ಟ ಸಾಹಿತ್ಯದಿಂದ ದೂರ ಸರಿದರೂ ಮೌಖಿಕ ಸಾಹಿತ್ಯದಲ್ಲಿ ಇಂದಿಗೂ, ನಮ್ಮ ಜನಪದರ ನೆನಪಿನಾಳದಲ್ಲಿ, ಅವರ ಬಾಯಿಯಲ್ಲಿ ಉಳಿದುಕೊಂಡು ಬಂದಿವೆ ಎಂದರೆ ಅಂದು ಉಕ್ಕಿದ ಸಾಹಿತ್ಯದ ಚಿಲುಮೆ ಇಂದಿಗೂ ಮೌಖಿಕ ಸಾಹಿತ್ಯದಲ್ಲಿ ತನ್ನ ಹಸಿಯನ್ನು ಉಳಿಸಿಕೊಂಡು ಬಂದಿದೆ ಎನ್ನಬಹುದು. ಮೊದಲಿನ ರೂಪವನ್ನು ಅಲ್ಪಸ್ವಲ್ಪ ಬದಲಾಯಿಸಿಕೊಂಡರೂ ಅವು ಜನಪದರಲ್ಲಿ ಸಂಪೂರ್ಣವಾಗಿ ನಶಿಸಿಲ್ಲ.

ಸಾಮಾನ್ಯ ಜನರು ಅಥವಾ ಅವಿದ್ಯಾವಂತರು ಹಾಕುತ್ತಿದ್ದ ವೇಷಗಳನ್ನು ಸೂಚಿಸುವ, ಜನ ಸಾಮಾನ್ಯರು ಕೇವಲ ಮನೋರಂಜನೆಗಾಗಿ ಹಾಕುತ್ತಿದ್ದ ವೇಷಗಳಿಗೆ, ವೇಷಗಳ ಸರಣಿ ಮತ್ತು ಪ್ರಾಚೀನ ನಾಟಕದ ಲಕ್ಷಣಗಳನ್ನು ಗರ್ಭೀಕರಿಸಿಕೊಂಡಿದ್ದ, ಒಂದು ಜಾನಪದ ಕಲಾಪ್ರಕಾರಕ್ಕೆ 'ಪರಗಣ' ಎಂದು ಕರೆಯಲಾಗುತ್ತಿತ್ತು. ಈ ಪರಗಣದ ವೇಷಗಳನ್ನು ಬಾದುಬ್ಬೆ ಹಬ್ಬದ ದಿನಗಳಲ್ಲಿ ಮಾತ್ರವಲ್ಲದೆ, ಕಾರಹುಣ್ಣಿಮೆಯ ಹಬ್ಬದ ದಿನಗಳಲ್ಲಿ ಧರಿಸುತ್ತಿದ್ದರು. ಪರಗಣದ ಉದ್ದೇಶವೇ ಹಾಸ್ಯವಾಗಿರುವುದರಿಂದ ಕೆಟ್ಟ ಮಾತು, ಕೆಟ್ಟ ಅರ್ಥ, ಕಲ್ಪನೋಕ್ತಿಕಷ್ಟ ಈ ಮೂರು ಇಲ್ಲಿ ದೋಷಗಳೆಂದು ಪರಿಗಣಿಸುತ್ತಿರಲಿಲ್ಲ. ಅಶ್ಲೀಲ ಎಂದು ಹೇಳಬಹುದಾದ ಮಾತುಗಳು, ಹಾಡುಗಳೂ ಪರಗಣದಲ್ಲಿ ಇರುತ್ತಿದ್ದವು. 'ಪರಗಣ ದೊಳುಳಿದ ಮೂರುಂ ನಗಿಸುಗುಮಪ್ಪುದರಿನಲ್ಲಿ ಗಂತವದೋಷಂ' ಎಂದರೆ ಪರಗಣವು ಹಾಸ್ಯಪ್ರಧಾನವಾದ

ದೃಶ್ಯ ಮಾಧ್ಯಮವಾಗಿದ್ದು, ಶಿಷ್ಟಕ್ಕಿಂತ ಭಿನ್ನವಾದ ನಾಟಕೀಯ ಪ್ರಸಂಗವೆಂದು ಕವಿರಾಜಮಾರ್ಗದಲ್ಲಿ ಶ್ರೀವಿಜಯನು ಹೇಳುತ್ತಾ, ಕಾವ್ಯದಲ್ಲಿ ಕೃತಿದುಷ್ಟು, ಅರ್ಥದುಷ್ಟು, ಶೃತಿಕಷ್ಟ, ಕಲ್ಪನೋಕ್ತಿಕಷ್ಟ ಎಂಬ ಚತುರ್ವಿಧ ಕಾವ್ಯದೋಷಗಳನ್ನು ವಿವರಿಸಿದ್ದಾನೆ. ಆದರೆ ಇವು ಹಾಸ್ಯಪ್ರಧಾನ 'ಪರಗಣ'ದಲ್ಲಿ ದೋಷಗಳೆನಿಸುವುದಿಲ್ಲ ಎಂದು ತನ್ನ ನಿಲುವನ್ನು ಸ್ಪಷ್ಟಪಡಿಸಿದ್ದಾನೆ. 'ಒನಕೆವಾಡು' ಎಂಬುದು ದವಸ-ಧಾನ್ಯಗಳನ್ನು ಕುಟ್ಟುವಾಗ ಹಾಡುವ ಒಂದು ಜನಪದ ಗೀತಪ್ರಕಾರ. ಈ ಜನಪದ ಗೀತೆಯಲ್ಲಿ ಬಹುಪಾಲು ತ್ರಿಪದಿ ರೂಪಗಳಲ್ಲಿ ರಚನೆಯಾಗಿ ಯಾವುದೋ ಒಂದು ಸಂಗತಿಯನ್ನು, ಒಂದು ಕತೆಯನ್ನು ತೆಗೆದುಕೊಂಡು ಅದನ್ನು ತ್ರಿಪದಿಗಳಲ್ಲಿ ನಿರೂಪಿಸಿ, ಧಾನ್ಯ ಕುಟ್ಟುವಾಗ ಹಾಡುತ್ತಿದ್ದರು. ತ್ರಿಪದಿ ಮತ್ತು ಒನಕೆವಾಡುಗಳು ಒಂದಕ್ಕೊಂದು ಹತ್ತಿರವಾಗಿವೆ. "ವ್ಯಾಕರಣ-ಕಾವ್ಯ-ನಾಟಕ ಲೋಕುಳ್ಳ ಸಮಯಮಾದಳಂ ಕೃತಿಗಳೊಂಳಂ ವ್ಯಾಕುಳನಲ್ಲದನೇಕೆ ವಿವೇಕ ಬೃಹಸ್ಪತಿಯ ನಗರಮಂ ಪುಗುತರ್ಪಂ" ಎಂದು ಕವಿರಾಜಮಾರ್ಗದಲ್ಲಿ ಒಂದು ಕಡೆ ಬರುತ್ತದೆ. ವ್ಯಾಕರಣ, ಕಾವ್ಯ, ನಾಟಕ, ಲೋಕವಿದ್ಯೆಗಳು, ಕಲಾವಿದ್ಯೆಗಳು, ದರ್ಶನಗಳು ಮತ್ತು ಅಲಂಕಾರಗಳಲ್ಲಿ ಆಸಕ್ತನಲ್ಲದವನು ವಿವೇಕ ಬೃಹಸ್ಪತಿಯೆನಿಸಿದ ನೃಪತುಂಗನ ಪಟ್ಟಣವನ್ನೇಕೆ ಪ್ರವೇಶಿಸುವನು? ಎಂಬ ಹೇಳಿಕೆಯಲ್ಲಿ ಒಂಬತ್ತನೆಯ ಶತಮಾನಕ್ಕೂ ಮುಂಚೆಯೇ ನಾಟಕವು ವಿದ್ಯಾವಂತನಿಗೆ ಅವಶ್ಯವಾಗಿ ತಿಳಿದಿರಬೇಕಾದ ಕಲೆಯಾಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಒಟ್ಟಿನಲ್ಲಿ ಕವಿರಾಜಮಾರ್ಗದಲ್ಲಿ ಉಲ್ಲೇಖಗೊಂಡಿರುವ 'ಪರಗಣ' 'ಒನಕೆವಾಡು' ಮತ್ತು 'ನಾಟಕ' ಎಂಬುದನ್ನು ಜನಪದ ಕಲಾಪ್ರಕಾರಗಳಲ್ಲಿ ನೋಡಿದಾಗ, ಪರಗಣದ ಲಕ್ಷಣಗಳನ್ನು ಗಮನಿಸಿದಾಗ ಇವು ನಮ್ಮ ಜನಪದರಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವ ಕಾಮದಹನದಲ್ಲಿ ಆಚರಿಸುವ ಶವಸಂಸ್ಕಾರ ವಿಧಿ ಮತ್ತು ಜೋಕುಮಾರ ಸ್ವಾಮಿಯ ಆಚರಣೆಗಳು ಹೆಚ್ಚು ಕಡಿಮೆ ಹೋಲುತ್ತವೆ. ಅಂದರೆ ಕವಿರಾಜಮಾರ್ಗಕಾರ ಹೇಳುವ ದೃಶ್ಯಮಾಧ್ಯಮ, ಶಿಷ್ಟಕ್ಕಿಂತ ಭಿನ್ನವಾದ ನಾಟಕೀಯ ಪ್ರಸಂಗಗಳು ಜನಪದರ ಈ ಹಬ್ಬ-ಆಚರಣೆಗಳಲ್ಲಿ ಕಂಡುಬರುತ್ತವೆ. ಇದರಂತೆ 'ಒನಕೆವಾಡು'ವಿನ ಲಕ್ಷಣಗಳಿಗೆ ಹೋಲುವ ಅನೇಕ ಹಾಡುಗಳನ್ನು ಇಲ್ಲಿಯ ಹಳ್ಳಿಯ ಜನಪದರು ಇಂದಿಗೂ ಹಾಡುತ್ತಾರೆ.

ಇವುಗಳಂತೆಯೇ ಈ ಭಾಗದ ಜನಪದರು ಇಂದಿಗೂ ಮೌಖಿಕತೆಯಲ್ಲಿ 'ಧವಳ' ಎಂಬ ಛಂದೋರೂಪವನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಮದುವೆಗಳಲ್ಲಿ ಮತ್ತು ತದನಂತರದ ಮುಂದಿನ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹಾಡುವ ಹಾಡುಗಳು 'ಪ್ರಾಚೀನ ಧವಳ'ದ ಎಲ್ಲ ಲಕ್ಷಣಗಳನ್ನು ಹೊಂದಿವೆ. 'ಧವಳ' ಎಂಬುದರ ಅರ್ಥವನ್ನು ಹೀಗೆ ನೋಡಬಹುದು.

೧. ಧವಳ - ಶ್ವೇತ, ಬಿಳಿ, ಸ್ವಚ್ಛ, ವೃಷಭ, ಎತ್ತು

೨. ಧವಳ - ಸಂಗೀತಶಾಸ್ತ್ರದಲ್ಲಿ 'ಭರತಮತೇ ಹಿಂದೋಲರಾಗ ಸ್ಯಾಷ್ಟಮಪುತ್ರ' 'ಶಬ್ದಕಲ್ಪದ್ರುಮ' - ಹಿಂದೋಲರಾಗದಿಂದ ಹುಟ್ಟಿದ ರಾಗಗಳಲ್ಲಿ ಇದು ಲನೆಯ ರಾಗ.

೩. ಧವಲ - ಛಂದಶಾಸ್ತ್ರದಲ್ಲಿ ಧವಲ ಎಂಬ ಹೆಸರಿನ ಒಂದು ವೃತ್ತವಿದೆ.

೪. ಧವಳ - ಪ್ರಾಕೃತದಲ್ಲಿ ಧವಳವು ರಾಗ ವಿಶೇಷವೆಂಬ ಅಂಶವನ್ನಾಗಲಿ, ಅದು ಒಂದು ವೃತ್ತವೆಂಬ ಸಂಗತಿಯನ್ನಾಗಲಿ ಅಷ್ಟಾಗಿ ಗಮನಿಸದೆ ಅದು ಒಂದು ಜಾತೀಯ ಹಾಡೆಂಬುದನ್ನು ಮಾತ್ರ ಪರಿಶೀಲನೆಗೆ ಎತ್ತಿಕೊಂಡಿದೆ.

ರನ್ನನು ತನ್ನ ಗದಾಯುದ್ಧಂ [ಸಾಹಸಭೀಮ ವಿಜಯಂ]ದಲ್ಲಿ

"ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ
ಧವಳವಿಲೋಚನೋತ್ಪಲವಧೂಜನಮುಂ ಬೆರಸಷ್ಟದಿಕ್ತಟಂ
ಧವಳಿಸೆ ಕೀತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌ
ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ"[೭]

'ಬಿಳಿಯಾನೆಯನ್ನೇರಿ, ಬಿಳಿಯ ಚಾಮರಗಳಿಂದ ಗಾಳಿಯನ್ನು ಹಾಕಿಸಿಕೊಳ್ಳುತ್ತಾ ಬೆಳ್ಗೊಡೆಯ ನೆಳಲಲ್ಲಿ, ಧವಳ ಕಲಾಕ್ಷವನ್ನು ಬೀರುತ್ತಿರುವ ಅಂತಃಪುರಾಂಗನೆಯರೊಡಗೂಡಿ, ತನ್ನ ಕೀರ್ತಿಯಿಂದ ಅಷ್ಟದಿಕ್ಕುಗಳನ್ನು ಬೆಳಗಿಸುತ್ತಾ ಇಂಪಾದ ಧವಳದ ಹಾಡನ್ನು ಆಲಿಸುತ್ತಾ' ಅತಿ ವೈಭವದಿಂದ ಕೌರವ ಶ್ರೇಷ್ಠನು ಇಂದು ನಿರ್ಗತಿಕನಂತೆ ಏಕಾಂಗಿಯಾಗಿ ಬರುವಂತಾಯಿತೇ, ಎಂದು ಭೀಷ್ಮನು ದುರ್ಯೋಧನನ್ನು ಕುರಿತು ಹೇಳುವ ಪದ್ಯವೊಂದಿದೆ.

ಸಿದ್ದರಾಮ ಚರಿತ್ರೆಯಲ್ಲಿ "ಆ ವೈಶಾಖದ ಹುಣ್ಣಿಮೆಯ ಬೆಳದಿಂಗಳಲ್ಲಿ ಮಲ್ಲಿಕಾರ್ಜುನ ಲಿಂಗದ ಸಮಕ್ಷಮದಲ್ಲಿ ಸಿದ್ದರಾಮಗುರುವಿನ ಪ್ರಸಾದವನ್ನು ಊಟ ಮಾಡಿಸಿ, ವಿವಾಹ ಮಾಡುತ್ತೇವೆ - ಎಂದು, ಮದುಮಕ್ಕಳಿಗೆ ಬಾಸಿಂಗ - ದಂಡೆ - ವಸ್ತ್ರಾಭರಣಗಳಿಂದ ಶೃಂಗಾರ ಮಾಡಿ ಆರತಿಗಳನ್ನು ಬೆಳಗಿ, ಹೆಂಗಸರು 'ಧವಳ'ವನ್ನು ಹಾಡುತ್ತಿದ್ದಾಗ ಸಿದ್ದರಾಮನು ಜಂಗಮವನ್ನು ತಣಿಸಿ ಬಂದು - "ವಿಘ್ನಹ ಲಗ್ನ"ವೆಂದು, "ಓಂ ಪುಣ್ಯ" ಎನ್ನಲು ಗಂಡು/ಹೆಣ್ಣುಗಳ ನಡುವೆ ಹಿಡಿದ ತೆರೆಗಳು ಸರಿದವು. ಅವರವರು ಒಬ್ಬರೊಬ್ಬರಿಗೆ ಜೀರಿಗೆ ಬೆಲ್ಲವನ್ನು ಚೆಲ್ಲಿದರು, ಕೈಧಾರೆ ಎರೆದಾಯಿತು, ಮೆಟ್ಟಕ್ಕಿ ಇಡಲಾಯಿತು, ತಾಂಬುಲವನ್ನು ತಲೆಯ ಮೇಲೆ ಎರಚಾಯಿತು, ವನಿತೆಯರೆಲ್ಲಾ ಮಂಗಳಾರತಿ ಎತ್ತಿ ಹಾಡಿ ಹರಿಸುತ್ತಿದ್ದರೆ-ಶ್ರೀ ಮನ್ನಾರಾಯಣನು ಗೋಪಿಯರಿಗೆ ಒಲಿದು ಪ್ರತ್ಯೇಕ ರೂಪಾಗಿ ಜೋಡಿಯಾದಂತಿದ್ದಿತ್ತು. ಸಾವಿರ ವಧೂ-ವರರ ಜೋಡಿ"[೮]-ಹೀಗೆ ಮದುವೆಯ ಪರಿಯನ್ನು ಹೇಳಲಾಗಿದೆ.

ರನ್ನನ ಗದಾಯುದ್ಧದ ಪದ್ಯದ 'ಧವಳ ಮಂಗಳಗೇಯ' ಎಂಬ ಮಾತನ್ನು ಗಮನಿಸಿ, ಡಿ.ಎಲ್.ಎನ್. ಹೇಳುವ "ಸಿದ್ದರಾಮನು ಮಾಡಿಸಿದ ಸಾವಿರಾರು ಮಂಗಳ ವಿವಾಹಗಳ ಸಂದರ್ಭದಲ್ಲಿ ಅಂಗನೆಯರು 'ಆರತಿಗಳಂ ಬೆಳಗಿ' ಅಲ್ಲಲ್ಲಿ ಧವಳಗಳನ್ನು ಹಾಡುತ್ತಿದ್ದರಂತೆ..... ಈ ಜಾತಿಯ ಹಾಡು ಹತ್ತನೆಯ ಶತಮಾನದ ಕನ್ನಡ ಜನತೆಯಲ್ಲಿ ಪ್ರಚುರವಾಗಿದ್ದಿತೆಂಬುದಕ್ಕೆ ರನ್ನನು ಸಾಕ್ಷಿ ಎಂಬುದು ವಿದ್ವಾಂಸರು ಒಪ್ಪಿಕೊಂಡ ಮಾತಾಗಿದೆ. A Discriptive Catalogue of the Kannada Manuscripts ಗ್ರಂಥದಲ್ಲಿ ಧವಳದ ಹಾಡು ಮುಂತಾದವು"[೯] ಎಂಬ ಹೆಸರಿನ ತಾಳೆಗರಿ ಪ್ರತಿ ಉಲ್ಲೇಖಗೊಂಡಿದೆ. ಇದರಲ್ಲಿ "ಸೀಮಂತ ಧವಲ, ಜಾತಕ ಧವಲ, ಕರ್ಮ ಧವಲ, ಉಪನಯನ ಧವಲ"ಗಳೆಂಬ ಹಾಡುಗಳಿವೆ.

ಸೋಮೇಶ್ವರನ ಮನಸೋಲ್ಲಾಸ, ಹೇಮಚಂದ್ರನ ಛಂದೋನುಶಾಸನ, ಶಾರ್ಙ್ಗದೇವನ ಸಂಗೀತ ರತ್ನಾಕರಗಳಲ್ಲಿ ಇದರ ಲಕ್ಷಣ ಮತ್ತು ಪ್ರಭೇದಗಳನ್ನು ಹೇಳಲಾಗಿದೆ. "ಧವಲಾ ಎಂದು ಪ್ರಾರಂಭವಾಗುವ ಪದಗಳಿಂದ ಕೂಡಿ ಆಶೀರ್ವಾಯುಕ್ತಗಳಾದ ಪಾದಗಳನ್ನು ಹೊಂದಿದ್ದು ಯಾವ ಛಂದಸ್ಸಿನಲ್ಲಾದರೂ ಇರುವ ಗೀತಕ್ಕೆ ಧವಲಾ ಎಂಬ ಹೆಸರು ಎಂದು ಮನಸೋಲ್ಲಾಸದ ಮತ, ೮ ಪಾದಗಳ ಶ್ರೀಧವಲ, ಯಶೋಧವಲ; ೬ ಪಾದ ಕೀರ್ತಿಧವಲ; ೪ ಪಾದಗಳ ಗುಣಧವಲ, ಭಮರಧವಲ, ಅಮರಧವಲ, ಮಂಗಳ ಧವಲಗಳ ವಿವರಣೆ ಹೇಮಚಂದ್ರನಲ್ಲಿದೆ."[೧೦] ಹೀಗೆ ಹಲವು ಹೆಸರುಗಳಲ್ಲಿ ಹರಡಿ ನಿಂತ, ಜನಪದದಲ್ಲಿ ಹಾಸುಹೊಕ್ಕಾಗಿ ಹಬ್ಬಿದ ಈ ಧವಲ ಸಾಹಿತ್ಯ ಪಂಪಪೂರ್ವದ ಪ್ರಭೇದವಾಗಿರುವ ಸಂಭವವಿದೆ. ಕರ್ನಾಟಕದ ಕೆಲವು ಭಾಗಗಳಲ್ಲಿ ಈ ಧವಲ ಪ್ರಕಾರವು ಹೆಸರು ಕಳೆದುಕೊಂಡು ಈಗಲೂ ಪ್ರಚಾರದಲ್ಲಿರಬಹುದು. ಪ್ರಾಚೀನ ತೆಲುಗು ಕಾವ್ಯ ಮತ್ತು ಶಾಸ್ತ್ರಗಳಲ್ಲಿಯೂ ಇದು ಎಡೆಪಡೆದಿದೆ.

ಪ್ರಾಚೀನ ಜನಪದ ಸಾಹಿತ್ಯದಲ್ಲಿ ಧವಳದ ಹಾಡು ಎಂಬ ಪ್ರಕಾರ ಚಾಲ್ತಿಯಲ್ಲಿರುವುದಕ್ಕೆ ಈ ಮೇಲೆ ಉದಾಹರಣೆಯೊಂದಿಗೆ ವಿವರಿಸಲಾಗಿದೆ. ರನ್ನನು ಗದಾಯುದ್ಧದ ಪದ್ಯವೊಂದರಲ್ಲಿ ಈ ಪ್ರಕಾರವನ್ನು ಬಳಸಿದ್ದಾನೆಂದರೆ ಅದು ಜನಪದರಲ್ಲಿ ಹೆಚ್ಚು ಪ್ರಚಲಿತ ಮತ್ತು ಮುಖ್ಯ ಪ್ರಕಾರವಿದ್ದಿರಬೇಕು. ತದನಂತರ ಇಂದಿನ ನಮ್ಮ ಜನಪದರಲ್ಲಿನ ಹಾಡುಗಳನ್ನು ನೋಡಿದಾಗ ಧವಳದಂತೆ ೮,೬,೪ ಪಾದಗಳ ಮತ್ತು ಪಾದವೊಂದಕ್ಕೆ ೧೯ ಅಕ್ಷರಗಳಿದ್ದು ೬ ನಗಣಗಳು + ೧ ಗುರುವಿನ ವಿನ್ಯಾಸ ಇವುಗಳಲ್ಲಿ ಕಂಡುಬರುತ್ತವೆ. ಸಿದ್ದರಾಮ ಚಾರಿತ್ರ್ಯದಲ್ಲಿ ಮದುವೆಯ ಸಂದರ್ಭದಲ್ಲಿ ಸುಮಂಗಲೆಯರು ಮಂಗಳಾರತಿ ಬೆಳಗುತ್ತಾ ಧವಳದ ಹಾಡುಗಳನ್ನು ಹಾಡುತ್ತಿದ್ದರು ಎಂಬುದಾಗಿ ರಾಘವಾಂಕನು ಹೇಳುತ್ತಾನೆ. ಅಂತೆಯೇ ಈ ಆಚರಣೆಯನ್ನು ನಾವು ಇಂದಿಗೂ ಈ ಭಾಗದಲ್ಲಿ ಕಾಣಬಹುದು. ಮದ್ರಾಸಿನ ಸಂಗ್ರಹಾಲಯದಲ್ಲಿನ ತಾಳೆಗರಿಯಲ್ಲಿ ಉಲ್ಲೇಖಗೊಂಡ ಸೀಮಂತ ಧವಲ, ಜಾತಕ ಧವಲ, ಕರ್ಮ ಧವಲ, ಉಪನಯನ ಧವಲ, ಭರತೇಶ್ವರ ಧವಲಗಳು ನಮ್ಮ ಜನಪದರಲ್ಲಿನ ಮೈನೆರೆತ ಹಾಡು, ಕುಬುಸದ ಹಾಡು, ಜೋಗುಳ ಹಾಡುಗಳಿಗೆ ಹತ್ತಿರವಾಗಿವೆ. ಹೀಗಾಗಿ ಅಂದಿನ 'ಧವಳ'ದ ಹಾಡುಗಳೇ ಇಂದು 'ಮಂಗಳಾರತಿ'ಯ ಹಾಡುಗಳಾಗಿ ಜನಪದರಲ್ಲಿ ಮುಂದುವರೆದಿವೆ.

ಕನ್ನಡ ಮತ್ತು ತೆಲುಗು ಈ ಎರಡು ಭಾಷೆಗಳು ದ್ರಾವಿಡ ವರ್ಗದ ಸೋದರ ಭಾಷೆಗಳು. ಈ ಎರಡು ಭಾಷೆಗಳನ್ನಾಡುವ ಪ್ರದೇಶಗಳು ನೈಸರ್ಗಿಕವಾಗಿಯೂ ಒಂದೇ ಭೂಭಾಗವನ್ನು ಹಂಚಿಕೊಂಡಿವೆ. ಕನ್ನಡಿಗರೂ ತೆಲುಗರೂ ಅಕ್ಕಪಕ್ಕದವರು. ಆಚಾರ-ವಿಚಾರ, ವ್ಯವಹಾರ, ಹಬ್ಬ-ಹರಿದಿನಗಳು ಎರಡು ಪ್ರದೇಶಗಳಲ್ಲಿಯೂ ಹೆಚ್ಚು ಕಡಿಮೆ ಒಂದೇ ರೀತಿಯಾಗಿದ್ದು, ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ ಈ ಜನರ ನಡುವೆ ಸಂಪರ್ಕವಿದೆ. ಹೀಗಾಗಿಯೇ ಕನ್ನಡದಂತೆಯೇ ತೆಲುಗು ಕಾವ್ಯಕೃತಿಗಳಲ್ಲಿರುವ 'ಪರಗಣ' 'ಒನಕೆವಾಡು' 'ಧವಳದ ಹಾಡು' ಮತ್ತು 'ತ್ರಿಪದಿ'ಗಳಿವೆ. ಅವು ಹೆಚ್ಚು ಕಡಿಮೆ ಕನ್ನಡ ಮತ್ತು ತೆಲುಗು ಭಾಷೆಯಲ್ಲಿ ಒಂದೇ ಹೆಸರಿನಿಂದ ಕರೆಯಲ್ಪಡುತ್ತವೆ.

ಇವುಗಳಲ್ಲದೆ ತೆಲುಗು ಶಿಷ್ಟ ಕವಿಗಳು ಕನ್ನಡಕ್ಕೆ ಹತ್ತಿರವಿರುವ ಅನೇಕ ಜನಪದ ಸಾಹಿತ್ಯ ಪ್ರಕಾರಗಳನ್ನು ಉಲ್ಲೇಖಿಸಿದ್ದಾರೆ. ನನ್ನೆಚೋಡನು ತನ್ನ 'ಕುಮಾರ ಸಂಭವ'ದಲ್ಲಿ ಅಂಕಮಾಲಿಕ,

ಗೌಡುಗೀತಮು, ರೋಕಲ್ಪಿಪಾಟ ಹಾಗೂ ಉಯ್ಯಾಲಪಾಟ ಎಂಬ ಪ್ರಕಾರಗಳನ್ನು ಹೇಳುತ್ತಾನೆ. ಇಲ್ಲಿನ ರೋಕಲ್ಪಿಪಾಟ ಮತ್ತು ಉಯ್ಯಾಲಪಾಟ ನಮ್ಮಲ್ಲಿನ ಜನಪದರು ದವಸ-ಧಾನ್ಯ ಕುಟ್ಟುವಾಗ, ಬೀಸುವಾಗ ಮತ್ತು ಹೆಣ್ಣುಮಕ್ಕಳು ಉಯ್ಯಾಲೆ ಆಡುವಾಗ ಹಾಡುವ ಹಾಡುಗಳಂತೆ ತೆಲುಗರಲ್ಲಿಯೂ ಪ್ರಚಲಿತದಲ್ಲಿವೆ. ಪಾಲ್ಕುರಿಕೆ ಸೋಮನಾಥ ತನ್ನ 'ಪಂಡಿತಾರಾಧ್ಯ ಚರಿತ್ರ'ದಲ್ಲಿ ೧೨ಕ್ಕಿಂತ ಹೆಚ್ಚಿನ ಜನಪದ ಗೀತೆಗಳನ್ನು ಹೆಸರಿಸಿದ್ದಾನೆ. ಇವುಗಳಲ್ಲಿ ಅನೇಕವು ಕನ್ನಡಕ್ಕೆ ಹೋಲಿಕೆಯಾಗುತ್ತವೆ. ಅಷ್ಟೇ ಅಲ್ಲ 'ಬಸವಪುರಾಣ'ದಲ್ಲಿನ ಕಾವ್ಯಕ್ಕೆ ಮೂಲ ಬಸವನಿಗೆ ಸಂಬಂಧಿಸಿದ ಹಳೆಯ ಜನಪದ ಗೀತೆಗಳೆಂದು ಹೇಳಿಕೊಂಡಿದ್ದಾನೆ. ಅವು ಕನ್ನಡದ ಜನಪದ ಗೀತೆಗಳಾಗಿವೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಕವಿರಾಜಮಾರ್ಗ ಪರಿಸರದಲ್ಲಿನ ಜನಪದ ಸಾಹಿತ್ಯ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ಒಂದಕ್ಕೊಂದು ಸಂಬಂಧ ಬೆಸೆದುಕೊಂಡಿರುವುದರ ಜೊತೆಗೆ ಮುಂದಿನ ಘಟ್ಟದಲ್ಲಿ ಈ ಸಂಬಂಧವನ್ನು ಮುಂದುವರೆಸಿಕೊಂಡು ಬಂದು ಪರಸ್ಪರ ಕೊಡುಕೊಳ್ಳುವಿಕೆ ನಡೆಸಿವೆ. ಅಂತೆಯೇ ಇಲ್ಲಿನ ಜನರು ಜನಪದ ಸಾಹಿತ್ಯ ಕನ್ನಡ ಭಾಷೆಯಲ್ಲಿರಲಿ, ಇಲ್ಲವೆ ತೆಲುಗು ಭಾಷೆಯಲ್ಲೇ ಇರಲಿ ಅಥವಾ ಯಾವುದೇ ಭೌಗೋಳಿಕ (ಕರ್ನಾಟಕ-ಆಂಧ್ರ) ಪರಿಸರದಲ್ಲಿರಲಿ ಅದಕ್ಕೆ ಮಹತ್ವ ಕೊಡದೆ ಅಲ್ಲಿ ಹುಟ್ಟಿಕೊಂಡಂತಹ ಜನಪದ ಸಾಹಿತ್ಯಕ್ಕೆ ಮತ್ತು ಅದನ್ನು ಕಟ್ಟಿ ಬೆಳೆಸಿಕೊಂಡು ಬಂದವರಿಗೆ ಮಹತ್ವ ಕೊಡುತ್ತಾರೆ. ಆದ್ದರಿಂದಲೇ ಈ ಗಡಿಭಾಗದ ಜನಪದರಲ್ಲಿ ಪ್ರಚಲಿತವಿರುವ ಸಾಹಿತ್ಯ, ಒಂದು ನಿರ್ದಿಷ್ಟ ಭಾಷೆ, ಗಡಿಯನ್ನು ದಾಟಿ ಕೊಡು-ಕೊಳ್ಳುವಿಕೆ ನಡೆಸಿಕೊಂಡು ಬಂದಿದೆ.

**೩.೩.೨. ಜನಪದ ತ್ರಿಪದಿಗಳು :**

ಈ ಭಾಗದಲ್ಲಿನ ಜನಪದರು ಜೀವನದ ಅನುಭವಗಳನ್ನು ಹೀಗೆ ತ್ರಿಪದಿಗಳಲ್ಲಿ ಅಭಿವ್ಯಕ್ತಗೊಳಿಸುತ್ತಾ, ತಾವು ಕಂಡು-ಉಂಡಂತಹ ನೋವು-ನಲಿವುಗಳನ್ನು ತಾವು ನೆಚ್ಚಿಕೊಂಡ ದೈವ, ತಾವು ಆಚರಿಸುವ ಹಬ್ಬ, ಹರಿದಿನ, ತಮ್ಮ ಸುತ್ತಲೂ ನಡೆಯುವ ಘಟನೆಗಳನ್ನು ಈ ತ್ರಿಪದಿಗಳಲ್ಲಿ ಹಿಡಿದಿಟ್ಟಿದ್ದಾರೆ.

"ಉದ್ದಿನ ಕಾಯಿಹಾಂಗ ತಿದ್ಯಾರೋ ನಿಮತೇರ
ಖುದ್ದು ಕಲಬುರ್ಗಿ ಶರಣರು - ನಿನತೇರ
ತಿದ್ದಿ ತೆಲಗಾಣೆ ಎಲಮರು."[೧೧]

ಈ ತ್ರಿಪದಿಯಲ್ಲಿ ಕನ್ನಡಿಗರ, ತೆಲುಗರ ಸಂಬಂಧವನ್ನು ನೋಡಬಹುದು. ಕಲಬುರ್ಗಿ (ಗುಲಬರ್ಗಾ) ಶರಣ ಬಸವೇಶ್ವರರ ಜಾತ್ರೆ ಈ ಭಾಗದಲ್ಲೆಲ್ಲ ತುಂಬಾ ಪ್ರಸಿದ್ಧ ಜಾತ್ರೆ. ಈ ಜಾತ್ರೆಗೆ ಕರ್ನಾಟಕ-ಆಂಧ್ರಗಳಿಂದ ಸಹಸ್ರಾರು ಭಕ್ತರು ಬಂದು ನಡೆದುಕೊಳ್ಳುತ್ತಾರೆ. ಜಾತ್ರೆಗೆ ಬರುವ ತೆಲುಗರನ್ನು ನೋಡಿ, ಈ ತ್ರಿಪದಿ ಹುಟ್ಟಿದಂತಿದೆ. ದೊಡ್ಡ ರಥೋತ್ಸವದ ಹಿಂದಿನ ದಿನ ಉಚ್ಛಾಯಿ (ಹೂವಿನ ರಥ) ಥೇರನ್ನು ಎಳೆಯುತ್ತಾರೆ. ಇದಕ್ಕೆ ಒಂದು ತರಹದ ಜಿಡ್ಡಿನ ಎಣ್ಣೆಯನ್ನು ಹಚ್ಚುವುದರಿಂದ ರಥ ಹೊಳೆಯುತ್ತಿರುತ್ತದೆ. ಈ ಜಿಡ್ಡಿನ ಎಣ್ಣೆಯನ್ನು ಮೊದಲಿನಿಂದಲೂ ತೆಲುಗರು ತಂದು ಹಚ್ಚುವುದು ವಾಡಿಕೆ. ಹೀಗಾಗಿಯೇ ಇವರನ್ನು ಕುರಿತು ಈ ಮೇಲಿನ ತ್ರಿಪದಿ ಹುಟ್ಟಿಕೊಂಡಿದೆ.

ಇಲ್ಲಿನ ಜನಪದರು ತಮ್ಮ ಊರುಗಳ ಹೆಸರು ಮತ್ತು ಗ್ರಾಮದೈವಗಳನ್ನು ಸಹ ತ್ರಿಪದಿಗಳಲ್ಲಿ ಕಟ್ಟಿಕೊಂಡಿದ್ದಾರೆ.

"ಚಾಂಗಲೇರಿ ಸುತ್ತ ಚಂಡ ಮಾವೀನ ಗಿಡ
ಗುಂಡದ ಸುತ್ತ ಗಿಣಿ ಹಿಂಡು | ಇರಭದ್ರನ
ಪಲ್ಲಕ್ಕಿ ಸುತ್ತ ಪರಿಮಳ"[೧೨]

ಚಾಂಗಲೇರಿ ಗಡಿಗ್ರಾಮವಾಗಿದ್ದು ಇಲ್ಲಿನ ಗ್ರಾಮದ ದೈವ ವೀರಭದ್ರ ದೇವರು. ಊರಿನಿಂದ ಸ್ವಲ್ಪ ದೂರದಲ್ಲಿರುವ ಈ ದೇವಸ್ಥಾನದ ಸುತ್ತಮುತ್ತ ಹೊಲ-ತೋಟ, ಮಾವಿನ ಮರಗಳಿರುವವು. ಇಲ್ಲಿನ ಹಸಿರು ಮತ್ತು ಮಾವಿನಹಣ್ಣಿಗಾಗಿ ಗಿಳಿಹಿಂಡುಗಳು ಸಾಕಷ್ಟಿರುತ್ತವೆ. ಇವುಗಳ ಪರಿಚಯವನ್ನು ಈ ಮೇಲಿನ ತ್ರಿಪದಿ ಹೇಳಿರುತ್ತದೆ.

"ದಂಡ ಬರತಾವೆಂದು ಅಂಜಿತ ಯಾಲ್ಯೇರ
ದಂಡಿನ ಪುಂಡ ಹೊರಗಾನ | ರಾಚೋಟಿವೀರ
ಚಂಡಾಡಿ ದಂಡ ತರಬ್ಯಾನ"[೧೩]

ಯಾದಗಿರಿಯು ಐತಿಹಾಸಿಕ ನಗರವಾಗಿದ್ದು, ಇದು ಕಲ್ಯಾಣಿ ಚಾಲುಕ್ಯರ, ಯಾದವರ, ಮುಸ್ಲಿಂ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಮೇಲಿಂದ ಮೇಲೆ ನಡೆಯುವ ರಾಜಕೀಯ ದಾಳಿಗಳನ್ನು ಕಂಡ ಜನಪದ ತಾಯಿ, ದಂಡ (ಸೈನ್ಯ) ಬಂದು ಆಕ್ರಮಣ ಮಾಡುತ್ತವೆ ಎಂಬ ಅಂಜಿಕೆ ನಮ್ಮಲಿಲ್ಲ. ನಮ್ಮನ್ನು ಊರ ಹೊರಗಿನ ರಾಚೋಟಿ ವೀರಭದ್ರ ಕಾಪಾಡುತ್ತಾನೆ. ಬಂದ ಶತ್ರುಸೈನ್ಯವನ್ನು ಹಿಮ್ಮೆಟ್ಟಿಸುತ್ತಾನೆ. ವೀರಭದ್ರ ನಮ್ಮ ರಕ್ಷಣೆಗೆ ಇರುವಾಗ ಅಂಜಿಕೆಯಿಲ್ಲ ಎಂದಿದ್ದಾಳೆ.

ಇಲ್ಲಿನ ಜನಪದ ಗರತಿ ತ್ರಿಪದಿಗಳಲ್ಲಿ ನದಿಗಳನ್ನು, ಹೆಣ್ಣುಮಕ್ಕಳನ್ನು, ತಮ್ಮ ಊರಿನ, ವೃತ್ತಿಗೆ ಸಂಬಂಧಪಟ್ಟಂತಹ ಅನೇಕ ವಿಷಯಗಳನ್ನು ಉಲ್ಲೇಖಿಸುತ್ತಾಳೆ.

"ಬ್ಯಾಸಗಿ ದಿವಸಕ ಬೇವಿನ ಮರ ತಂಪ
ಭೀಮ ರತಿಯೆಂಬ ಹೊಳೆ ತಂಪ | ಹಡೆದವ್ವ
ನೀ ತಂಪ ನನ್ನ ತವರೀಗಿ"[೧೪]

ಬೇಸಿಗೆ ಕಾಲ ಬಹಳ ಬಿಸಿಲಿನಿಂದ ಕೂಡಿರುತ್ತದೆ. ಕೃಷ್ಣೆಯ ಉಪನದಿಯಾದ ಭೀಮೆಯನ್ನು ಇಲ್ಲಿನ ಜನರು ಬಹಳ ಪ್ರೀತಿಯಿಂದ ಪೂಜ್ಯನೀಯ ಭಾವನೆಯಿಂದ ಕಾಣುತ್ತಾರೆ. ಅದು ಹರಿಯದೆ ಹೋದರೆ ಈ ಭಾಗದಲ್ಲೆಲ್ಲ ಬರಗಾಲವೇ ಗತಿ. ನದಿಯನ್ನು ಮತ್ತು ತಂಪಾದ ಬೇವಿನಮರವನ್ನು ಗರತಿ ತನ್ನ ತವರುಮನೆಗೆ ಹೋಲಿಸಿ 'ತವರಿಗೆ ಹಡೆದವ್ವನೆ ತಂಪೆನುತ್ತಾಳೆ'. ಇಂದಿಗೂ ನಮ್ಮ ಜನಪದ ಹೆಣ್ಣು ತವರುಮನೆಗೆ ತಾಯಿ ಇರುವವರೆಗೆ ಮಾತ್ರ ಹೆಚ್ಚಾಗಿ ಹೋಗುತ್ತಿರುತ್ತಾಳೆ. ತಾಯಿ ತೀರಿದ ನಂತರ ತವರಿಗೆ ಹೋದರೆ ನಾಯಿಗಿಂತ ಕಡೆ ಎನ್ನುವ ಮನೋಭಾವನೆಯನ್ನು ತಳೆದಿದ್ದಾಳೆ.

"ಸೊಲ್ಲಾಪುರದ ಹೆಣ್ಣು ಸುಲಿದ ಬಾಳೆಯ ಹಣ್ಣು
ಕಲಬುರ್ಗಿ ಹೆಣ್ಣು ಕರಿಕಮುರಿ | ಯಾತಗಿರಿ
ಗುಡ್ಡದ ಹೆಣ್ಣು ಗುಲಗಂಜಿ"[೧೫]

ಬಿಸಿಲಿರುವ ಕಡೆ ಸಾಮಾನ್ಯವಾಗಿ ಜನರ ಮೈಬಣ್ಣ ಕಪ್ಪಾಗಿರುವುದು, ಗರತಿ ತನ್ನ ಸುತ್ತಮುತ್ತಲಿನ ಊರಿನ ಹೆಣ್ಣುಮಕ್ಕಳ ಮೈಬಣ್ಣ ಕುರಿತು ಹೇಳುತ್ತಾ ಸೊಲ್ಲಾಪುರದ ಹೆಣ್ಣಿನ ಮೈಬಣ್ಣ ಸುಲಿದ ಬಾಳೆಹಣ್ಣಿನ (ಬಿಳಿ) ಹಾಗೇ ಕಲಬುರ್ಗಿ ಹೆಣ್ಣು ಕರಿ ಮತ್ತು ಯಾತಗಿರಿಯ ಹೆಣ್ಣು ಅಷ್ಟು ಕಪ್ಪು ಅಲ್ಲ ಅಷ್ಟು ಬಿಳಿಯೂ ಅಲ್ಲ ಮಧ್ಯಮ ಮೈಬಣ್ಣ ಹೊಂದಿದ್ದಾಳೆ ಎನ್ನುತ್ತಾಳೆ.

"ಅಲ್ಲೂರಿಗಿ ಅಗಿಸಿಲ್ಲ ಕೊಲ್ಲೂರಿಗಿ ಕ್ವಾಟಿಲ್ಲ
ದಂಡ ಗುಂಡಕ ಧರಿಯಿಲ್ಲ | ಮೈಲಾಪುರ
ಹಡದ ಬಾಣತಿಗೆ ಹೊರಸಿಲ್ಲ"[೧೬]

ಈ ಭಾಗದಲ್ಲಿನ ಬಡತನವನ್ನು ಗ್ರಹಿಸುತ್ತಾ ಗರತಿ ಪ್ರತಿಯೊಂದು ಊರಿಗೆ ಅಗಸಿ ಇರಲೇಬೇಕು. ಅಗಸಿ ಇರದೇ ಹೋದರೆ ಆ ಊರಿಗೆ ಪ್ರವೇಶ ಮಾಡುವುದು ಎಲ್ಲಿಂದ? ಅಗಸಿ ಇಲ್ಲದ ಊರು ಹಾಳು ಊರಾಗಿರುವುದು, ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟ ಅಲ್ಲೂರೂ ಅಂದು 'ಅರಲು ಮುನ್ನೂರು' ಎಂಬ ಹೆಸರಿನ ಪಟ್ಟಣವಾಗಿತ್ತು. ಇದರ ಕೆಳಗೆ ೩೦೦ ಸಣ್ಣ ಸಣ್ಣ ಹಳ್ಳಿಗಳಿದ್ದವು. ಇಂತಹ ಪ್ರಸಿದ್ಧ ಊರಿಗೆ ಇಂದು ಅಗಸಿ ಇಲ್ಲ, ರಾಜರ ಪಟ್ಟಣಗಳಿಗೆ ಕೋಟೆಗಳಿರಲೇಬೇಕು. ಇಲ್ಲದಿದ್ದರೆ ಶತ್ರುಗಳ ಭಯ ಇರುತ್ತದೆ. ಆದರೆ ಭೀಮಾ ನದಿಯ ದಡದಲ್ಲಿರುವ ಕೊಲ್ಲೂರಿಗೆ ಕೋಟೆಯೇ ಇಲ್ಲ, ಈ ಊರು ಅಂದು ರಾಜರ ಒಂದು ಮುಖ್ಯ ಪಟ್ಟಣವಾಗಿತ್ತು. ದಂಡಗುಂಡ ಈ ಭಾಗದ ಪ್ರಸಿದ್ಧ ಧಾರ್ಮಿಕ ತಾಣ, ಬಸವೇಶ್ವರ (ಬಸವಣ್ಣ, ಎತ್ತು) ಇಲ್ಲಿನ ಆರಾಧ್ಯ ದೈವ. ಒಂದಾನೊಂದು ಕಾಲದಲ್ಲಿ ಶ್ರೀಮಂತವಾದ ಈ ಪ್ರದೇಶ ಬರಗಾಲ ಬಂದು ಊರಿನ ಅಗಸಿ, ಕೋಟೆ ಎಲ್ಲವು ನಾಶವಾಗಿರುವವು. ಅಷ್ಟೇ ಏಕೆ ಇಲ್ಲಿ ಎಂಥ ಬಡತನವಿತ್ತೆಂದರೆ ಬಾಣಂತಿಗೆ ಮೈ ಕಾಯಿಸಿಕೊಳ್ಳಲು ಒಂದು ಹೊರಸು (ಮಂಚ) ಇರುತ್ತಿರಲಿಲ್ಲ.

"ಊರ ಮುಂದಿನ ಗಾಳಿ ಏನಂತ ಬಿಸ್ಯಾದ
ಆಲಿಸಿ ಕೇಳ ಹಡೆದವ್ವ | ನಿನ ಮಗ
ಹಾಡ್ಯಾಡಿ ಹಂತಿ ಹೊಡೆದಾನ"[೧೭]

ಈ ಜನಪದ ತ್ರಿಪದಿಯು 'ಹಂತಿ' ಹಾಡಿಗೆ ಸಂಬಂಧಿಸಿದ್ದಾಗಿದೆ. ಹಳ್ಳಿಗಳಲ್ಲಿ ರಾಶಿ ಮಾಡುವಾಗ ರೈತರು ತಮ್ಮ ಬೇಸರ ಕಳೆಯಲು ಕೃಷಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾರೆ. ಅವೇ 'ಹಂತಿ' ಪದಗಳು. ಆದರೆ ಇಂದಿನ ಆಧುನಿಕ ರೈತರು ಹೊಲದಲ್ಲಿ ಹಾಡು ಹೇಳುತ್ತಾ ರಾಶಿ ಮಾಡುವುದು ಅಷ್ಟಾಗಿ ಕಂಡುಬರುತ್ತಿಲ್ಲ. ಈ ಹಿಂದೆ ಹೊಲದಲ್ಲಿ ಹಂತಿ ಕಟ್ಟಿ, ಪೂಜೆ ಸಲ್ಲಿಸಿ ಹುಣ್ಣಿಮೆಯ ಹಾಲಿನಂತಹ ಬೆಳದಿಂಗಳ ಬೆಳಕಿನಲ್ಲಿ ರಾತ್ರಿಯಿಂದ ಮುಂಜಾವಿನವರೆಗೆ ಹಾಡುಗಳನ್ನು ಹಾಡುತ್ತಿದ್ದರು. ಹುಲುಸಾಗಿ ಬೆಳೆದ ಬೆಳೆಗಳನ್ನು ಕಟಾವು ಮಾಡಿ, ರಾಶಿ ಮಾಡಿ ಅನೇಕರಿಗೆ ದವಸಗಳನ್ನು ಧಾನ್ಯಗಳ

ರೂಪದಲ್ಲಿ ನೀಡಿ ಖುಷಿಪಡುತ್ತಿದ್ದರು. ಕಣ ಕಡಿದು ಮೇಟಿ ನಿಲ್ಲಿಸಿ ತೆನೆ ಮುರಿದು ದಿಂಡಿ ಕಟ್ಟಿ ಹಂತಿ ಹೂಡಿ ಇಡೀ ರಾತ್ರಿ ಹಾಡುತ್ತ, ಕಂಕಿ ಎಳೆಯುತ್ತಾ, ಹಂತಿ ಹೊಡೆಯುತ್ತಾ, ಈ ಕಾಯಕದಲ್ಲಿ ತಮಗೆ ಬೇಸರ ಬರಬಾರದೆಂದು ಭಕ್ತಿ, ಹಾಸ್ಯ, ಪ್ರಣಯ, ವಿನೋದ, ವಿರೋಧಾಭಾಸಗಳಂತಹ ರಸ ಪ್ರಧಾನವಾದ ಹಾಡುಗಳನ್ನು ಹಾಡಿ ಇಡೀ ರಾತ್ರಿ ನಕ್ಕು ನಲಿಯುತ್ತಾ ಕುಣಿದು ಕುಪ್ಪಳಿಸುತ್ತಿದ್ದರು. ಇಡೀ ರಾತ್ರಿ ಆ ಸ್ಥಳ ಕಾರ್ಯಕ್ರಮದ ವೇದಿಕೆಯಾಗಿರುತ್ತಿತ್ತು. ಅವರಿಗೆ ದಣಿವಾದ ಕಲ್ಪನೆಯಾಗಲಿ, ಅವರ ಮೈಮೇಲೆ ಸುಂಕು ಹಾರಿಬಂದು ಬಿದ್ದ ಅರಿವಾಗಲಿ ಇರುತ್ತಿರಲಿಲ್ಲ. ಹೀಗೆ ಮೈ ಮುರಿದು ದುಡಿದು, ಮೈಮರೆತು ಹಾಡುವ ಹಂತಿಯ ಹಾಡುಗಳು ಕಾಲ ಬದಲಾದಂತೆ ಕಣ್ಮರೆಯಾಗುತ್ತಿವೆ. ಜನಪದರು ಇಂದು ಹೊಲಗಳಲ್ಲಿ ರಾಶಿ ಮಾಡದೇ ಡಾಂಬರು, ಟಾರು ರೋಡುಗಳಲ್ಲಿ ಇಲ್ಲವೇ ಊರಿನ ಬಯಲು, ಶಾಲೆಯ ಆಟದ ಮೈದಾನದಲ್ಲಿ ಆಧುನಿಕ ಯಂತ್ರಗಳ ಸಹಾಯದಿಂದ ರಾಶಿ ಮಾಡಿ ಬಲುಬೇಗ ಮನೆ ಸೇರುತ್ತಿದ್ದಾರೆ. ಹೀಗಿರುವಾಗ ಹಂತಿ ಹಾಡುಗಳನ್ನು, ಕೃಷಿಗೆ ಸಂಬಂಧಿಸಿದ ಹಾಡುಗಳನ್ನು ಹಾಡಲು ಜನಪದರಿಗೆ ಸೂಕ್ತ ವೇದಿಕೆಗಳೇ ಸರಿಯಾಗಿ ಇಂದು ಸಿಕ್ಕುತ್ತಿಲ್ಲ.

ಕರ್ನಾಟಕ-ಆಂಧ್ರಗಡಿಭಾಗದಲ್ಲಿ ಜನರು ತಮ್ಮ ಬದುಕಿನ ಜೊತೆ ಜನಪದ ಹಾಡುಗಳನ್ನು ಮೈಗೂಡಿಸಿಕೊಂಡಿದ್ದಾರೆ ಎಂಬುದಕ್ಕೆ ಇದು ಉದಾಹರಣೆಯಾಗಬಹುದು. ಖಂಡೇರಾಯನಪಲ್ಲಿ ಕರ್ನಾಟಕದ ಗಡಿ ಹಳ್ಳಿಯಾಗಿದ್ದು, ಇಲ್ಲಿನ ಬಹಳಷ್ಟು ಜನರ ಮನೆಮಾತು ತೆಲುಗು. ಅದನ್ನು ಸಂಪರ್ಕ ಭಾಷೆಯಾಗಿಯೂ ಬಳಸುತ್ತಾರೆ. ಅಂದರೆ ಇವರಿರುವ ಭೂಪ್ರದೇಶ ಕರ್ನಾಟಕದ್ದು. ಇವರು ಬಳಸುವ ಭಾಷೆ ತೆಲುಗು. ಸಾಂಸ್ಕೃತಿಕ ಸಂಬಂಧವಿಟ್ಟುಕೊಂಡಿದ್ದು ಕರ್ನಾಟಕದ ಜೊತೆ. ಇಂತಹದೇ ಒಂದು ತಾಜಾ ಉದಾಹರಣೆಯೆಂದರೆ ಈ ಗ್ರಾಮದ ವೆಂಕೋಬದಾಸರು ಏಕತಾರಿ, ತಂಬೂರಿ ಹಿಡಿದು ಹಾಡುಗಳನ್ನು ಹಾಡುತ್ತಾರೆ. ಈ ಹಾಡುಗಳು ತೆಲುಗು ಭಾಷೆಯಲ್ಲಿದ್ದರೂ, ಅವು ಸಾಂಸ್ಕೃತಿಕವಾಗಿ ಕನ್ನಡಕ್ಕೆ ಸಂಬಂಧಿಸಿದ್ದಾಗಿವೆ.

"ಅಮ್ಮ ಯಾವುರು ಯಾ ಪಲ್ಲಿ
ರಾಜೋಳ್ಳಿ ವಂಚಿನಂಟಿ, ಯಾವುರು ಯಾ ಪಲ್ಲಿ
ಅಮ್ಮಾವೊಳು ಸುಬಾರೆಸಿಕೊಂಡನಿ
ಖಂಡರಾಯನುನಿ, ವೆಂಕಟೇಶ್ವರನುನಿ
ದಗ್ಯರನಮ್ಮ ವಚ್ಚಿ ನಾವಾಳು, ವಾಳೆವರಮ್ಮ
ಖಂಡರಾಯನ ಪಲ್ಲೆಲು ನಾ
ಅಂಟಿ ವೀರಾಪಕ್ಷ ಗುರುಲಮ್ಮ
ವಾಳು ನಿಜಾಮ ವಚ್ಚಿ ನಾರಮ್ಮ
ಭಕ್ತು ಮಹಾಭಕ್ತ, ಪುಣ್ಯಾತ್ಮಲಮ್ಮ

ಶಕ್ತಿ ವರತುಲಮ್ಮ

ನಾದಲಿದಮನತಿನು ನಟ್ಟಿ

ನಾದ ವಿಜಯಲು ನೆಟ್ಟಿ

ಯಾವುರು, ಯಾ ಪಲ್ಲಿ ರಾಜೋಳು ವಚ್ಚಿನಟ್ಟಿ

ವರಕವಿ ಶ್ರೀ ಮುರುಘೇಂದ್ರ ಅಮ್ಮ."೧೮

**೩.೩.೩. ಜನಪದ ಗಾದೆಗಳು :**

ತ್ರಿಪದಿಗಳಲ್ಲಿ ತಮ್ಮ ಅನುಭವಗಳನ್ನು ಹೊರಹಾಕಿದಂತೆ ಗಾದೆಗಳನ್ನು ಈ ಭಾಗದ ಜನರು ತಮ್ಮ ಜೀವನದಲ್ಲಿ ಬೆರೆಸಿಕೊಂಡಿದ್ದರು. ನೇರವಾಗಿ ಹೇಳದೆ ಇರುವುದನ್ನು ಗಾದೆಗಳ ಮೂಲಕ ಪರೋಕ್ಷವಾಗಿ, ವ್ಯಂಗ್ಯವಾಗಿ ಹೇಳಲು ಈ ಗಾದೆಗಳ ಸಹಾಯ ಬಳಸಿರುತ್ತಾರೆ. 'ಬರಗಾಲದಾಗ ಬುತ್ತಿ ಉಚ್ಚಿಂದಾಂಗ ಮಾಡುತ್ತಿರಲ್ಲ' ಎಂಬ ಇಂತಹ ಗಾದೆಗಳನ್ನು ಯಾರಾದರೂ ಅವಸರ, ಆತುರತೆ, ಗಡಿಬಿಡಿಯಿಂದ ಕೆಲಸಗಳನ್ನು ಕ್ರಮಬದ್ಧವಾಗಿ ಮಾಡದಿದ್ದಾಗ ಅಲ್ಲಿ 'ಬರಲಾಗದಾಗ ಬುತ್ತಿ ಉಚ್ಚಿದಾಂಗ ಮಾಡತಿಯಲ್ಲ' ಎನ್ನುತ್ತಾರೆ. ಬರಗಾಲದಲ್ಲಿ ಹೊಟ್ಟೆಗೆ ತಿನ್ನುವುದಕ್ಕೆ ಇಲ್ಲದೆ ಕಂಗಾಲಾದವರಿಗೆ ಊಟದ ಬುತ್ತಿ ಕೊಟ್ಟರೆ ಸಾಕು, ಅವರು ಬುತ್ತಿ ನೋಡಿದ ತಕ್ಷಣ ಕ್ರಮಬದ್ಧವಾಗಿ ಯಾವುದು ಮೊದಲು ಯಾವುದು ನಂತರ ತಿನ್ನಬೇಕು, ಹೇಗೆ ವಿಧಾನಪೂರ್ವಕವಾಗಿ, ನಿಧಾನವಾಗಿ ಉಣ್ಣಬೇಕೆಂಬುದರ ಪರಿವೆ ಇಲ್ಲದೆ ಕೈಗೆ ಸಿಕ್ಕಿದ್ದನ್ನು ಉಣ್ಣುತ್ತಾರೆ. ಹೀಗೆ ಈ ಭಾಗದಲ್ಲಿ ಮೇಲಿಂದ ಮೇಲೆ ಬರಗಾಲಕ್ಕೆ ತುತ್ತಾದ ಜನರನ್ನು ನೆನಪಿಸುತ್ತಾ, ಈ ರೀತಿಯ ಆತುರ ಸ್ವಭಾವದ ವ್ಯಕ್ತಿಗಳನ್ನು ಉದ್ದೇಶಿಸಿ ಈ ಗಾದೆ ಮೂಡಿ ಬಂದಂತಿದೆ. ಈ ಗಡಿಭಾಗದಲ್ಲಿ ಕಂಡುಬರುವ ಗಾದೆಗಳು ಕನ್ನಡ ಮತ್ತು ತೆಲುಗು ಭಾಷೆಗಳನ್ನು ಒಂದರೊಳಗೊಂದು ಹೆಣೆದುಕೊಂಡಿವೆ.

| ಕನ್ನಡದ ಗಾದೆಗಳು | ತೆಲುಗು ಗಾದೆಗಳು |
|---|---|
| ೧. ಆಕಳು ಕಪ್ಪಾದರೆ ಹಾಲು ಕಪ್ಪೆ? | ಆವು ನಲುಪಾಯಿತೇ ಪಾಲು ನಲುಪಾ? |
| ೨. ರೋಗಿ ಬಯಸಿದ್ದು ಹಾಲೇ, ವೈದ್ಯ ಹೇಳಿದ್ದು ಹಾಲೇ | ರೋಗಿ ಕೋರಿಂದೀ ಪಾಲೇ, ವೈದ್ಯುಡು ಚಪ್ಪಿಂದಿ ಪಾಲೇ |
| ೩. ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ | ಅಂತೂ ಇಂತೂ ಕುಂತಿ ಕೊಡಕಲುಕು ರಾಜ್ಯಂ ಲೇದು |
| ೪. ಅಂಬಲಿ ಕುಡಿಯುವವನಿಗೆ ಮೀಸೆ ತಿಕ್ಕುವನೊಬ್ಬ | ಅಂಬಲಿ ತಾಗೇ ವಾಡಕೀ ಮೀಸಲು ಎಗಬೆಟ್ಟ ವಾಡೂಕಡು |
| ೫. ಅಕ್ಕನ ಹಗೆ, ಭಾವನ ನಂಟು | ಅಕ್ಕ ಪಗ, ಭಾವ ಮಂಚಿ |

ಈ ಕನ್ನಡ ಮತ್ತು ತೆಲುಗು ಗಾದೆಗಳು ಪರಸ್ಪರ ಒಂದಕ್ಕೊಂದು ಭಾಷಿಕ ಮತ್ತು ಅವುಗಳ ಅರ್ಥ ಒಂದೇ ತೆರನಾಗಿದ್ದುದ್ದು ಕಂಡುಬರುತ್ತದೆ. ಇಲ್ಲಿನ ಜನರು ಗಾದೆಗಳನ್ನು ಬಳಸುವಾಗ ಭಾಷೆಗೆ ಮಹತ್ವ ಕೊಡದೆ ಎದುರಿನ ವ್ಯಕ್ತಿ ಯಾವ ಭಾಷಿಕನಾಗಿರುವನೋ ಆ ಭಾಷೆಯಲ್ಲಿಯೇ ಇವರು ಅವನಿಗೆ ಅರ್ಥವಾಗುವಂತ ಗಾದೆಗಳನ್ನು ಆಡುತ್ತಾರೆ. ಕನ್ನಡ ಮತ್ತು ತೆಲುಗು ಭಾಷೆಯ ಗಾದೆಗಳನ್ನು ಒಟ್ಟೊಟ್ಟಿಗೆ ಇಲ್ಲಿನ ಜನ ಬಳಸುತ್ತಾರೆ.

**೩.೩.೪. ಜನಪದ ರಂಗಭೂಮಿ :**

ಕರ್ನಾಟಕ-ಆಂಧ್ರ ಗಡಿಭಾಗದ ಜನಪದ ನಾಟಕಗಳಲ್ಲಿಯೂ ಕನ್ನಡ ಮತ್ತು ತೆಲುಗು ಮಿಶ್ರಭಾಷೆ ಯಲ್ಲಿ ರಚಿತವಾಗಿವೆ. ನಿಜಾಂರ ಆಡಳಿತ ಸಂದರ್ಭದಲ್ಲಿ ಗಡಿಗ್ರಾಮ ಮೇದಕನ ಶಿಕ್ಷಕರೊಬ್ಬರು ರಚಿಸಿದ ಅ) ರಾಮಾಯಣ ಮತ್ತು ಆ) ಶ್ರೀ ಶರಣಬಸವೇಶ್ವರ ಚರಿತ್ರೆಗಳೆಂಬ ಪೌರಾಣಿಕ ನಾಟಕಗಳು ಅವು ಅಲ್ಲಿನ ಅಪ್ಪಟ ಜನಪದರು ಕಟ್ಟುವ ಕಥೆಯ ಪರಿಚಯ ಮಾಡಿಸುತ್ತವೆ.

'ರಾಮಾಯಣದಲ್ಲಿ ರಾವಣನ ವಧೆ'ಯ ಕಥೆಯ ಸಾರಾಂಶದಲ್ಲಿ ವೈಕುಂಠದಲ್ಲಿ ರಾವಣಾಸುರನ ಆರ್ಭಟ ಹೆಚ್ಚಾಗಿ, ರಾವಣ ಅಲ್ಲಿದ್ದ ಎಷ್ಟೋ ಜನ ಹೆಣ್ಣುಮಕ್ಕಳನ್ನು ಅಪಹರಿಸಿಕೊಂಡು ಬರುತ್ತಾನೆ. ಯಮನನ್ನು ಸೋಲಿಸಿ ಕೆಟ್ಟ ಕೆಲಸ ಮಾಡಿ ನರಕಕ್ಕೆ ಹೋದವರನ್ನೆಲ್ಲ (ರಾಕ್ಷಸ) ಕರೆತಂದು ತನ್ನ ಬೆಂಬಲಿಗರನ್ನಾಗಿ ಮಾಡಿಕೊಳ್ಳುತ್ತಾನೆ. ಇವನಿಂದ ಎಲ್ಲರಿಗೂ ಕಷ್ಟವಾಗುತ್ತದೆ. ರಾವಣಾಸುರನನ್ನು ನಿಯಂತ್ರಿಸಲು ದೇವರೆಲ್ಲರು ಸೇರಿ ನಾರದ ಮಹರ್ಷಿಗಳ ಬಳಿ ಬಂದು ವಿನಂತಿಕೊಳ್ಳುತ್ತಾರೆ. ಎಲ್ಲ ದೇವಾನುದೇವತೆಗಳ ವಿನಂತಿಯ ಮೇರೆಗೆ ನಾರದ ಮುನಿಗಳು ಬ್ರಹ್ಮನ ಬಳಿಗೆ ಹೋಗಿ ಅಲ್ಲಿ ಅವರಿಬ್ಬರು ದೀರ್ಘ ಚರ್ಚೆ ನಡೆಸಿ ಪರಿಹಾರಕ್ಕಾಗಿ ಕೊನೆಗೆ ವೈಕುಂಠವಾಸಿ ವಿಷ್ಣುವಿನ ಬಳಿಗೆ ಹೋಗಿ ರಾವಣನನ್ನು ನಿಯಂತ್ರಿಸುವ ಕುರಿತು ಬೇಡಿಕೊಂಡಾಗ ಅದಕ್ಕೆ ವಿಷ್ಣು ನೀವು ಈಗ ಇಲ್ಲಿಗೆ ಬಂದಿದ್ದೀರಲ್ಲ. ನೀವು ಬಂದಿರುವ ವಿಷಯ ಯಾರಿಗೂ ಹೇಳಬೇಡಿ. ಇದನ್ನು ಗೌಪ್ಯವಾಗಿಡಿ. ನಾನು ಇನ್ನು ಕೆಲವೇ ದಿನಗಳಲ್ಲಿ ಭೂಲೋಕದ ಅಯೋಧ್ಯಾಪತಿ ದಶರಥ ಮಹಾರಾಜರ ಹೊಟ್ಟೆಯೊಳಗೆ ಶ್ರೀರಾಮನಾಗಿ ಹುಟ್ಟುತ್ತೇನೆ. ಮುಂದೆ ದಿನ ಕಳೆದಂತೆ ಬೆಳೆದು ರಾವಣಾಸುರನ ಸಂಹಾರ ಮಾಡುತ್ತೇನೆ. ನೀವು ಚಿಂತೆ ಮಾಡಬೇಡಿರಿ. ಲಕ್ಷ್ಮೀಯು ರಾವಣನ ಸಂಹಾರದಲ್ಲಿ ನನಗೆ ಸಹಾಯ ಮಾಡಲು ಸೀತೆಯಾಗಿ ಹುಟ್ಟುತ್ತಾಳೆ. ಈ ವಿಷಯ ಯಾರಿಗೂ ಹೇಳಬೇಡಿ ಎಂದು ಎಚ್ಚರಿಸಿ ನಾರದ ಮುನಿ ಮತ್ತು ಬ್ರಹ್ಮನನ್ನು ಕಳಿಸಿಕೊಡುತ್ತಾನೆ.

ಇದಿಷ್ಟು ನಾಟಕದ ಮೊದಲಲ್ಲಿ ಕಂಡುಬರುತ್ತದೆ. ವಿಷ್ಣು ರಾಮನಾಗಿ ಹುಟ್ಟುವುದನ್ನು ಯಾರಿಗೂ ಹೇಳಬೇಡಿ ಎಂದು ಹೇಳಿ ಕಳಿಸಿದರೆ ನಾರದನಿಗೆ ಈ ವಿಷಯ ತನ್ನ ಹೊಟ್ಟೆಯೊಳಗೆ ಇಟ್ಟುಕೊಳ್ಳಲಾಗದೆ, ವಿಷ್ಣುದೇವನು ಯಾರಿಗೂ ಹೇಳಬೇಡಿ ಎಂದಿದ್ದಾನೆ. ನನ್ನಿಂದ ಇದನ್ನು ತಡೆಯಲಾಗುತ್ತಿಲ್ಲ, ಏನು ಮಾಡುವುದು, ಸರಿ ಹಾವಿನ ಹುತ್ತಿನೊಳಗೆ ಈ ವಿಷಯ ಹೇಳೋಣವೆಂದು ಅಲ್ಲಿ ಬೆಳೆದುನಿಂತ ಹುತ್ತಿನೊಳಗೆ ವಿಷ್ಣು ರಾಮನಾಗಿ ಹುಟ್ಟುವ ಗುಟ್ಟು ಊದಿ ಬಿಡುತ್ತಾನೆ. ಆ ಹುತ್ತು ಬೇಟೆಗಾರನೊಬ್ಬ ತಪಸ್ಸು ಮಾಡುವಾಗ ಅವನ ಮೇಲೆ ಬೆಳೆದಿರುತ್ತದೆ. ಹುತ್ತಿನೊಳಗಿದ್ದ ಬೇಟೆಗಾರ ಈ ಮೊದಲು ಪ್ರಾಣಿ ಗಳನ್ನು ಬೇಟೆಯಾಡುತ್ತಿರುತ್ತಾನೆ. ಯಾರೋ ಪ್ರಾಣಿ ಹಿಂಸೆ ಯೋಗ್ಯವಾದುದಲ್ಲ. ಆದ್ದರಿಂದ ನೀನು

ತಪಸ್ಸನ್ನಾಚರಿಸಿ ಮುಕ್ತಿ ಹೊಂದು ಎಂದು ಹೇಳಿಕಳಿಸಿರುತ್ತಾರೆ. ನಾರದನ ಈ ಗುಟ್ಟು ಬೇಟೆಗಾರನ ಕಿವಿಯಲ್ಲಿ ಬಿದ್ದ ತಕ್ಷಣ ಆತ ಎಚ್ಚೆತ್ತು ರಾಮನ ಅವತಾರದ ರಾಮಾಯಣ ಕಥೆಯನ್ನು ಬರೆದು ವಾಲ್ಮೀಕಿಯಾದನೆಂದು ಇಲ್ಲಿ ಜನಪದ ನಾಟಕಕಾರರು ಹೇಳುವರು. ರಾಮಾಯಣ ನಾಟಕ ಹೇಗೆ ಹುಟ್ಟಿತು? ಎಂಬ ಪ್ರಶ್ನೆಗೆ ಜನಪದರು ಕಂಡುಕೊಂಡ ಉತ್ತರವಿದು. ಈ ಕಥೆಯನ್ನೇ ಇಲ್ಲಿನ ಶಿಕ್ಷಕರು ಮುಖ್ಯವಾಗಿಟ್ಟು ಕೊಂಡು ನಾಟಕ ರಚಿಸಿದ್ದಾರೆ. ಇದೇ ಶಿಕ್ಷಕರು ರಚಿಸಿದ 'ಶ್ರೀ ಶರಣಬಸವೇಶ್ವರ ಚರಿತ್ರೆ' ಎಂಬ ಇನ್ನೊಂದು ನಾಟಕದಲ್ಲಿ ಕಲಬುರ್ಗಿಯ ಶರಣಬಸವೇಶ್ವರ ಚರಿತ್ರೆಯನ್ನು ಹೇಳುತ್ತಾ ಕನ್ನಡನಾಡಿನ, ಕನ್ನಡ ಭಾಷೆಯ ಪರಿಚಯವನ್ನು ಮಾಡುತ್ತಾರೆ. ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ಕನ್ನಡ ನಶಿಸುತ್ತಿದ್ದ ಸಂದರ್ಭದಲ್ಲಿ ಕನ್ನಡವನ್ನು ಉಳಿಸಲು ಈ ಜನಪದ ನಾಟಕಕಾರ ಈ ಪೌರಾಣಿಕ ನಾಟಕವನ್ನು ಮಾಧ್ಯಮ ವಾಗಿಸಿಕೊಂಡರು.

ಈ ಎರಡು ನಾಟಕಗಳು ರಚನೆಗೊಂಡಿದ್ದು ತೆಲುಗು ಭಾಷೆಯಲ್ಲಿ, ರಚಿಸಿದ್ದು ಕನ್ನಡ ಜನಪದ ನಾಟಕಕಾರ. ಇವರ ವಾಸಸ್ಥಳ ಕರ್ನಾಟಕ ಗಡಿಯೊಳಗಿನ ಗ್ರಾಮ, ಹೀಗಿದ್ದರೂ ಅವರು ತೆಲುಗು ಭಾಷೆಯಲ್ಲಿ ನಾಟಕಗಳನ್ನು ಕಟ್ಟಿ ಪ್ರದರ್ಶಿಸಬೇಕಾದರೆ ಅಲ್ಲೆಲ್ಲ ತೆಲುಗು ಭಾಷೆಯ ಪ್ರಭಾವ ಎಷ್ಟಿತ್ತೆಂದು ತಿಳಿಯಬಹುದು. ಇವರು ರಚಿಸಿದ ಭಾಷಾಮಾಧ್ಯಮ ತೆಲುಗು ಆದರೂ ಅದರಲ್ಲಿನ ಕಥಾವಸ್ತು ಕನ್ನಡ. ಸಂದರ್ಭ ಬಂದ ಕಡೆಗಳಲ್ಲೆಲ್ಲ ಕನ್ನಡಿಗರ, ಕನ್ನಡದ ಪರಿಚಯವನ್ನು ಮಾಡುತ್ತಲೇ ನಾಟಕವನ್ನು ರಚಿಸಿದ್ದಾರೆ.

**೩.೪. ಜನಪದ ತತ್ವಪದ ಸಾಹಿತ್ಯ**

ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಯ ಪುಟಗಳನ್ನು ತಿರುವಿದರೆ ಅನೇಕ ಕವಿಗಳು, ರಾಜ ಮಹಾರಾಜರು, ಸಾಧಕರು, ಸುಧಾರಕರು, ಕಲಾವಿದರು, ವೀರರು, ವೀರಾಗ್ರಣಿಗಳು, ಸೂಫಿಸಂತರು, ಶರಣರು ಕಂಡುಬರುತ್ತಾರೆ. ಇವರೆಲ್ಲ ತಮ್ಮ ತಮ್ಮ ತಿಳುವಳಿಕೆ, ಸಮಾಜಕ್ಕೆ ಏನು ಬೇಕು, ನಾವೇನು ಸಮಾಜಕ್ಕೆ ಕೊಡಬಹುದು ಎಂಬ ಆಲೋಚನೆಯಿಂದ ಅತ್ಯಂತ ನಿಷ್ಠೆಯಿಂದ ದುಡಿದು ನಾಡಿಗಾಗಿ ತಮ್ಮನ್ನೇ ಅರ್ಪಿಸಿಕೊಳ್ಳಲು ಸಿದ್ಧರಾಗಿದ್ದರು. ಕನ್ನಡ ನಾಡು ಇಂದು ಸುಂದರ ನಾಡಾಗಿ ಉಳಿಯಲು ಇಂಥವರ ನಿಸ್ವಾರ್ಥ ಸೇವೆಯೇ ಕಾರಣ. ಇವರಿಂದಲೇ ಕನ್ನಡ ನಾಡಿನ ಸಾಂಸ್ಕೃತಿಕತೆಯ ಪರಂಪರೆ ಮುಂದು ವರೆದುಕೊಂಡು ಬಂದಿರುತ್ತದೆ.

ಉತ್ತರ ಕರ್ನಾಟಕದಲ್ಲಿ ನಡೆದ ಹನ್ನೆರಡನೆಯ ಶತಮಾನದ ವಚನ ಚಳುವಳಿ ಇಲ್ಲಿನ ಜನರ ಆಲೋಚನೆಯ ದಿಕ್ಕನ್ನೇ ಬದಲಾಯಿಸಿದ ಒಂದು ಮಹತ್ವದ ಘಟ್ಟ. ಸಮಾಜದಲ್ಲಿ ಮೇಲು-ಕೀಳು, ಸಂಪತ್ತಿನ ಕೇಂದ್ರೀಕರಣ, ಅಧಿಕಾರದ ಹತಾಶೆ ಇವುಗಳೆಲ್ಲದರಿಂದ ರೋಸಿಹೋದ ಜನ ಈ ಚಳುವಳಿಯನ್ನು ಹುಟ್ಟು ಹಾಕಿದರು. ಜನಸಾಮಾನ್ಯರ ಮತ್ತು ಕೆಳವರ್ಗದವರ ಆತ್ಮವಿಶ್ವಾಸಕ್ಕೆ ಹೊಸ ಬೆಳಕನ್ನು ನೀಡಿದ ಈ ಕ್ರಾಂತಿಘಟ್ಟ ಮೊಟ್ಟಮೊದಲಾಗಿ ಜನ ಭಾಷೆಯನ್ನು ಸಾಹಿತ್ಯದಲ್ಲಿ ಬಳಸಿಕೊಳ್ಳುವುದರ ಜೊತೆಗೆ ಅದಕ್ಕೆ ಮಾನ್ಯತೆಯನ್ನು ನೀಡುವುದರ ಮುಖಾಂತರ ವೈಚಾರಿಕ ಚಿಂತನೆಯ ಅರಿವನ್ನು ಮೂಡಿದರು. ಬಸವಾದಿ ಶರಣರ ಮಾರ್ಗದರ್ಶನವು ವಚನ ಚಳುವಳಿಯನ್ನು ನೈತಿಕತೆಯ ಕಡೆಗೆ ಕರೆದೊಯ್ಯುತ್ತದಲ್ಲದೆ

ಲಕ್ಷಾಂತರ ಜನರು ಇದರಿಂದ ಆಕರ್ಷಿತರಾದರು. ಹನ್ನೆರಡನೆಯ ಶತಮಾನದ ಕಾಲಕ್ಕೆ ಅತ್ಯಂತ ಪ್ರಗತಿಪರವಾಗಿದ್ದ ಈ ಪಂಥ ನಂತರದ ದಿನಗಳಲ್ಲಿ ಒಂದು ಧರ್ಮ, ಒಂದು ಜಾತಿಯಾಗಿ ಮಾರ್ಪಟ್ಟು ಕೆಲವು ಕಟ್ಟುಪಾಡುಗಳನ್ನು ವಿಧಿಸಿಕೊಂಡು ತನ್ನ ಕಂದಕವನ್ನು ತಾನೇ ತೋಡಿಕೊಂಡಾಗ, ಬೇಸತ್ತ ಇತರ ಜನರು ಈ ಒಕ್ಕೂಟದಿಂದ ಸಿಡಿದು ಮೊದಲ ಬಾರಿಗೆ ಬೀದಿಗೆ ಬಂದು, ತದನಂತರದ ಅನಿರೀಕ್ಷಿತ ಸೋಲಿನಿಂದಾಗಿ ತಮ್ಮ ಮೂಲ ಸಿದ್ಧಾಂತ ಆಶಯವನ್ನು ಮರೆತು ಬಿಟ್ಟರು. “ಶರಣರ ಪ್ರಭಾವ ಈ ನೆಲದ ಮೇಲೆ ಜೀವಂತ ತೊರೆಯಾಗಿ ಹರಿದ ಕಾರಣ ಅವರ ಚರಿತ್ರೆ ಪ್ರಾಂತ್ಯಗಳಲ್ಲಿ ಪ್ರವಹಿಸಿ, ಗ್ರಾಮಗಳಲ್ಲಿ ವ್ಯಾಪಿಸಿ, ವ್ಯಕ್ತಿ ವ್ಯಕ್ತಿಗಳ ಹೃದಯ ಹೊಲವನ್ನು ಹಸಿಗೊಳಿಸಿ ಮುನ್ನಡೆಯಿತು. ಹೀಗಾಗಿ ಒಂದೊಂದು ಪ್ರಾಂತ್ಯ-ಗ್ರಾಮ-ವ್ಯಕ್ತಿಗಳು ನಮಗೆ ತೃಪ್ತಿಯಾಗುವ ರೀತಿಯಲ್ಲಿ ಶರಣರನ್ನು ಕೊಂಡಾಡಿದರು. ಅವರ ಚರಿತ್ರೆಗೆ ಅನೇಕ ತಿರುವುಗಳನ್ನು ಕಲ್ಪಿಸಿದರು. ಇದರ ಫಲವಾಗಿ ಶರಣರನ್ನು ಕುರಿತು ಐತಿಹ್ಯಗಳು ಸಾವಿರ ವಿಧದಲ್ಲಿ ಬೆಳೆದು ನಿಂತು, ಇವುಗಳಲ್ಲಿಯ ಕೆಲಮಟ್ಟಿನ ಸತ್ಯವು ಸಂಶಯಕ್ಕೆ ಎಡೆಮಾಡಿತು.”[೧೯]

ವಚನ ಚಳುವಳಿ ಘಟ್ಟದ ನಂತರ ಈ ಭಾಗದಲ್ಲಿ ಮುಸ್ಲಿಂ ಆಳ್ವಿಕೆ ಪ್ರಾರಂಭವಾಗಿ ಕನ್ನಡಿಗರ ಸಾಂಸ್ಕೃತಿಕತೆಯ ಹರಿವು ಬತ್ತುತ್ತಾ ಹೊರಟಿರುವುದನ್ನು ತತ್ವಪದಕಾರರು ಮತ್ತು ದಾಸರು ಅವಲೋಕಿಸಿ ತಮ್ಮ ವಿಭಿನ್ನ ಮಾದರಿಯಲ್ಲಿ ಮತ್ತೆ ಇಂತಹ ಸಂಘಟನೆಯನ್ನು ಸಂಘಟಿಸಿದರು. ವಚನ ಚಳುವಳಿಯ ನಂತರದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕತ್ತಲ ಯುಗವೆಂದು ಗುರುತಿಸುವ ೧೬ನೇ ಶತಮಾನದಲ್ಲಿ ತತ್ವಪದ ಸಾಹಿತ್ಯ ಈ ತೊಡಕನ್ನು ಕಳೆದು ಮತ್ತೊಮ್ಮೆ ಸಾಹಿತ್ಯ ಚರಿತ್ರೆಗೆ ಸುವರ್ಣ ಯುಗವನ್ನು ತಂದಿರಿಸಿತು. ಉತ್ತರ ಕರ್ನಾಟಕದಲ್ಲಿ ಮುಸ್ಲಿಂಮರ ಆಡಳಿತದಿಂದ ಕನ್ನಡ ಭಾಷೆ ಮತ್ತು ಭಾಷಿಕರ ಹಾಗೂ ಇಲ್ಲಿನ ಸ್ಥಳೀಯ ಸಂಸ್ಕೃತಿ ನಿರಂಕುಶ ಪ್ರಭುತ್ವದ ಅಡಿಯಲ್ಲಿ ಉಸಿರುಗಟ್ಟಿದ್ದವು. ಇಂತಹ ಸಂದರ್ಭದ ಅನುಭಾವದ ನೆಲೆಯಲ್ಲಿ ಹುಟ್ಟಿಕೊಂಡ ಶರಣರ ಸಾಹಿತ್ಯವೇ ತತ್ವಪದಗಳಾದವು.

ಶಿಷ್ಟ ಸಾಹಿತ್ಯದಲ್ಲಿ ತತ್ವಪದ, ಅನುಭಾವದ ಹಾಡುಗಳೆಂದು ಕರೆಯಲ್ಪಡುವ ಇವುಗಳನ್ನು ಜನಪದರು ಕೈವಲ್ಯಸಾಹಿತ್ಯ, ಭಜನೆಯ ಹಾಡುಗಳೆಂದು ಕರೆಯುತ್ತಾರೆ. ಸಾಮಾನ್ಯ ಮನುಷ್ಯನ ದಿನನಿತ್ಯದ ಅನುಭವ, ಇಂದ್ರಿಯಜನ್ಯ ಜ್ಞಾನ, ಅನುಭಾವಿಯ ಸಾಧನಾ ಬಲದಿಂದ ಸಿದ್ಧಿಸುವ ಅತೀಂದ್ರಿಯವಾದ ಆಧ್ಯಾತ್ಮಿಕ ಜ್ಞಾನ ಅನುಭಾವ ಎಂಬ ಹೆಸರಿನಿಂದ ವ್ಯವಹರಿಸಲ್ಪಡುತ್ತದೆ. ಅನುಭಾವ ಪರಮಾತ್ಮ ಸಾಕ್ಷಾತ್ಕಾರದ ತತ್ವ. “ಅನುಭಾವದ ಹಾಡುಗಳನ್ನು ನಮ್ಮ ನಾಡಿನ ಜನಪದರು ತುಂಬಾ ಆತ್ಮೀಯ ಹೃದಯದಿಂದ ಸ್ವಾಗತಿಸಿದರು. ಸ್ವಾಭಿಮಾನದಿಂದ ತಲೆ ಎತ್ತಿ ನಿಂತು, ಗೌರವಾಧಾರಗಳಿಂದ ಅವುಗಳನ್ನು ಸ್ತುತಿಸಿದರು. ಓದುಬರಹ ಬಾರದ ಜನಪದರು ಶಾಶ್ವತವಾಗಿ ತತ್ವಪದಕಾರರನ್ನು ತಮ್ಮ ಬಾಳಿನ ಉಸಿರಾಗಿ, ಜೀವಾಳವಾಗಿ, ಆತ್ಮದ ಚೇತನವಾಗಿ ಅನುಭಾವವಾಗಿ ಅಪ್ಪಿಕೊಂಡರು, ಒಪ್ಪಿಕೊಂಡರು. ತಮ್ಮ ಸಂತಸದ ಬದುಕಿಗೆ ಜೀವಂತಿಕೆ ತಂದಿತ್ತ ಈ ಅನುಭಾವಗಳನ್ನು ಹೃದಯಾಂತಃಕರಣದಿಂದ ಹಾಡಿದರು. ತನು-ಮನ-ಭಾವ ತುಂಬಿ ಓಲಾಡಿದರು. ಜನಪದರ ಹೃದಯದಿಂದ ಮೂಡಿ ಹೊರಹೊಮ್ಮಿದ ಈ ತತ್ವಪದಗಳು ಲಾವಣಿಯಾಗಿ, ಹಂತಿಪದವಾಗಿ, ಬೀಸುಕಲ್ಲಿನ ಹಾಡಾಗಿ, ಗೀಗಿ ಪದಗಳಾಗಿ, ಭಜನೆಯ ಹಾಡುಗಳೆಂಬ ಪ್ರಕಾರಗಳಲ್ಲಿ ಅಭಿವ್ಯಕ್ತವಾದವು.”[೨೦]

ಸಾಮಾನ್ಯವಾಗಿ ತತ್ವಪದಗಳನ್ನು, ಭಜನೆಯ ಹಾಡುಗಳೆಂದು ಜನಸಾಮಾನ್ಯರು ಕರೆಯುವುದು ರೂಢಿಯಲ್ಲಿದೆ. ಜನಸಾಮಾನ್ಯರು ಈ ತತ್ವಪದಗಳನ್ನು ತಮ್ಮ ಬಿಡುವಿನ ವೇಳೆಯಲ್ಲಿ ಹಾಡುತ್ತಾರೆ. ತಮ್ಮ ದಿನನಿತ್ಯದ ಕೆಲಸಗಳನ್ನು ಮುಗಿಸಿಕೊಂಡ ಮೇಲೆ ವಿಶೇಷವಾಗಿ ಸಂಜೆ ದೇವಸ್ಥಾನ, ಚಾವಡಿ, ಊರಿನ ಹಿರಿಯರ ಮನೆಯ ಹೊರಕಟ್ಟೆಯ ಮೇಲೆ, ದೊಡ್ಡ ದೊಡ್ಡ ಗಿಡಗಳ ಕೆಳಗೆ ಕುಳಿತು ಹಾಡುತ್ತಾರೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಪರ ಊರುಗಳಿಗೂ ಹೋಗಿ ತಮ್ಮ ಅನುಭವದ ಈ ಹಾಡುಗಳನ್ನು ಹಾಡುವುದರ ಜೊತೆಗೆ ಅಲ್ಲಿನ ಸ್ಥಳೀಯ ಭಜನಾ ಮಂಡಳಿಗಳ ಮೆಚ್ಚುಗೆ ಪಡೆದು ಅವರ ಹಾಡುಗಳನ್ನು ಇವರು ಬಳಸುತ್ತಾರೆ. ಈ ತತ್ವಪದ, ಭಜನೆಯ ಹಾಡುಗಳನ್ನು ಹಬ್ಬ-ಹರಿದಿನಗಳಲ್ಲಿ ಹಾಡುವುದರ ಜೊತೆಗೆ, ಸಾವಿನ ಸಂದರ್ಭದಲ್ಲಿಯೂ ಹಾಡಿ ನೊಂದ ಮನಸ್ಸುಗಳಿಗೆ ಸ್ವಾಂತನ ನೀಡುತ್ತಾರೆ. ತಮ್ಮ ಜೀವನದ ಅನುಭವಗಳನ್ನು, ಅನುಭಾವ ಮಾಡಿಕೊಂಡು ನುಡಿದಂತೆ ನಡೆದು ಪದ ಕಟ್ಟಿ ಹಾಡಿ ತಾವು ಕಂಡುಂಡ ಸತ್ಯದ ಅನುಭವಗಳನ್ನು ಪದ ಕಟ್ಟಿ ನೀತಿಯ ಮೂಲಕ ತೋರಿಸಿದ್ದರಿಂದಲೇ ಇವರು ಅನುಭಾವಿ ಗಳಾದರು. ಆ ಅನುಭವ ಯಾರಿಗೂ ತಿಳಿಯಲಾರದ್ದು ಅನುಭವಿಸಿದ, ಅನುಭವಿಸಲು ಹಾತೊರೆಯುವವರಿಗೆ ಮಾತ್ರ ಇದರ ರಮ್ಯತೆ ಗೊತ್ತಾಗುತ್ತದೆ. ಜೀವಾತ್ಮ-ಪರಮಾತ್ಮನೊಂದಿಗೆ ಸಮರಸಗೊಂಡದ್ದು ಒಂದು ಅನುಭಾವವಾಗುತ್ತದೆಯಲ್ಲ ಅದೇ ಅಮೃತತತ್ವ. ಈ ಜೀವಾತ್ಮ-ಪರಮಾತ್ಮ-ಅಮೃತತತ್ವಗಳಿಂದ ಮುಕ್ತಿ ಪಡೆಯಲು ಸಾಧ್ಯವಾಗುತ್ತದೆ. ಅದು ಅನುಭವದಂತಹ ಮಾರ್ಗದಿಂದ ಮಾತ್ರ ಸಾಧ್ಯ.

ಈ ತತ್ವಪದ, ಭಜನೆಯ ಹಾಡುಗಳು ಗ್ರಂಥಸ್ಥ ರೂಪದಲ್ಲಿ ಮೂಡಿ ಬರದೇ, ಅವು ಸರಳವಾಗಿ ಯಾವ ನಿರ್ಬಂಧಗಳಿಲ್ಲದೆ ಬದುಕಿನ ತಿಳುವಳಿಕೆಯನ್ನು ಅರಿಯಲು ಸಾಧ್ಯವಿದೆ ಎಂಬುದನ್ನು ಪ್ರತಿಪಾದಿಸುವಂಥದ್ದು. ತತ್ವಪದಗಳಿಗೆ ನಿರ್ದಿಷ್ಟ ಭಾಷೆಯ ಅವಶ್ಯಕತೆಯಿಲ್ಲ. ಆಯಾ ಪ್ರದೇಶದ ಪ್ರಾದೇಶಿಕ ಭಾಷಾಶೈಲಿಯಲ್ಲಿ ಸರಳವಾಗಿ ಹಾಡಲ್ಪಡುತ್ತದೆ. ಶಿಷ್ಟ ಸಾಹಿತ್ಯದ ಮಾರ್ಗ ಕ್ರಮೇಣ ಸೋತು ನಿಂತಾಗ ಅದಕ್ಕೆ ಪ್ರೇರಕ ಶಕ್ತಿಯನ್ನು ತುಂಬಿ ಮುನ್ನಡೆಸುವುದು ಜನಪದ ಭಾಷೆಯೇ. ಅಂತಲೇ ವಚನ ಚಳುವಳಿಯ ಸಂದರ್ಭದಲ್ಲಿ ಶಿಷ್ಟ ಸಾಹಿತ್ಯ ಸೋತಾಗ ಜನಪದರ ಸಾಹಿತ್ಯವೇ ತಾಯಿಯ ಸ್ಥಾನದಲ್ಲಿ ನಿಂತು ಶಿಷ್ಟ ಸಾಹಿತ್ಯಕ್ಕೆ ಮತ್ತೇ ನವಚೈತನ್ಯ ನೀಡಿತು. ಅಂತಹ ಸಾಲಿನಲ್ಲಿ ತತ್ವಪದ ಸಾಹಿತ್ಯದ ಪ್ರಕಾರವು ಒಂದು.

ಜನಪದ ಸಾಹಿತ್ಯದಲ್ಲಿ ಮೂಡಿ ಬಂದಿರುವ ತತ್ವಪದ ಸಾಹಿತ್ಯ, ಭಜನೆಯ ಹಾಡುಗಳನ್ನು ರಚಿಸಿದ ಅನುಭಾವಿಗಳು ಯಾವ ಮತ, ಪಂಥ, ಗಡಿಗಳಿಗೆ ಸಂಬಂಧಿಸಿದವರಾಗದೇ, ತಮ್ಮ ಅನುಭಾವದ ತತ್ವಪದಗಳನ್ನು ಹಾಡುತ್ತಾ ಊರಿಂದ ಊರಿಗೆ ಅಲೆಯುವರು ಏಕತಾರಿ ಮತ್ತು ಚಿಟಿಗಿಯನ್ನು ಬಳಸುತ್ತಿದ್ದ, ಅನುಭಾವಿಗಳಿಗೆ ಇವೆ. ವಾದ್ಯ ಪರಿಕರಗಳು, ಇವುಗಳ ಸಹಾಯದಿಂದ ಅನುಭಾವಗಳನ್ನು ಹೊರಹೊಮ್ಮಿ ಸುತ್ತಾರೆ. ಯೋಗಿಯೊಬ್ಬ ತನ್ನ ಶರೀರದಲ್ಲಿ ಮಿಡಿಯುವ ನರನಾಡಿಗಳನ್ನು ಗಮನಿಸಬಲ್ಲ. ಪ್ರಾಕೃತಿಕವಾಗಿ ಹೊರಹೊಮ್ಮುವ ಗಾಯನ ಸ್ವರೂಪವನ್ನು ಅದರೊಡನೆ ಆಧ್ಯಾತ್ಮಗೊಳಿಸುವ ಸಹಜತೆಯನ್ನು ಪಡೆಯಬಲ್ಲ ವಾದ್ಯಗಳು, ಸದಾ ದೇಹ ಮನಸ್ಸುಗಳೆರಡರ ಸಂಗಮ. ಹೀಗಾಗಿಯೇ ತತ್ವಪದಕಾರರು ತಾವು ನುಡಿಸುವ ಏಕತಾರಿಯನ್ನು ದೇಹಕ್ಕೆ ಹೋಲಿಸುತ್ತಿದ್ದರು. ತಾವು ಹಾಡುವಾಗ ಬಳಸುವ ವಾದ್ಯ ಪರಿಕರ ಏಕತಾರಿಯನ್ನು

ಮೂರು ಅಥವಾ ನಾಲ್ಕು ಅಡಿಗಳಷ್ಟು ಉದ್ದದ ಬಿದಿರಿನ ಗಳುವೇ ದೇಹ, ಕುಂಬಳಕಾಯಿಯ ಒಣ ಬುರುಡೆಯೇ ತಲೆ, ಇದರಲ್ಲಿ ಬಂಧಿತವಾದ ತಂತಿಯೇ ಜೀವ. ಇದರಿಂದ ಮೂಡಿ ಬರುವ ಧ್ವನಿಯೇ ಉಸಿರು ಎಂಬ ಸಾಂಕೇತಿಕ ಸಂಬಂಧವನ್ನು ಇದರ ಜೊತೆಗೆ ಇಟ್ಟುಕೊಂಡಿದ್ದರು. ತತ್ವಪದಕಾರರೆಲ್ಲರ ಆಶಯ ಒಂದೇ ಆಗಿದ್ದರೂ, ಅವರೆಲ್ಲ ಒಂದೇ ರೀತಿಯ ಹಿನ್ನಲೆಯಲ್ಲಿ ಬಂದವರಾಗಿರದೇ, ಬೇರೆ ಬೇರೆ ವರ್ಗಗಳಿಂದ ಬಂದವರಾಗಿದ್ದರು. ೧. ಬ್ರಹ್ಮಚಾರಿ ಶಿವಯೋಗಿಗಳು ೨. ಸಂಸಾರದಿಂದ ವಿಮುಖ ರಾದವರು ೩. ಸಂಸಾರಿಗಳು.

"೧. ಬ್ರಹ್ಮಚಾರಿಗಳು : ಓದಿಕೊಂಡವರು ಸನ್ಯಾಸಿಗಳು. ಮಠದ ಅಧಿಪತಿಗಳು ಅನುಕೂಲಸ್ಥರು ಆದ ಕವಿಗಳು - ಇವರು ಕೈವಲ್ಯ ಪದ್ಧತಿಗಳಂತಹ ಕೃತಿಗಳನ್ನು ರಚಿಸಿರುತ್ತಾರೆ. ಶಿವನ ಮತ್ತು ಗುರುವಿನ ಸ್ತುತಿ, ಆಧ್ಯಾತ್ಮಿಕ ಅನುಭಾವದ ದಟ್ಟ ಛಾಯೆ ಇವರ ಹಾಡುಗಳಲ್ಲಿ ಕಾಣುತ್ತದೆ.

**೨. ಸಂಸಾರದಿಂದ ವಿಮುಖರಾದವರು :** ಮೊದಲು ಸಂಸಾರಿಗಳಾಗಿದ್ದು, ನಂತರ ಕೌಟುಂಬಿಕ ತೊಂದರೆಗಳಿಂದಾಗಿ ಮನೆಯಿಂದ ದೂರಾಗಿರುತ್ತಾರೆ. ಅನಿವಾರ್ಯವಾಗಿ ಕಾವಿ ವೇಷ ಧರಿಸಿಕೊಂಡು, ಕೈಯಲ್ಲಿ ಏಕತಾರಿ ಹಿಡಿಯಬೇಕಾದ ಪ್ರಸಂಗಗಳಿಗೆ ಗುರಿಯಾಗುತ್ತಾರೆ. ಇವರಿಗೆ ಕಾಡುವ ಪ್ರಶ್ನೆಗಳೇ ಸಂಸಾರ ಮತ್ತು ದೇಹಗುಣಗಳು. ಈ ವರ್ಗದ ಜನ ರಚಿಸಿದ ಹಾಡುಗಳನ್ನೇ ನಾವು ತತ್ವಪದಗಳೆಂದು ಕರೆಯಬಹುದು.

**೩. ಸಂಸಾರಿಗಳು :** ಉತ್ತಮ ಸಂಸಾರಿಗಳು, ಹಳ್ಳಿಗಳಲ್ಲಿ ಹೆಂಡತಿ ಮಕ್ಕಳೊಂದಿಗೆ ಜೀವಿಸುತ್ತಿದ್ದು, ಇವರು ಒಂದನೇ ಹಾಗೂ ಎರಡನೆ ಗುಂಪಿನ ಜನ ಸೃಷ್ಟಿಸುವ ಪದಗಳ ನಮೂನೆಯ ಕೆಲ ಹಾಡುಗಳನ್ನು ರಚಿಸಿದರೂ ಮುಖ್ಯವಾಗಿ ಇವರು ಚರಿತ್ರೆ, ವ್ಯಕ್ತಿಮಹಿಮೆ, ಪ್ರಸ್ತುತ ಬದುಕಿನ ಸಮಸ್ಯೆ- ಮುಂತಾದವುಗಳನ್ನು ಕುರಿತು ಹಾಡುಗಳನ್ನು ಬರೆದಿರುತ್ತಾರೆ."[೨] ಇವರಿಂದಾಗಿಯೇ ಅನುಭಾವ ಪದಗಳಿಗೆ ಭಜನೆಯ ಹಾಡುಗಳು ಎಂಬ ಹೆಸರು ಪ್ರಚಲಿತಕ್ಕೆ ಬಂದದ್ದು.

ಈ ಮೇಲಿನ ಮೂರು ಗುಂಪುಗಳಲ್ಲಿಯೇ ಈ ಅಧ್ಯಯನದ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ೧. ಕೂಡಲೂರು ಬಸವಲಿಂಗಪ್ಪ ೨. ಐನೂಲಿ ಕರಿಬಸವಾರ್ಯ ೩. ಮೋಟನಳ್ಳಿ ಹಸನಸಾಬ ೪. ರಾಚೋಳದ ಮುರುಘೇಂದ್ರಸ್ವಾಮಿ ೫. ರಾಮಲಿಂಗ ೬. ಕೋನಾಪುರ ರಾಮಪ್ಪ ೭. ನಿಂಬೋಳಿ ತಿಪ್ಪಣ್ಣ ೮. ಕಲ್ಲಂಬ ರುಕ್ಮುದ್ದೀನ ಸಾಬ ೯. ಸಿದ್ದಾಪುರದ ನರಸಪ್ಪ ಸಾಧು ೧೦. ರಾಚೋಟಿ ವೀರಸ್ವಾಮಿ ೧೧. ಬಾಬಯ್ಯ ಈ ಎಲ್ಲ ತತ್ವಪದಕಾರರನ್ನು ಈ ಮೇಲಿನ ಗುಂಪುಗಳಲ್ಲಿ ನಾವು ಗುರುತಿಸಬಹುದು.

ಈ ತತ್ವಪದಕಾರರ ಸಂಕ್ಷಿಪ್ತ ಪರಿಚಯ ಮತ್ತು ಅವರು ಹಾಡುತ್ತಿದ್ದ ಕನ್ನಡ ಮತ್ತು ತೆಲುಗು ಭಾಷೆಯ ಕೆಲವು ಹಾಡುಗಳನ್ನು ಇಲ್ಲಿ ಗಮನಿಸಲಾಗಿದೆ. ಈ ಹಾಡುಗಳ ವಿಶ್ಲೇಷಣೆ ಇಲ್ಲಿ ಮುಖ್ಯವೆನಿಸದೆ ಈ ಎರಡು ಭಾಷೆಗಳಲ್ಲಿ ತತ್ವಪದಗಳನ್ನು ರಚಿಸಿದರು ಎಂಬುದನ್ನು ನೋಡುವುದಕ್ಕಾಗಿ, ಅವರು ರಚಿಸಿದ ಕನ್ನಡ ಮತ್ತು ತೆಲುಗು ಭಾಷೆಯ ತತ್ವಪದಗಳನ್ನು ಗಮನಿಸಿ, ತದನಂತರ ಎಲ್ಲ ತತ್ವಪದಕಾರರನ್ನೊಳಗೊಂಡಂತೆ, ಇವರೆಲ್ಲ ಈ ಗಡಿಭಾಗದಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳನ್ನು ಬಳಸಲು ಇವರ ಮೇಲಿನ ಭಾಷಿಕ ಒತ್ತಡ ಮತ್ತು ಪ್ರೇರಣೆಗಳಾವುವೆಂಬುದನ್ನು ವಿಶ್ಲೇಷಿಸಲಾಗಿದೆ.

ಕೂಡಲೂರು ಬಸವಲಿಂಗ ಶರಣ

ಬಳಿಚಕ್ರ-ಕೂಡಲೂರು ಗ್ರಾಮಗಳು ಆಂಧ್ರದ ಗಡಿಗಳಿಗೆ ಹೊಂದಿಕೊಂಡಿವೆ. ಉರ್ದು ಮತ್ತು ನಿಜಾಂ ಆಡಳಿತದ ಫಲವಾಗಿ ಆ ಸಂದರ್ಭದಲ್ಲಿ ಉರ್ದು ಪ್ರಭಾವ ದಟ್ಟವಾಗಿತ್ತು. ಈ ಕಾರಣವಾಗಿ ಬಸವಲಿಂಗಪ್ಪನವರಿಗೆ ಉರ್ದು ಮತ್ತು ತೆಲುಗು ಭಾಷೆ ಬರುತ್ತಿತ್ತು. ಇದನ್ನು ಅವರ ಪದಗಳಲ್ಲಿ ಕಾಣಬಹುದು. ಇದು ಒಂದು ರೀತಿಯ ಕೋಮುಸೌಹಾರ್ದತೆಯೂ ಹೌದು, ಭಾಷಾ ಸೌಹಾರ್ದತೆಯೂ ಹೌದು.

ಬಸವಲಿಂಗಪ್ಪನವರ ತಂದೆ-ತಾಯಿಗಳ ವೃತ್ತಿ ಕಾಯಿಪಲ್ಯೆ ಮಾರುವುದಾಗಿತ್ತು. ಇವರ ಹೆಸರು ಮಹಾದೇವಪ್ಪ, ಗಂಗಾಂಬೆ. ಇವರ ಊರು ಕಲಬುರ್ಗಿ ಜಿಲ್ಲೆಯ ಯಾದಗಿರಿ ತಾಲ್ಲೂಕಿನ ಬಳಿಚಕ್ರ ಎಂಬ ಗ್ರಾಮ. ಬಸವಲಿಂಗಪ್ಪನವರಿಗೆ ಓದು, ಬರಹ, ಒಲಿದು ಬರಲಿಲ್ಲ. ಅಯ್ಯನವರ ಮಠದ ಶಾಲೆಯಲ್ಲಿ ಗುರುಗಳಿಗೆ ಆಧ್ಯಾತ್ಮದ ಪ್ರಶ್ನೆ ಕೇಳುತ್ತಿದ್ದ ಬಸವಲಿಂಗಪ್ಪನವರಿಗೆ ಗುರುಗಳು ಉತ್ತರ ಕೊಡದೆ ತಡಬಡಿಸಿ ಇವರನ್ನು ಗದರಿಸಿ ಸುಮ್ಮನಾಗಿಸುತ್ತಿದ್ದರು. ೧೦ ವರ್ಷ ಕಳೆದರೂ ತಲೆಗೆ ವಿದ್ಯೆ ಹತ್ತದಿರುವುದರಿಂದ ಬಸವಲಿಂಗಪ್ಪನವರನ್ನು ಶಾಲೆ ಬಿಡಿಸಿದ ಮಹಾದೇವಪ್ಪ, ಗಂಗಾಂಬೆಯರು ದನಕಾಯಲು ಹಚ್ಚಿದರು.

ಬಳಿಚಕ್ರದಿಂದ ಸ್ವಲ್ಪ ದೂರದಲ್ಲಿಯ ಸಿದ್ದೇಶ್ವರ ಬೆಟ್ಟದ ಬಳಿ ದನಗಳನ್ನು ಮೇಯಲು ಹೊಡೆದು ಕೊಂಡು ಹೋಗಿ ಕಾಯುತ್ತಿದ್ದ ಬಸವಲಿಂಗಪ್ಪನವರ ಅಂತರಂಗದಲ್ಲಿ ಅದೇನೋ ತಳಮಳ, ಏನೋ ಹುಡುಕಾಟ? ಎಂದು ತಿಳಿಯದ ಮೂಕವೇದನೆ ಅವರನ್ನು ಕಾಡುತ್ತಲೇ ಇತ್ತು. ಇಂತಹ ಸಮಯದಲ್ಲಿ ಒಂದು ಅಚ್ಚರಿಯ ಸಂಗತಿ ದಿನವೂ ಇವರ ಕಣ್ಣೆದುರಿಗೆ ಘಟಿಸುತ್ತಿತ್ತು. ಬಸವಲಿಂಗಪ್ಪನವರು ದನಗಳನ್ನು ಕಾಯಲು ಬೆಟ್ಟದ ಬಳಿ ಹೋಗುತ್ತಿದ್ದಂತೆಯೇ ದನಗಳ ಜೊತೆಗೆ ಮತ್ತೊಂದು ಆಕಳು ಬಂದು ಸೇರಿಕೊಂಡು ಸಂಜೆಯವರೆಗೆ ಮೇಯ್ದು ಎಲ್ಲಿ ಹೋಗುತ್ತಿತ್ತೋ ಗೊತ್ತಾಗುತ್ತಿರಲಿಲ್ಲ. ಒಂದು ದಿನ ಆ ಆಕಳಿನ ಬಾಲ ಹಿಡಿದುಕೊಂಡೇ ಬಸಲಿಂಗಪ್ಪ ಹೊರಟರು. ಅದು ಸಿದ್ದೇಶ್ವರ ಬೆಟ್ಟದ ಗುಹೆಯ ಒಳಗೆ ಹೋಯಿತು. ಅಲ್ಲಿ ಕೆಲವು ಸಾಧುಗಳು ಧ್ಯಾನಕ್ಕೆ ಕುಳಿತಿದ್ದರು. ಸ್ವಲ್ಪ ಅಲ್ಲೇ ನಿಂತ ಬಸವಲಿಂಗಪ್ಪನವರು ಸಾಧುಗಳು ಕಣ್ಣು ತೆರೆದ ಮೇಲೆ ಅವರ ಬಳಿ ಹೋದರು. ಸಾಧುಗಳು 'ಯಾರು ನೀನು? ಏನು ಬೇಕು?' ಎಂದರು. 'ನಾನು ಬಸವಲಿಂಗ ನಿಮ್ಮ ಆಕಳು ನಮ್ಮ ದನಗಳ ಜೊತೆಗೆ ಬಂದು ಮೇಯ್ದು ಹೋಗುತ್ತಿತ್ತು. ನಾನು ನಿಮ್ಮ ಆಕಳನ್ನು ಕಾಯ್ದದಕ್ಕೆ ಕೂಲಿ ಬೇಡಲು ಬಂದಿದ್ದೇನೆ' ಎಂದರು. ಆಗ ಒಬ್ಬ ಸಾಧುಯೋಗಿ - 'ಓಹೋ! ನಿನಗೆ ಕೂಲಿ ಬೇಕೋ ಬಾ ಇಲ್ಲಿ' ಎಂದು ಬಸವಲಿಂಗಪ್ಪನವರ ತಲೆಯ ಮೇಲೆ ಹಸ್ತವನ್ನಿಟ್ಟು ನಾಲಗೆಯ ಮೇಲೆ ಪ್ರಣವ ಬೀಜಾಕ್ಷರಗಳನ್ನು ಬರೆದರು.

ಗುಹೆಯಿಂದ ಹೊರಬಂದ ಬಸವಲಿಂಗಪ್ಪ ತನ್ನ ಅಂತರಂಗದೊಳಗಿದ್ದ ತಳಮಳ, ಹುಡುಕಾಟಕ್ಕೆ ಕೊನೆಗೆ ಈ ರೀತಿ ಪರಿಹಾರ ಕಂಡುಕೊಂಡರು. ಇದರಿಂದಾಗಿ ಬಸವಲಿಂಗಪ್ಪನವರ ದಾರಿಯೇ ಬೇರಾಯಿತು. ಕಾಲ ಉರುಳತೊಡಗಿತು. ಮನೆಯವರು ವಯಸ್ಸಿಗೆ ಬಂದ ಬಸವಲಿಂಗಪ್ಪನವರಿಗೆ ಮದುವೆ ಮಾಡಿದರೆ

ಸರಿಹೋಗಬಹುದೆಂದು ಭಾವಿಸಿ ಒಲ್ಲೆ ಎಂದರೂ ಬಿಡದೆ ಬಲವಂತದಿಂದ ಮದುವೆ ಮಾಡಿದರು. ಮದುವೆಯ ನಂತರವೂ ಆಧ್ಯಾತ್ಮ ಚಿಂತನೆಗೆ ಒತ್ತು ಕೊಡುತ್ತಿದ್ದ ಇವರನ್ನು ವ್ಯಾಪಾರದಲ್ಲಾದರೂ ತೊಡಗಿಸಿದರೆ ಸರಿಹೋಗಬಹುದೆಂದು ಕೂಡಲೂರಿಗೆ ದಿನವೂ ಹೋಗಿ ಕಾಯಿಪಲ್ಯೆ ಮಾರಿಕೊಂಡು ಬರುವ ಕಾಯಕವನ್ನು ಹಚ್ಚಿದರು. ಕಾಯಕದಲ್ಲಿ ಕೂಡಲೂರಿಗೆ ಬಂದು ಹೋಗುತ್ತಿದ್ದ ಬಸವಲಿಂಗಪ್ಪನವರಿಗೆ ಅಕ್ಕಸಾಲಿಗರಾದ ತಿಪ್ಪಣ್ಣನವರ ಪರಿಚಯವಾಯಿತು. ಅವರಿಗೂ ಆಧ್ಯಾತ್ಮದ ಚಿಂತನೆಯಲ್ಲಿ ಆಸಕ್ತಿ ಇತ್ತು. ಹಾಗಾಗಿ ಬಸವಲಿಂಗಪ್ಪನವರು ಬಳಿಚಕ್ರದಿಂದ ತರುವ ಕಾಯಿಪಲ್ಯೆ ಬುಟ್ಟಿಯನ್ನು ಕೂಡಲೂರಿನ ಅಗಸೆಯಲ್ಲಿಟ್ಟು, ಜನರಲ್ಲಿ ತಮಗೆ ಎಷ್ಟು ಬೇಕೋ ಅಷ್ಟು ಕಾಯಿಪಲ್ಯೆ ತೆಗೆದುಕೊಂಡು ಅದಕ್ಕೆ ತಕ್ಕಂತೆ ಜೋಳ ಹಾಕಿ ಹೋಗಲು ಅರಿಕೆ ಮಾಡಿಕೊಂಡು ತಿಪ್ಪಣ್ಣನ ಮನೆ ಸೇರಿ ಅಧ್ಯಾತ್ಮದ ಚಿಂತನೆಗೆ ತೊಡಗಿದರು.

ತನ್ನೆಡೆಗೆ ಸ್ವಲ್ಪವೂ ಗಮನಹರಿಸದ ಬಸವಲಿಂಗಪ್ಪನವರ ಪತ್ನಿ ಜಗಳ ತೆಗೆದು ಅತ್ತೆ, ಮಾವ, ಗಂಡನೊಡನೆ ಗೋಳಿಟ್ಟಳು. ಕೊನೆಗೆ ಬಸವಲಿಂಗಪ್ಪನವರು 'ನಾನು ಹೇಳಿದಂತೆ ಕೇಳಿದರೆ ನಿನ್ನ ಜೊತೆಗೆ ಚೆನ್ನಾಗಿರುವೆ' ಎಂದರು. ಅದಕ್ಕೆ ಒಪ್ಪಿದ ಪತ್ನಿಯನ್ನು ಹೊರಗೆ ಕರೆದುಕೊಂಡು ಹೋಗಿ ರಸ್ತೆಯಲ್ಲಿಯೇ ಸಂಭೋಗಕ್ಕೆ ಕರೆದರು. ಇದರಿಂದ ಹೆದರಿದ ಪತ್ನಿ ಇವರನ್ನು ತೊರೆದು ತವರುಮನೆ ಸೇರಿದಳು. ಈ ಎಲ್ಲ ಬಂಧನಗಳನ್ನು ಕಳಚಿಕೊಂಡು ಬಸವಲಿಂಗಪ್ಪನವರು ಕೂಡಲೂರಿನ ತಿಪ್ಪಣ್ಣನವರ ಮನೆ ಸೇರಿಕೊಂಡು ಅಲ್ಲಿಯೇ ೧೦-೧೫ ವರ್ಷಗಳವರೆಗೆ ಕಾಲಕಳೆದ ನಂತರ ರಾಯಚೂರು ಜಿಲ್ಲೆಯ ಗೊಬ್ಬೂರಿನ ಸಮೀಪವಿರುವ ಖಾನಾಪುರ ಗ್ರಾಮದಲ್ಲಿ ೨೫ ವರ್ಷಗಳ ಕಾಲ ಇದ್ದು ತೀರಿಕೊಂಡರೆಂದು ತಿಳಿದುಬರುತ್ತದೆ.

**ಅಗಸರೋ ನಾವು ಅಗಸರೋ**

"ಅಗಸರೋ~ss~ ನಾವು ಅಗಸರೋ~ss~
ಮಾಸಿದರಿವೆಗಳ ಸೋಸಿ ಗಂಜಿ ಮಾಡುವಂಥ
ಅಗಸರೋ~ss~ ನಾವು ಅಗಸರೋ~ss~ ||ಪ||

ಊರ ಹೊರಗೆ ಬ್ರಹ್ಮಾಂಡವೆಂಬ ಅರವಿಯ ಬಳಸಿ
ಅರಿವು ಎಂಬೊ ಸೌಳು ಸುಣ್ಣವದರೊಳು ಕಲಸಿ
ಕುರುಹು ಪಿಂಡಾಂಡವೆಂಬೊ ಅರಿವೆಗಳ ಕುದಿಸಿ
ಮುರಿದು ಮೊಟ್ಟೆಯಕಟ್ಟಿ ಮುಂದಕ್ಕೆ ನುಡಿಯುವಂಥ ||೧||

ಹಿರಿ ತಾರಕ ಬ್ರಹ್ಮನ ಬಂಡೆ ನಿರ್ದಂಡೆ ಮಾಡಿ
ಮೂರು ಮೂರ್ತಿಗಳೆಂಬೊ ಏಟುಗಳನು ಹಾಕಿ
ಬೇರೆ ಪನ್ನೀರೊಳು ದೂರ ಸೆಳೆದು ಹಿಂಡು
ಭೇರಿ ನಾದ ಬಿಸಿಲಿನಲ್ಲಿ ಒಣಗಿಸುವಂಥ ||೨||

ಆರಿ ಒಣಗಿದ ಬಟ್ಟೆಗಳ ಮನೆಗೆ ತಂದು ನಾವು
ಮೂರು ಕೋಣೆಗಳ ಮಧ್ಯಸುತ್ತಿ ಇಡುವೆವು
ಧೀರ ಕೂಡಲೂರೇಶ ಬಂದು ಗುರುತಿಟ್ಟ ಬಳಿಕ
ಯಾರ ಬಟ್ಟೆಗಳನ್ನವರಿಗೆ ಕೊಟ್ಟು ಬಾಳುವಂಥ"[೨೨] ||೩||

**ಚೇಳು ಕಚ್ಚಿತವ್ವ**

ಚೇಳು ಕಚ್ಚಿತವ್ವ | ಹೇಳಲಿ ಯಾರಿಗವ್ವ ||ಪ||
ಅದು ಎಂಥ ಚೇಳು | ಅದಕೆ ಸಾವಿರ ಮಣಿಗಳು ||
ಕಚ್ಚಿತು ಕಿರಿ ಬೆರಳು | ತುಂಬಲು ಹೋಗಿದ್ದೆ ಕುರುಳು ||೧||

ಬಿಚ್ಚು ಲಡೆರೆ ಬಾಯಿ | ಕುಚ್ ಹೋಷ ನೈರಹಿ |
ಸಭ್ ಭೇದ ಜಲ್ಕೆಗಯಿ | ಸಬೂಬ ನಹಿಪಾಯಿ ||೨||

ಒಕ ತೇಲು ಕೊರಕ್ಯಾರೋ | ಎವರಕು ಚೆಪ್ಪೇರೋ |
ನೀತಿ ಯರಗದಾನಿಕು | ಪುಣ್ಯ ಮೊಸ್ತದಿರೋ ||೩||

ಪಂಡ್ರ ಪುರದ ಚೇಳವ್ವ | ಕೊಂಡಿ ಬಿಚ್ಚಿ ಕಚ್ಚಿತವ್ವ |
ಪುಂಡ ಕೂಡಲೂರೇಶನು | ಕಂಡು ಹಿಡಿದು ಬಿಟ್ಟಿನವ್ವ"[೨೩] ||೪||

"ನೀ ಇಂಟಿಲೋಪುಟಿ ಒಕ್ಕ
ಮಂಚಿ ನಾಗಪಾಮು ಉನ್ನದಿ ಅನ್ನಾ
ದಾನಕಿ ಪಾಲುಯೇಸ್ತೆ ನೀಕು
ಅಮೃತಾನ್ನಮು ದೊರಕುತುನ್ನದಿ ಅನ್ನಾ"[೨೪]

"ಒಕ ತೇಲು ಕೊರಕ್ಯಾರೊ
ಎವರಕು ಚೆಪ್ಪೇರೊ
ನೀತಿ ಎರಗದಾನಿಕು
ಪುಣ್ಯಮೊಸ್ತದಿರೊ."[೨೫]

ಬಳಿಚಕ್ರ-ಕೂಡಲೂರು ಗ್ರಾಮಗಳು ಕರ್ನಾಟಕಾಂಧ್ರದ ಗಡಿಭಾಗದಲ್ಲಿವೆ. ಗಡಿಗೆ ಹೊಂದಿಕೊಂಡಿರುವುದರಿಂದ ತೆಲುಗರು ಇವರ ಅನುಯಾಯಿಗಳಾಗಿದ್ದರು. ತಮ್ಮನ್ನು ಹುಡುಕಿಕೊಂಡು ಬಂದವರಿಗೆ ಅವರವರ ಭಾಷೆಯಲ್ಲಿ ಸಹಕರಿಸುವುದು ಇವರಿಗೆ ಅನಿವಾರ್ಯವಾಗಿತ್ತು. ಅಂತಲೇ ಅನುಭಾವದ ಸಾರ ತಿಳಿಸುವಲ್ಲಿ ಇವರಿಗೆ ಗಡಿ, ಭಾಷೆಗಳು ತೊಡಕಾಗಲಿಲ್ಲ.

**ಐನೂಲಿ ಕರಿಬಸವಾರ್ಯ**

ಚಿಂಚೋಳಿ ತಾಲೂಕಿನ ಐನೂಲಿಯಲ್ಲಿ ಕರಿಬಸವಾರ್ಯರು ಕ್ರಿ.ಶ. ೧೭೭೪ರಲ್ಲಿ ರುದ್ರಸ್ವಾಮಿ ಮತ್ತು ಗಿರಿಜಾದೇವಿ ದಂಪತಿಗಳ ಉದರದಲ್ಲಿ ಜನಿಸಿದರು. ಹಲವು ತತ್ವಪದಗಳನ್ನು ರಚಿಸಿರುವ ಕರಿಬಸವಾರ್ಯರು ಜೋಗುಳ ಪದ, ಸೋಬಾನದ ಪದ, ಲಾವಣಿಗಳಲ್ಲಿ ಹೀಗೆ ಒಟ್ಟು ೨೪ ಕೃತಿಗಳನ್ನು ರಚಿಸಿದ್ದು ಅವುಗಳಲ್ಲಿ 'ಕುಮಾರ ವಿಜಯ ವಿಳಾಸಂ' ಕೃತಿ ಪ್ರಮುಖವಾದದ್ದು. 'ಐನೆಲೆಯ ಚನ್ನವಿರೇಶ' ಎಂಬುದು ಈತನ ತತ್ವಪದಗಳ ಅಂಕಿತವಾಗಿದೆ.

"ನಿನ್ನೊಳು ನಿರ್ಮಳವಾಗಿ ||ಪ||

ನೀನಿದು ತಿಳಿಯಣ್ಣ
ನೀನೇ ಶಂಕರನಾದರೆ ನಿನಗೆ
ನಿಖಿಳ ಜನರು ಶಂಕರರಣ್ಣ
ನೀನೆ ಗರ್ವಿಯಾಗಿದ್ದರೆ ಜಗದೊಳು
ನಿಖಿಲರು ಗರ್ವಿಗಳಣ್ಣ ||೧||

ನಾನೆ ಬಲ್ಲಿದನೆಂದರೆ ನೀನು
ನಳಿನಜನ ಮಗಸೇನಣ್ಣ
ನಾನೆಂದುಬ್ಬುವ ನರನಿಗೆ
ಯಮಪುರ ನಾಯಕ ನರಕವಣ್ಣ ||೨||

ತನ್ನೊಳು ಕಪಟವಿದ್ದರೆ ಧರೆಯೊಳು
ತನಗೆಲ್ಲರು ಕಪಟಿಗರಣ್ಣ
ತನ್ನೊಳು ಹಿತವನು ಬಳಸಿದರಿಳೆಯೊಳು
ತನಗೆಲ್ಲರು ಹಿತರಣ್ಣ"[೨೮] ||೩||

**ಮೋಟನಹಳ್ಳಿ ಹಸನಸಾಹೇಬ**

ಮುಸ್ಲಿಂ ತತ್ವಪದಕಾರನಾದ ಮೋಟನಳ್ಳಿ ಹಸನಸಾಹೇಬ ಮುಸ್ಲಿಂನಾಗಿ ಜನಿಸಿ, ವೀರಶೈವ ಪರಂಪರೆಯಲ್ಲಿ ಬೆಳೆದು, ತನ್ನ ಬದುಕು ಬವಣೆಗಳ ಮೂಲಕ ಅನುಭಾವದ ಬೆಳಕನ್ನು ಚೆಲ್ಲಿದ ಹಸನಸಾಹೇಬ ಹಿಂದೂ-ಮುಸ್ಲಿಂ ಭಾವೈಕ್ಯತೆಗೆ ಸಾಕ್ಷಿಯಂತಿದ್ದಾನೆ. ಈತ ಸೇಡಂ ತಾಲೂಕಿನ ಗಡಿಗ್ರಾಮ ಇಟಗಾಲ ಗ್ರಾಮದಲ್ಲಿ ಕ್ರಿ.ಶ. ೧೮೫೫ರಲ್ಲಿ ಜನಿಸಿದ. ಚಿಕ್ಕವನಿರುವಾಗಲೇ ತಂದೆ-ತಾಯಿಗಳನ್ನು ಕಳೆದುಕೊಂಡ ಹಸನಸಾಹೇಬ ಇಟಗಾ ಗ್ರಾಮದ ವೀರಭದ್ರನನ್ನೇ ತನ್ನ ಆರಾಧ್ಯ ದೈವವನ್ನಾಗಿಸಿಕೊಂಡು ಕನ್ನಡವನ್ನು ಕಲಿತು ತತ್ವಪದಗಳ ರಚನೆಗೆ ತೊಡಗುತ್ತಾನೆ. ಈ ದೈವವನ್ನೇ 'ವಿಠಪುರೀಶ' ಎಂದು ತನ್ನ ಅಂಕಿತವಾಗಿ ಇಟ್ಟುಕೊಂಡನು. ಹಸನಸಾಹೇಬ ಅಳಿತನಕ್ಕೆಂದು ಯಾದಗೀರಿ ತಾಲೂಕಿನ ಮೋಟನಹಳ್ಳಿಗೆ ಬಂದು, ಬದುಕಿ ಬಾಳಿ ಹೆಸರಾಗಿ, ಇಲ್ಲಿಯೇ ಕ್ರಿ.ಶ. ೧೯೧೪ರಂದು ತೀರಿಕೊಂಡರು.

ಹಸನಸಾಹೇಬರು ಕೋರಟಗಿಯಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಯೊಂದರಲ್ಲಿ ಶಿಕ್ಷಕರಾಗಿ ಕನ್ನಡ ಬೋಧಿಸುವ ಕೆಲಸ ಮಾಡಿದರು. ಮದುವೆಯಾದ ಬಹಳ ದಿನಗಳವರೆಗೆ ಮಕ್ಕಳಾಗಲಿಲ್ಲ. ನಂತರ ವೀರಭದ್ರ ದೇವರಿಗೆ ಭಕ್ತಿಯಿಂದ ನಡೆದುಕೊಂಡಾದ ಮೇಲೆ, ಗಂಡುಮಗು ಹುಟ್ಟುತ್ತದೆ. ದುರದೃಷ್ಟವಶಾತ್ ಕೆಲವೇ ದಿನಗಳಲ್ಲಿ ಮಗು ತೀರಿಕೊಳ್ಳುತ್ತದೆ. ಮಗುವಿನ ಚಿಂತೆಯಲ್ಲಿಯೇ ಹಸನಸಾಹೇಬರು 'ನೀರಿನ ಮೇಲಿನ ಗುಳ್ಳೆ ಈ ಬದುಕು' ಎಂದು ಬದುಕಿನ ಬಗ್ಗೆ ವೈರಾಗ್ಯ ತಾಳುತ್ತಾರೆ. ಮೋಟನಳ್ಳಿಯಲ್ಲಿ ಹಸನಸಾಹೇಬರ ಕೆಲವು ಪವಾಡ ಕತೆಗಳು ಜನಜನಿತವಾಗಿವೆ. ಇವುಗಳ ಬಗ್ಗೆ ಹಿರಿಯರಾದ ದಿ. ರೇಶ್ಮಿ ಕಲ್ಲಪ್ಪನವರು ಬರೆದಿರುವ ಹಸ್ತಪ್ರತಿಗಳಲ್ಲಿ ಕಾಣಸಿಗುತ್ತವೆ. ಗುರು, ಆತ್ಮಜ್ಞಾನ, ಮಹಿಮೆ ಮುಂತಾದ ವಿಚಾರಗಳನ್ನು ತಮ್ಮ ಹಾಡುಗಳಲ್ಲಿ ಹೇಳುವುದರೊಂದಿಗೆ ಸಮಾಜದ ಬಗ್ಗೆ ಗಮನಹರಿಸುತ್ತ ಇವರು ಅನುಭಾವದೆತ್ತರವನ್ನು ತಮ್ಮ ಹಾಡುಗಳಲ್ಲಿ ನಿರೂಪಿಸಿದರು.

**ಕಾಯಕಾಂತರ ಮೃಗ**

"ಎಂಥದ್ದೊ! ಮೃಗವೆಂಥದ್ದೋ!! ಗುರುವೆ
ಇಂಥ ಕಾಯಕಾಂತಾರದೊಳು ಸೇರಿರುವದೊ
ಪಂಚವರ್ಷದ ಬಾಲೆ, ವಂಚನಿಲ್ಲದೆ ಅದು
ಹಂಚಿಕಿಲಿಂಡಲಿ ಆಡುವದೊ
ಕಂಚಿಯೊಳಗೆ ಒಡು ಮಿಂಚಾಗಿ ಇರುವದು
ಸಂಚಾರ ಮಾಡುವದು ಸರ್ವರೊಳು ||೧||

ಅಂಗವೆಂಬುದೆ ಅಡವಿ ಬಂಗಾಳಿ ಮಾಡಿನ್ನು
ಕಂಗಳೊಳಗೆ ಕಳವಳಿಸುವದು
ಮುಂಗಾರು ಮಿಂಚಿನೊಲು ಒಳಗೆ ಜ್ಯೋತಿಯ ಹಚ್ಚಿ
ಬಂಗಾರ ಥಳಥಳಿಸಿ ತಾನೇ ತಾನಿರುವದು ||೨||

ಹೊತ್ತು ಹೋಗದೊಂದು ಹುತ್ತಿನೊಳಗೆ ಬಂದು
ಗೊತ್ತು ಮಾಡಿಕೊಂಡು ಗೊತ್ತು ತಿಳಿಯದಂಗೆ
ಅತ್ತಿತ್ತಲೋಡಾಡಿ ಗುಹ್ಯದೊಳಿರುವ
ನಿತ್ಯನಾದ ಇಟಪುರೀಶ ನೋಡೋ"[೨೨]

**ಗಾರುಡಿಗ**

"ಇವ ಎಂಥ ಗಾರುಡಿಗ ಹಾನೇ, ಅವ್ವಯ್ಯ ನೋಡೇ,
ಇವ ಎಂಥ ಗಾರುಡಿಗ ಹಾನೇ!
ತಂತು ತಿಳಿದು ಇವನ ಹಂತೆಕೆ ಹೋದರೆ
ಪಂಥ ಗೆಲ್ಲಿಸುವನೇ

ಲಕ್ಷ್ಯ ಹಿಡಿದು ಅರಕ್ಷರ ಓದಿಸಿ
ನಿಕ್ಷೇಪದೋರಿ ನಿಜ ವಸ್ತು ಕೊಡಿಸುವ
ನಿಚ್ಚನಿಚ್ಚವು ಮಹದೆಚ್ಚರ ಬೋಧಿಸಿ
ಅಚ್ಚ ಪರವಶದಿ ಹುಚ್ಚ ಹಿಡಿಸಿದವ
ಸೇರಿರುವ ಭಕ್ತರ ದುರಿತವೆಲ್ಲವನು
ದೂರ ಮಾಡುವ ಇಟಪುರೀಶ ತಾ"[೨೮]

**ಎಲೇರಾಜೋಳದ ಮುರುಘೇಂದ್ರಸ್ವಾಮಿ**

ಮುರುಘೇಂದ್ರ ಸ್ವಾಮಿಗಳು ಶರಣಯ್ಯ ಮತ್ತು ಬಸಲಿಂಗಮ್ಮನವರ ಪುಣ್ಯಗರ್ಭದಲ್ಲಿ ಕ್ರಿ.ಶ. ೧೮೯೧ರಲ್ಲಿ ಗೌಡಗಾಂವದಲ್ಲಿ ಜನಿಸಿದರು. ಮುರುಘೇಂದ್ರಸ್ವಾಮಿಗಳಿಗೆ ಕರಿಘೂಳೇಶ್ವರ ಮತ್ತು ರಾಮಲಿಂಗೇಶ್ವರರೆಂಬ ಹಿರಿಯ ಸಹೋದರರಿದ್ದರು. ಬಡತನದ ತಾಪ ಮತ್ತು ಆರ್ಥಿಕ ಬಿಕ್ಕಟ್ಟು ತಾಳಲಾರದೆ ಹೊಟ್ಟೆಪಾಡಿಗಾಗಿ ಗೌಡಗಾಂವ ಬಿಟ್ಟು ರಾಯಚೂರಿಗೆ ಇವರ ಕುಟುಂಬ ಬಂದಿತು. ತಂದೆ ಶರಣಯ್ಯನವರಿಗೆ ಮಕ್ಕಳ ಭವಿಷ್ಯದ ಬಗ್ಗೆ ಸದಾ ಚಿಂತೆ. ಮುಂದೆ ಒಂದು ದಿನ ತಮ್ಮ ಬಡತನ ಸುಧಾರಿಸಬಹುದೆಂಬ ನಂಬಿಕೆಯ ಮೇಲೆ ಕಾಲ ಕಳೆಯುತ್ತಿದ್ದರು. ಸದಾ ಚಿಂತೆಯಲ್ಲಿಯೇ ಮುಳುಗಿದ ತಂದೆಯನ್ನು ನೋಡಿದ ಮುರುಘೇಂದ್ರ ಸ್ವಾಮಿಗಳು ತಂದೆಯ ಚಿಂತೆಯನ್ನು ಕಡಿಮೆ ಮಾಡಬೇಕೆಂದು ಯೋಚಿಸಿ, ಚಿಕ್ಕ ವಯಸ್ಸಿನಲ್ಲಿಯೇ ದವಸ ಧಾನ್ಯದ ಅಂಗಡಿಯೊಂದರಲ್ಲಿ ಅಕ್ಕಿ ಅಳೆಯಲು ನಿಂತು ತಿಂಗಳಿಗೆ ಮೂವತ್ತು ರೂಪಾಯಿಗಳನ್ನು ಸಂಪಾದಿಸಲು ತೊಡಗುತ್ತಾರೆ. ಆಗ ಅವರ ವಯಸ್ಸು ೧೨ ಆಗಿರುತ್ತದೆ.

ಚಿಕ್ಕವಯಸ್ಸಿನಲ್ಲಿ ಕೆಲಸಕ್ಕೆ ಸೇರಿದ ಮಗನನ್ನು ಕೆಲಸದಿಂದ ಬಿಡಿಸಿದ ತಂದೆ ಅಕ್ಷರಾಭ್ಯಾಸಕ್ಕಾಗಿ ಪೊಲಚಿಂತೆ ಬಂಡೆಗುರುಗಳ ಹತ್ತಿರ ಕಳಿಸುತ್ತಾರೆ. ಪೊಲಚಿಂತೆಯ ಗುರುಗಳಿಂದ ಅಕ್ಷರಾಭ್ಯಾಸ ಕಲಿತ ಮುರುಘೇಂದ್ರ ಸ್ವಾಮಿಗಳು ಹತ್ತು ಹಲವು ಜನಪದ ಕಲೆಗಳನ್ನು ಕರಗತ ಮಾಡಿಕೊಳ್ಳುತ್ತಾರೆ. ತಾವು ಕಲಿತ ಜನಪದ ಕಲೆಗಳನ್ನು ಆಡಿ ತೋರಿಸಲು ಊರೂರು ಅಲೆದಾಡುತ್ತಾ ಪಕ್ಕದ ಆಂಧ್ರಪ್ರದೇಶದ ತೆಲಂಗಾಣದಲ್ಲಿ ದಪ್ಪಿನ ಆಟ, ರಾಧಾಕೃಷ್ಣನ ಆಟ ಆಡಲು ಮೇಲಿಂದ ಮೇಲೆ ಹೋಗುತ್ತಿದ್ದರು. ಅಲ್ಲಿನ ತೆಲುಗರು ಇವರ ಆಟ ನೋಡಿ ಇವರನ್ನೇ ದೇವರೆಂದು ತಿಳಿದು ಕಣ್ಣಲ್ಲಿ ನೀರು ತಂದು, ಭಾವುಕರಾಗಿ ಕೈ ತುಂಬ ಹಣ ನೀಡುವುದರ ಜೊತೆಗೆ ಊರಿಗೆ ಊರೇ ಇವರು ಗ್ರಾಮದಲ್ಲಿ ಇರುವಷ್ಟು ದಿನ ಹೋಳಿಗೆ, ಕರಿಗಡುಬಿನ ಊಟ ಮಾಡಿಸುತ್ತಿದ್ದರು. ಒಮ್ಮೆ ತೆಲಂಗಾಣಕ್ಕೆ ಹೋದರೆಂದರೆ ಆಗಿನ ಕಾಲದಲ್ಲಿಯೇ ಸುಮಾರು ನೂರು ರೂಪಾಯಿಗಳಿಗಿಂತಲೂ ಅಧಿಕ ಹಣ ಸಂಪಾದಿಸಿಕೊಂಡು ಹಿಂತಿರುಗುತ್ತಿದ್ದರು. ದಿನಕ್ಕೆ ಮೂರಾಣೆ ಕೂಲಿ ಸಿಗದಂತಹ ದಿನಮಾನದಲ್ಲಿ ನೂರು ರೂಪಾಯಿ ಗಳಿಸಿಕೊಂಡು ಬರುತ್ತಿದ್ದರೆಂದರೆ ಇವರು ಪ್ರದರ್ಶಿಸುವ ಜನಪದ ಕಲೆಗಳಿಗೆ ಬೆಲೆ ಎಷ್ಟಿತ್ತೆಂಬುದು ತಿಳಿಯುತ್ತದೆ. ಬರೀ ಕಲೆಯನ್ನು ಪ್ರದರ್ಶನ ಮಾಡಿ ಹಣ ಗಳಿಸಬೇಕೆಂಬ ಉದ್ದೇಶ ಇವರಲ್ಲಿರಲಿಲ್ಲವೆಂಬುದು ಗಮನಿಸಬೇಕು.

ಹೀಗೆ ಊರೂರು ತಿರುಗಾಡಿ ಪ್ರದರ್ಶನ ನೀಡುತ್ತಿದ್ದ ಮುರುಘೇಂದ್ರ ಸ್ವಾಮಿಗಳು ಮುಂದೆ ಅನೇಕ ವೃತ್ತಿಗಳಲ್ಲಿ ತೊಡಗಿಕೊಂಡರು. ಜನಪದ ಕಲೆ, ಜನಪದ ವೇಷಭೂಷಣ, ಜನಪದ ರಂಗಭೂಮಿ ಗಳಲ್ಲಿ ವಿಪರೀತ ಆಸಕ್ತಿ ಹೊಂದಿದ ಇವರು ಜಡಚರ್ಲ್ ಕೊಟೇಶ್ವರರಾವ್ ಅವರ ನಾಟಕ ಕಂಪನಿಯಲ್ಲಿ ನಾಯಕನಟರಾಗಿ ಸೇರಿಕೊಂಡರು. ಇವರು ನಾಯಕನಟರಾಗಿ ಪಾತ್ರ ನಿರ್ವಹಿಸುವಾಗ ಕಂಪನಿ ತುಂಬಾ ಹೆಸರು ಪಡೆಯುತ್ತ ಹೆಚ್ಚು ಹೆಚ್ಚು ಹಣಗಳಿಸಿತು. ಇದರಿಂದ ಕಂಪನಿಯ ಮಾಲೀಕರಿಗೂ, ಮುರುಘೇಂದ್ರರಿಗೂ ಒಂದು ಅನ್ಯೋನ್ಯ ಸಂಬಂಧ ಏರ್ಪಟ್ಟಿತು. ಕಬೀರದಾಸ, ರಾಮಾಯಣ, ಮಹಾಭಾರತದ ನಾಟಕಗಳಲ್ಲಿ ಮುರುಘೇಂದ್ರರು ನಾಯಕನಟರಾಗಿ ನಟಿಸುತ್ತ ತಮ್ಮ ಪ್ರತಿಭೆ ಹೊರಹಾಕುತ್ತಿದ್ದರು. ಇವರಿಗೆ ಸರಿಯಾಗಿ ಗುನ್ನಮ್ಮ ಎಂಬುವವಳು ನಟಿಯಾಗಿ ಪಾತ್ರ ನಿರ್ವಹಿಸುತ್ತಿದ್ದಳು. ಇವರಿಬ್ಬರ ಜೋಡಿಯಿಂದ ಕಂಪನಿ ಪ್ರಚಾರ, ಗೌರವವನ್ನು ಬೆಳೆಸಿಕೊಂಡಿತ್ತಲ್ಲದೇ ಜನರ ಭಾವನಾತ್ಮಕ ಸಂಬಂಧಗಳಿಗೆ ಹತ್ತಿರವಾಯಿತು.

ಮುರುಘೇಂದ್ರಸ್ವಾಮಿಗಳ ಜನಪ್ರಿಯತೆಯನ್ನರಿತ ಎಲೇರಾಜೋಳ ಗ್ರಾಮದ ಪ್ರಮುಖರೆಲ್ಲರೂ ಸೇರಿ ಇವರ ಬಳಿ ಬಂದು ಎಲೇರಾಜೋಳ ಗ್ರಾಮದಲ್ಲಿ ನೆಲೆಸಿ ಇಲ್ಲಿನ ಜನರನ್ನು ಉದ್ಧಾರ ಮಾಡಬೇಕೆಂದು ವಿನಂತಿಸಿಕೊಳ್ಳುತ್ತಾರೆ. ಕರಿಘೂಳೇಶ್ವರರ ಅನುಮತಿಯ ಮೇರೆಗೆ ಎಲೇರಾಜೋಳ ಗ್ರಾಮದಲ್ಲಿ ನೆಲೆಸಲು ಒಪ್ಪಿಕೊಂಡು, ಊರೂರು ತಿರುಗಾಡಿ ಕಲೆ ಪ್ರದರ್ಶನ ಮಾಡುವುದನ್ನು ನಿಲ್ಲಿಸಿ ಭಕ್ತರ ಒಪ್ಪಿಗೆಯ ಮೇರೆಗೆ ಎಲೇರಾಜೋಳದಲ್ಲಿ ನೆಲೆಸಿ ಆಧ್ಯಾತ್ಮಿಕ ಜೀವನ ನಡೆಸಲು ಮುಂದಾಗುತ್ತಾರೆ.

ಎಲೇರಾಜೋಳದಲ್ಲಿ ನೆಲೆಸಿದ ಮೇಲೆ ಕರಿಘೂಳೇಶ್ವರರ ಶುಭಾಶೀರ್ವಾದದಿಂದ ಹಾಗೂ ಈರಂಪಲ್ಲಿಯ ಈರಣ್ಣಗೌಡರ ಹಿರೇತನದಲ್ಲಿ ಯಾವ ಆಡಂಬರವಿಲ್ಲದೆ ಸರಳ ರೀತಿಯಲ್ಲಿ ಭಕ್ತರ ಸಮ್ಮುಖದಲ್ಲಿ ಮುರುಘೇಂದ್ರ ಸ್ವಾಮಿಗಳು ಮಾಣಿಕಮ್ಮನವರನ್ನು ವಿವಾಹವಾಗುತ್ತಾರೆ. ಇವರು ಸಂಸಾರ ಜೀವನದಿಂದ ತಮ್ಮ ಉದ್ದೇಶಗಳಿಗೆ ಯಾವುದೇ ಅಡಚಣೆ ಆಗುವುದಿಲ್ಲವೆಂಬುದಕ್ಕೆ, ಇಂಡಿ ತಾಲ್ಲೂಕಿನ ಗೊಳೆಸಾರದ ಶರಣ, ಹಂಗನಳ್ಳಿಯ ಗುರುಲಿಂಗಪ್ಪ ಶರಣ, ಸಂತ ಶಿಶುನಾಳ ಶರೀಫಸಾಹೇಬರು, ಕಲಬುರ್ಗಿಯ ಶರಣಬಸವೇಶ್ವರರು ಪ್ರೇರಣೆಯಾಗಿದ್ದರು. ಇವರೆಲ್ಲರೂ ಕೂಡ ಸಂಸಾರದಲ್ಲಿದ್ದುಕೊಂಡೇ ಸನ್ಯಾಸತ್ವವನ್ನು ಮುಂದುವರೆಸಿಕೊಂಡು ಬಂದವರಾಗಿದ್ದರು.

ಮುರುಘೇಂದ್ರಸ್ವಾಮಿಗಳು ತಮ್ಮ ಆಧ್ಯಾತ್ಮಿಕ ಜೀವನ ಪ್ರಾರಂಭಿಸುವುದಕ್ಕೂ ಮುನ್ನ ಪತ್ನಿ ಮಾಣಿಕಮ್ಮನವರ ಜೊತೆಗೂಡಿ ಯಾಕಂಬರಿ ಕ್ಷೇತ್ರದಲ್ಲಿ ಒಟ್ಟು ೨೧ ದಿನಗಳವರೆಗೆ ಅನುಷ್ಠಾನ ಮಾಡಿ ಹಲವು ಸಿದ್ಧಿಯನ್ನು ಪಡೆದುಕೊಂಡು ರಾಯಚೂರು, ಅಲಿಗಡ, ನಾರಾಯಣಪೇಟ, ಕೋಲಾರ, ಹಂಪೆ, ಮುಂಬಯಿ, ಹೈದರಾಬಾದ್, ಫರತಾಬಾದ, ನಾಯ್ಕಲ, ಖಾನಪುರ, ಮಹಾದ್ವಾರ, ಇರಪಲ್ಲಿ, ಹಂಗನಳ್ಳಿ, ಕೋಲಕುಂದಾ, ದ್ಯಾವನೂರ, ನಾಚವಾರ, ಯಾದಗೀರ, ಹತ್ತಿಕುಣಿ ಮುಂತಾದ ಊರುಗಳಿಗೆ ಹೋಗಿ ಆಧ್ಯಾತ್ಮ ಮತ್ತು ಅನುಭಾವದ ಚರ್ಚೆಯನ್ನು ನಡೆಸುತ್ತಾ ಅನೇಕ ಪವಾಡಗಳನ್ನು ಮಾಡಿದರು. ಅವುಗಳಲ್ಲಿ ಕರ್ಣಕ್ವಾಟಗಿಯ ಪವಾಡ, ಈರಂಪಲ್ಲಿಯ ಪವಾಡ, ಎಲೇರಾಜೋಳದ ಕುಷ್ಠರೋಗಿ ಊರಗೌಡರ ಪವಾಡಗಳು ಮುಖ್ಯವಾಗಿದ್ದವು.

ಮುರುಘೇಂದ್ರಸ್ವಾಮಿಗಳು ಗೌರಿಹುಣ್ಣಿಮೆಯ ಸೋಮವಾರದಂದು ಲಿಂಗೈಕ್ಯರಾದರು. ಎಲೇರಾಜೋಳ ಗ್ರಾಮದಲ್ಲಿ ಇವರ ಸಮಾಧಿ ಗುಡಿಯನ್ನು ನಿರ್ಮಿಸಲಾಗಿದೆ. ಇವರು ಲಿಂಗೈಕ್ಯರಾಗಿ ಇಂದಿಗೆ ೩೦ ವರ್ಷಗಳು ಗತಿಸಿವೆ. ಇವರ ಭಕ್ತರು ಅವರು ಹಾಕಿಕೊಟ್ಟ ಮಾರ್ಗದಲ್ಲಿಯೇ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಪ್ರತಿ ಚಟ್ಟಿ ಅಮವಾಸೆಯಂದು ಅತೀ ವಿಜೃಂಭಣೆಯಿಂದ ಎಲೇರಾಜೋಳ ದಲ್ಲಿ ಉತ್ಸವ, ಜಾತ್ರೆ ನಡೆಸಲಾಗುತ್ತದೆ.

ಮುರುಘೇಂದ್ರಸ್ವಾಮಿ ಜನಪದ ಸಾಹಿತ್ಯ(ತತ್ವಪದ)ದಲ್ಲಿ ಅನೇಕ ಹಾಡುಗಳನ್ನು ರಚಿಸಿದ್ದಾರೆ. ಹಿರಿಯ ಸಹೋದರರನ್ನೇ ಗುರುವಾಗಿಸಿಕೊಂಡು ಅವರ ಹೆಸರನ್ನೇ ತಮ್ಮ ಹಾಡುಗಳಲ್ಲಿ ಅಂಕಿತವಾಗಿ ಬಳಸಿಕೊಂಡಿದ್ದಾರೆ.

ಇವರು ಕನ್ನಡ, ತೆಲುಗು, ಹಿಂದಿ ಮತ್ತು ಉರ್ದು ಭಾಷೆಗಳನ್ನು ಓದಿ ಬರೆಯಬಲ್ಲವರಾಗಿದ್ದು, ದೇವರ ನಾಮಗಳು, ಭಜನೆ ಪದಗಳು, ಸೋಬಾನದ, ವಿರಕ್ತಿಯ, ಹಂತಿಯ ಹಾಡುಗಳನ್ನು ಈ ಭಾಷೆಗಳಲ್ಲಿ ರಚಿಸಿದರು. ಮನೆಮಾತು ಕನ್ನಡವಾದುದ್ದರಿಂದ ಹೆಚ್ಚಿನ ಹಾಡುಗಳನ್ನು ಕನ್ನಡದಲ್ಲಿಯೇ ರಚಿಸಿದ್ದಾರೆ.

**ಕನ್ನಡ ತತ್ವಪದಗಳು**

"ನಿನ್ನ ನೀ ಕಾಣೋತನಕ ಇನ್ನೆಲ್ಲಿಯಿಲ್ಲ ಮುಕ್ತಿ
ಕಣ್ಣಿನೊಳಗ ಹುಣ್ಣಿವಿ ಚಂದ್ರನ ಕಾಣೋ ತನಕ
ಶ್ರವಣ ಮನನನಿಧಿ ಧ್ಯಾಸವುಗೈಯುವ ತನಕ
ಭವ ನೀಗಿಸುವ ಶಿವಯೋಗಿಯಾಗುವ ತನಕ"[೨೯]

"ಕಾಸಿಗ್ಹೋಗ್ವದ್ಯಾಕೊ
ತೀರ್ಥ ತಂದು ಬ್ಯಾಸರಾಗ್ವದ್ಯಾಕೊ
ಸೋಸಿ ನೋಡಿ ಭವದಾಸೆ ತ್ಯಜಿಸಲು
ಕಾಶಿತೀರ್ಥ ತನ್ನ ಕಣ್ಣೊಳಗಿರುವುದು"[೩೦]

"ಆರದೈವವು ಆರಿಗೇನುಗುರುತು
ಗುರುರಾಯನ್ಹೊರತು
ಆರ ದೈವವು ಆರಿಗೇನು ಗುರುತಾರುಪೇಳಲು ಆರುಸಾಧ್ಯವು
ಆರುಮೂರನು ಅರಿತು ಮಹಾ ಮೇರು ಶಿಖರದಿರುವನ್ಹೊರತು"[೩೧]

"ಯೋನಿಯೊಳಗೆ ಜನನ ಮಾತ್ರ
ಯೋನಿಗೆ ಮೋಹಿಸಿ ಹೊಲಸು ಯೋನಿ
ಮರ್ಮವು ತಿಳಿಯದಲೆ ಮಲಹೀನರಾಗ್ಹೋಗುವ ನರರು"[೩೨]

"ಧರೆಯೊಳು ಸ್ಥಿರವೇನಿಕಾಯ
ಅರಘಳಿಗೆಯಲಾಗೋದ ನ್ಯಾಯ
ಧರೆಯೊಳು ಸ್ಥಿರವೆ ನೀರಗುರುಳಿಯಿದು
ಮರುಳಿ ಕನಸಲಿ ಶಿರಿಕಂಡ ಪರಿಯಾ"[೩೩]

**ತೆಲುಗು ತತ್ವಪದಗಳು**

"ಚೂಚು ಚುನ್ನಾಡಯ್ಯ ಯಮುಡು |
ಸ್ವೇಚ್ಛತೊ ತಿರಿಗೆ ಪಿಚ್ಚುವಾರಿನಿ ಇಚ್ಚು ಗತ್ತುಲತೊ |
ಗುಚ್ಚಿ ಪ್ರಾಣುಲ ಸಿಚ್ಚುಲ ನಡವೇಯಿಂತಾಮನಿ ||೧||

ಮಂಚಿಗುನ್ನಾವಾರಿನಿ ಜೂಚೀಮುಂಚು ದಾಮನಿ ಎಂಚಿದಲಚಿ |
ಪೊಂಚುಬೆಟ್ಟಕೊನಿ ವಂಚನ ಜೇಸಿನ |
ಪಂಚ ಮಹಾಪಾತಕುಲನುದ್ರುಂಚ ||೨||

ಈಶ ಧ್ಯಾಸಮು ವದಲಿ ಇಲಲೊ |
ಮೋಸಗಾಂಡ್ಲಕು ದಾಸುಲೈ ಪರಮೇಶುನಿಭಕ್ತುಲ |
ಚೂಚಿಸಹಿಂಪಕ ಮೋಸಗಾಂಡ್ಲನು ಘಾಸಿಂತಾಮನಿ ||೩||

ಅಷ್ಟಮಾಸಿದ್ದುಲನು ನೇರ್ಚಿ ಇಷ್ಟಮುತೋನು |
ಸೃಷ್ಟಿಲೊದಿರುಗುಚು ಸೃಷ್ಟಿಲೊ ಶ್ರೇಷ್ಟುಡುನೇನನಿ
ಪರುಲಕಷ್ಟಬೆಟ್ಟಿನ ದ್ರುಷ್ಟುಲ ಇಷ್ಟತೊ ||೪||

ಗುರುವುಲು ವೀರನಿ ಎದುರುಗ ಬಲ್ಕಿನರುಲು |
ವೀರನಿ ಮರುಗುನುವಿಲಿಕ ಎರುಗಕ ವರಲೇಸುನಕು |
ಘೋರ ನರಕಮುಲೋಪಲ ಪೊರಿಲಿಂತಾಮನಿ ||೫||

ಸತ್ಯಶರಣುಲ ನಡಕಲುಜೂಚಿ |
ವುತ್ತವಾರನಿ ತತ್ತರಬಡುಚು ಎತ್ತನಿಬರುವು |
ನೆತ್ತಿನ ಎತ್ತಿನ ನಿತ್ಯ ಮುಕುತಿಕೆ ಕೋಯಿಂತಾಮನಿ ||೬||

ಪಾಪಮುಲೇನಿ ಪುರುಷೋತ್ತಮುಲಕು ಕೋಪಮುತೊ |
ಪಾಪೇರ್ಪಾಟಿಂಚಿ ಕ್ಯಾಪ ಕ್ಯಾಪವಾರಿಕಾ ಪದಲುಂಚಿನ |
ಈಪು ಬಗಲನಿಕಿದನ್ನುದಮುನು ಕೊನಿ ||೭||

ಅರ್ಥ ಮುಗಲ್ಪಾಡ್ವರ್ಥಪು ಕೃತ್ಯಮುಲು |
ತುರ್ತುಜೇಸಿನ ಸಾರ್ಥಕಮಂದುರು |
ಗುರ್ತುಗ ನಡಚೀಟಿ ಬೀದವಾನಿಕಪಕೀರ್ತಿ |
ನಿದಲಚೀಟಿ ಧೂರ್ತುಲಂದರನು ||೮||

ಆಪದಲೇನಿ ನೃಪ ಪುರಮಂದನು ವ್ಯಾಪಿಂಚಿನ |
ಶ್ರೀಪತಿಸುತ ಪಾವನ ಅಪ್ಪ ಶ್ರೀ ಕರಿಘೂಳೀಸುನಿ |
ಪಾದಮುಬಾಪಿನ ಪಾಪಾತ್ಮಮೂಲನು ಅನುದಿನ ||೯||[೩೪]

"ವಾಲಿಂಚವೇರ ಗೋಪಾಲಲೋಲುಡ ರಾ | ಪಾಲಿಂಚುಮನಿ ಪಲವರಿಂಚಿತಿ ನನ್ನೇಲುಮನಿನ ದಯಯೇಲ ರಾದಯ್ಯೋ ||೧|| ಲೋಕುಲುನೀಕು ಪಶುಗಾಕುಲಂದುರಯ್ಯೋ | ಏಕಮೈನನೀ ವಾಕ್ಯಮಿನಕ ನಿರಾಕರಿಂಚಿರಿಕ ಸಾಕಾರುಡನನು ||೨|| ವೇದಮೂರುತಿನಾಕಾಧಾರ ನೀವೇಗಾ ಭೇದ ಜೇತುರು ನಿಜಬೋಧಕುಲನುಗನಿ | ಬೀದವಾಡನಿ ಪದಮುಲು ನಮ್ಮಿನ ||೩|| ಕಲ್ಲಾನಿಜಮಾಯೆ ಸತ್ಯಜೆಲ್ಲದಾಯೆ | ಕಲಿಲೋಗಿಲ್ಲ ಜೇತುರೆಲ್ಲಾ | ಕಾಲಿಟು ಜೇಯುಟ ಜೆಲ್ಲುನು ನೀಕು ನಲ್ಲನಿತಂಡ್ರಿ ||೪|| ಸತ್ಯಮೊದಲಕುಮನಿ ಪಥನೀವೆ ಜೂಪಿನಾವು| ಸತ್ಯನಡಚಿನಾಸತ್ಯ ಮುಂದುರಿಕ | ತತ್ತರಬಡಿತಿನಿ ಚಿತ್ತಜ ಜನಕ ||೫|| ಇದಿನೀಕು ದಗುನ ಎದುಕುಲನಂದನಾ ಗಾದುಗಾದುನಿನು | ಶೋಧನ ಜೇಯುಟ ಆದರಿಂಚುಮು ಸದುಹೃದಯಾಂಗಾ ||೬|| ಏಮಿಚೇಯುದನಾನೋಮು ಪಲಮು ಇದಿ | ರಾಮನೀದು ನಾಮಾಮೃತ ದೊರಕಿನತಾಮಸ ಕರ್ಮಮು ಲೇಮಿಯುವೇವಟ ||೭|| ಧರಮುಲೊ ನರಸಪೂರಮುಲೊನಿವಾಸ ಕರಿವರದಾ ನೀ ಚರಣಮು | ಮರುವನು ಕರುಣಿಂಚುಮು | ಶ್ರೀ ಕರಿಘೂಳೀ ಶುಡಾ ||೮||[೩೫]

ಮುರುಘೇಂದ್ರ ಸ್ವಾಮಿಗಳು ಸಣ್ಣಾಟ, ದೊಡ್ಡಾಟ, ಶ್ರೀಕೃಷ್ಣಪಾರಿಜಾತ, ತೊಗಲುಗೊಂಬೆಯಾಟ, ತತ್ವಪದ ಸಾಹಿತ್ಯ - ಹೀಗೆ ಅನೇಕ ರೀತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕರ್ನಾಟಕ-ಆಂಧ್ರಗಡಿಭಾಗದಲ್ಲಿ ಒಂದು ದೊಡ್ಡ ಶಿಷ್ಯಪರಂಪರೆಯನ್ನು ಹುಟ್ಟು ಹಾಕುವುದರೊಂದಿಗೆ ಗಡಿಭಾಗದಲ್ಲಿ ಪ್ರಾಮುಖ್ಯತೆಯನ್ನು ಪಡೆದರು.

**ಅವಧೂತ ರಾಮಲಿಂಗ**

ಎಲೇರಾಜೋಳದ ಮುರುಘೇಂದ್ರ ಸ್ವಾಮಿಯ ಸಹೋದರರಾದ ರಾಮಲಿಂಗರು 'ಅವಧೂತ ರಾಮಲಿಂಗ'ರೆಂದೇ ಪ್ರಸಿದ್ಧರಾಗಿದ್ದಾರೆ. ಇವರು ಹುಟ್ಟಿದ್ದು ಗೌಡಗಾಂವ. ಕಾರ್ಯಕ್ಷೇತ್ರವಾಗಿಸಿಕೊಂಡಿದ್ದು ಕರ್ನಾಟಕಾಂಧ್ರ ಗಡಿಭಾಗ. ಸಮಾಧಿಯಾಗಿದ್ದು ಯಾದಗೀರ ತಾಲೂಕಿನ ಖಾನಾಪುರ. ಎಲ್ಲ ಶರಣ ಸಂತರಂತೆ, ಅನುಭಾವಿಗಳಂತೆ, ಫಕೀರರಂತೆ, ಮುಲ್ಲಾಗಳಂತೆ ಶ್ರೀರಾಮಲಿಂಗರು ಕೂಡಾ ಒಂದು ಕಡೆ

ನಿಲ್ಲದೆ ತಿರುಗಾಡುತ್ತಲೇ ತಮ್ಮ ಅನುಭಾವದ ವಿಚಾರಗಳನ್ನು ಅನುಭವದ ಮೂಲಕ, ಭಜನೆಯ ಹಾಡಿನ ಮೂಲಕ, ತತ್ವಪದಗಳ ಮೂಲಕ ಜನರಿಗೆ ಬೋಧಿಸುತ್ತಿದ್ದರು. ಅಲ್ಲದೆ ಇವರಿಗೆ ಭೂತ, ಪ್ರೇತ, ಭಾನಾಮತಿಗಳಂತಹ ಅತಿಮಾನುಷ ಶಕ್ತಿಗಳನ್ನು ನಿಯಂತ್ರಿಸುವ ಶಕ್ತಿ ಒಲಿದಿತ್ತು. ಇವರು ಹೇಳುವ ಹೇಳಿಕೆ ಹುಸಿಗೊಳ್ಳದೆ, ಅಂದದ್ದು ಆಗುತ್ತಿತ್ತಂತೆ. ಇದಕ್ಕೆ ಉದಾಹರಣೆ ಎಂಬಂತೆ ಯುವತಿಯೊಬ್ಬಳು ಇವರ ಹತ್ತಿರ ಬಂದು "ಐನೋರಾ ನಿನ್ನ ಮಾತು ಖರೆ ಬರುತಾವಂತ, ನನ್ನ ಭವಿಷ್ಯ ಹೇಳು" ಎಂದಳು. ಅದಕ್ಕೆ ರಾಮಲಿಂಗರು ಮೊದಲು "ದುಡ್ಡು ಇಡು ನಂತರ ಹೇಳುತ್ತೇನೆ" ಎಂದರು. ಆ ಯುವತಿ ದುಡ್ಡು ಇಟ್ಟು "ಈಗ ಹೇಳು ನನಗ ಮಕ್ಕಳ ಅಗತ್ತಾವ ಏನು ಇಲ್ಲ", ಅದಕ್ಕೆ ರಾಮಲಿಂಗರು "ಹೋಗು ನಿನಗೂ ಮಕ್ಕಳು ಆಗತಾವ" ಎಂದರು. ಮುಂದೆ ಮೂರು ತಿಂಗಳ ಒಳಗೆ ಆ ಯುವತಿ ಗರ್ಭಿಣಿಯಾದಳು. ಇದರಿಂದ ಊರಿನವರೆಲ್ಲರು ಆ ಯುವತಿಗೆ ನಿಂದಿಸಿದರು. ಕಾರಣವೆಂದರೆ ಆಕೆಗೆ ಮದುವೆಯೇ ಆಗಿರಲಿಲ್ಲ. ರಾಮಲಿಂಗರ ಹೇಳಿಕೆಯಂತೂ ನಿಜವಾಗಿತ್ತು.

ಹಿರಿಯ ಸಹೋದರ ಕರಿಘೂಳೇಶ್ವರರಿಂದ ಶಿಷ್ಯತ್ವ ಪಡೆದ ರಾಮಲಿಂಗರು ಅನೇಕ ಕೃತಿಗಳನ್ನು ರಚಿಸಿ, ಅನೇಕ ಗೌರವಗಳನ್ನು, ಪ್ರಶಸ್ತಿಗಳನ್ನು ಪಡೆದುಕೊಂಡು ಜನಸಾಮಾನ್ಯರ ಜೀವನದಲ್ಲಿ ಜನಪದರಿಗೆ ಅತೀ ಹತ್ತಿರವಾದ ರೀತಿಯಲ್ಲಿ ಬೆರೆತು ಜೀವನ ನಡೆಸುತ್ತ ಜನರ ಜೀವನದಲ್ಲಿ ತಮ್ಮ ಗುರುತನ್ನು ಪಡೆದುಕೊಂಡರು. ರಾಮಲಿಂಗರು ಒಮ್ಮೆ ಹೀಗೆ ತಿರುಗಾಡುತ್ತ ಹೊರಟಾಗ ಊರ ಮಸೀದಿಯ ವಿಶಾಲ ಅಂಗಳದಲ್ಲಿ ಮುಸ್ಲಿಂಮರು ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗಿದ್ದರು. ಇವರನ್ನು ನೋಡಿದ ರಾಮಲಿಂಗರು ನೇರವಾಗಿ ಅಲ್ಲಿಗೆ ಹೋಗಿ ಎಲ್ಲಾ ಮುಸ್ಲಿಂಮರ ಎದುರಿನಲ್ಲೇ 'ಅಲ್ಲಾಹು ಅಕ್ಬರ್' ಅಂತ ಅಜಾ ಕೊಟ್ಟರು. ನೆರೆದಿದ್ದ ಮುಸ್ಲಿಂಮರೆಲ್ಲರೂ ಬೆರಗುಗೊಂಡು ಈ ವಿಷಯವನ್ನು ನಿಜಾಮನಿಗೆ ತಿಳಿಸಿದಾಗ ನಿಜಾಮನು ಸರಕಾರದ ವತಿಯಿಂದ 'ವಾಲೂಮೆ ಮಾರಿಫತ್', 'ತೊಹಿದೆ ಇಲಾಹಿ', 'ದಾಲಿದ್ದೀರಂತ್', 'ನೂರ್ ಎ ನಬಿ' ಎಂಬ ಬಿರುದುಗಳನ್ನು ರಾಮಲಿಂಗರಿಗೆ ಪ್ರದಾನ ಮಾಡಿದರು. ಹೀಗೆ ರಾಮಲಿಂಗರೂ ಇಲ್ಲಿ ಹಿಂದೂ-ಮುಸ್ಲಿಂ ಸೌಹಾರ್ದತೆಯ ಸೇತುವೆಯಾಗಿಯು ಕೆಲಸ ಮಾಡಿರುತ್ತಾರೆ.

ರಾಮಲಿಂಗರು ಆಧ್ಯಾತ್ಮ, ತತ್ವಶಾಸ್ತ್ರ, ನೀತಿಶಾಸಗಳ ಕೃತಿಗಳನ್ನು ರಚಿಸಿದರೆಂದು ತಿಳಿದುಬಂದರೂ ಅವು ನಮಗೆ ಇಂದಿಗೂ ಅಲಭ್ಯ. ಇವರಿಗೆ ಮಾಟ-ಮಂತ್ರಗಳನ್ನು ನಿಗ್ರಹಿಸುವ ಶಕ್ತಿ ಒಲಿದಿದ್ದು, ಅಲೌಖಿಕ ವಿಷಯಗಳಲ್ಲಿಯೂ ಪಾಂಡಿತ್ಯವನ್ನು ಪಡೆದಿದ್ದರು. ತಮ್ಮ ಆಸರೆ ಬಯಸಿ ಬಂದ ಜನರಿಗೆ, ಅವರ ಕಷ್ಟ-ಪೀಡೆಗಳಿಗೆ ಮಾಟ-ಮಂತ್ರ ವಿದ್ಯೆಯಿಂದ ಪರಿಹಾರವನ್ನು ನೀಡುತ್ತಿದ್ದರು. ಇಂದಿಗೂ ಇವರ ಸಮಾಧಿ ಬಳಿ ಇವರು ಪವಾಡ ಪುರುಷರೆಂದು ಜನ ಕಿಕ್ಕಿರಿದು ದರ್ಶನ ಪಡೆಯಲು ನಿಂತಿರುತ್ತಾರೆ. ಜನಪದರಿಗೆ ಹತ್ತಿರವಾಗಿದ್ದ ರಾಮಲಿಂಗರು ಹಿಂದಿನ ಭವಿಷ್ಯ ಹೇಳುತ್ತಿದ್ದರು. ಹಿಂದೆ ನಡೆದ ಘಟನೆಗಳನ್ನು ಮತ್ತು ಮುಂದೆ ಘಟಿಸುವ ಘಟನೆಗಳ ಬಗ್ಗೆ ತಿಳಿಯಲು ಇವರ ಜ್ಞಾನ ಶಕ್ತಿ ಕಾರಣವಾಗಿತ್ತು. ಈ ಎಲ್ಲ ವಿಷಯಗಳ ಜೊತೆಗೆ ರಾಮಲಿಂಗರು ಅನುಭಾವ ಸಾಹಿತ್ಯ ರಚನೆಯಲ್ಲಿ ಸಿದ್ಧಹಸ್ತರಾಗಿ ಅಪಾರ ಜ್ಞಾನವನ್ನು ಪಡೆದು ಅನುಭಾವ ಸಾಹಿತ್ಯದಲ್ಲಿ ಹಿರಿಮೆಯನ್ನು ಸಾಧಿಸಿದರು. ಇವರ ಅಗಾಧ ಅನುಭವ ಶಕ್ತಿಗೆ ಉದಾಹರಣೆಯೆಂಬಂತೆ 'ನಳನಸುತೆ ಇಳೆಯೊಳಗೆ ಉದಿಸಿಹಳೋss' ಎಂಬ ತತ್ವಪದ ರಚಿಸಿದರು. ಈ

ತತ್ವಪದದಲ್ಲಿ ಅವರ ಪಾಂಡಿತ್ಯವನ್ನು ಗುರುತಿಸಬಹುದಾಗಿದೆ. ಪ,ಬ,ಮ, ಈ ಮೂರು ಅಕ್ಷರಗಳಿಲ್ಲದೆ ಈ ಪದವನ್ನು ರಚಿಸಿದರು. ಜನಪದರಂತೂ ಇಂದಿಗೂ ಈ ಹಾಡನ್ನು ಇಷ್ಟಪಟ್ಟು ಹಾಡುತ್ತಾರೆ. ಜನಪದರು ಇದಕ್ಕೆ 'ತುಟಿಗೆ ತುಟಿ ಹತ್ತಲಾರದ ಪದ' ಎಂದು ಆಡುಮಾತಿನಲ್ಲಿ ಕರೆಯುತ್ತಾರೆ.

"ನಳಿನಸುತೆ ಯಿಳಿಯೊಳಗ ಉದಸಿಹಳೋ |
ಕಳೆದುಳಿದು ನಯನದಿ
ಸುಳಿವ ದಳಗಳನಟ್ಟಿ ತಿರುಗುವಳೋ ||
ನಳಿನ ದಳಗಳು ಹೊಳೆದು ಥಳಥಳ ಕಾಳಿ ತ್ರಿಗುಣದಿ |
ಇಳಿದಳಾಕ್ಷಣ ಯೋಗದಾರಿಲಿ |
ನಳಿನ ಕರ್ನಿರೆಯು ನಡುನಾಡದಿ" ||ಪಲ್ಲವಿ||

ಆರು ವರ್ಣದ ದಾರ ಸೀರಿಯನು |
ಆರಾರ್ಧ ಚಕ್ರವ |
ಸೇರಿ ನಿರ್ವಯಲಾಗಿ ತಾರಿಹನು |
ಆರವಿಯು ಕುಂಡಲಿಯು ಶಂಕರಿ |
ತೋರುತಿರ್ದಳಾಗ ತ್ರಿಕೋಣಿ |
ಕಾರಣಾತನು ಹಿಡಿದು ತೋರ್ವಳು |
ವೀರಗದ್ದಿಗೆ ರಂಗುನಿಲಯದಿ ||೧||

ಜ್ಞಾನ ವಿದ್ಯೆಯು ಚಿತ್ತ ಅಹಂಕರದಿ |
ವಿನಯದಲಿ ಹೃದಯದಿ |
ತನುವು ಧನವು ಇತ್ತು ಕಿಂಕರದಿ |
ನೆನವಿನೋಳ್ ನೆನವಡಗಿ ಚಿದ್ಘನ |
ದನುವರಿತು ವಸವೆನಿಸಿ |
ಯವ್ವನಕೊನೆಯೊಳಗಿರುವ ಜೀವನ |
ಕನಕ ಸಿಂಹವನೇರಿ ಜನನಿ ||೨||

ಧರೆಯೊಳು ಗುರು ರಜತ ಚಲದಲ್ಲಿ |
ಕರವೆತ್ತಿ ಕರೆಯಲು |
ತ್ವರವಗೈದೆ ಸರಸದೂಡುತಲಿ |
ಕರುಣದೃಷ್ಟಿಯು ತೆರೆದು ನೋಡಲು |
ಶರಣು ಎನ್ನುತೆ ಶರಣು ಹಿಡಿದನು |

ಕರಣಹಂಸ ವರವ ನೀಡುತ |
ನಿರುತ ಕರಿಘೂಳೇಶಗೊಳಿತಳೊ”[೩೬] ||೩||

ಪ,ಬ,ಮ ಈ ಮೂರು ಅಕ್ಷರಗಳು ಹಾಡಿನಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಪ,ಬ,ಮ ಅಕ್ಷರಗಳಿಲ್ಲ ಎಂದ ಮೇಲೆ ತುಟಿಗೆ ತುಟಿ ಹತ್ತುವುದಿಲ್ಲ. ರಾಮಲಿಂಗರು ಈ ಪದ ರಚಿಸುವಾಗ ಈ ಅಂಶಗಳನ್ನು ಮುಂದಿಟ್ಟುಕೊಂಡು ಅಥವಾ ಅನುಭವಕ್ಕೆ ಬಂದ ಹಾಗೇ ಪದ ರಚಿಸಿದರೋ ಇದು ಅವರಿಗೆ ಬಿಟ್ಟ ವಿಷಯ ಆದರೂ ಈ ಪದ ರಚಿಸಿದ ಮೇಲೆ ಅವರ ಪಾಂಡಿತ್ಯ ಜನಪದರಿಗೆ ಪ್ರದರ್ಶನಗೊಂಡದ್ದು ಮಾತ್ರ ಸತ್ಯ.

**ಕೋನಾಪುರದ ರಾಮಪ್ಪ**

ಸೇಡಂ ತಾಲೂಕಿನ ಕೋನಾಪುರ ಗ್ರಾಮದಲ್ಲಿ ಕ್ರಿ.ಶ. ೧೯೧೦ರಲ್ಲಿ ಬಗ್ಗಮ್ಮ ಮತ್ತು ಚಂದ್ರಪ್ಪ ಎಂಬ ದಂಪತಿಗಳಿಗೆ ರಾಮಪ್ಪ ಮಗನಾಗಿ ಹುಟ್ಟಿದ. ಇವರ ಮನೆತನದ ಮೂಲ ಕಸುಬು ಹಾಲು, ಮೊಸರು ಮಾರಾಟ ಮಾಡುವುದು. ಇದರಿಂದ ಬಂದ ಹಣದಿಂದಲೇ ಈ ಕುಟುಂಬದ ಜೀವನ ನಡೆಯುತ್ತಿತ್ತು. ಊರ ಪಟವಾರಿಯ ಪ್ರೇರಣೆಯಿಂದ ಅಕ್ಷರಾಭ್ಯಾಸ ಕಲಿತ ರಾಮಪ್ಪ ಜೀವನದಲ್ಲಿ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸುತ್ತ ನಿಜಾಂ ಸರ್ಕಾರದಲ್ಲಿ ಸರ್ಕಾರಿ ಕೆಲಸಕ್ಕೆ ಸೇರಿಕೊಂಡರು. ನಿಜಾಮನ ಆಡಳಿತದಿಂದಾಗಿ ಜನರು ಅನುಭವಿಸುತ್ತಿದ್ದ ತೊಂದರೆಗಳನ್ನು ಅರಿತು, ನಿಜಾಂ ಸರ್ಕಾರಕ್ಕೆ ರಾಜೀನಾಮೆ ಕೊಟ್ಟು, ಅನ್ಯಾಯಕ್ಕೊಳಗಾದವರಿಗಾಗಿ ಹೋರಾಟದ ಜೀವನ ನಡೆಸಿದರು. ಕೊನೆಗೆ ಜೀವನದಲ್ಲಿನ ಸಾಕಷ್ಟು ತಾಪತ್ರಯಗಳಿಗೆ ಬೇಸತ್ತು ನೆಮ್ಮದಿಯನ್ನು ಹುಡುಕುತ್ತಾ ಶ್ರೀ ಮುರುಘೇಂದ್ರ ಸ್ವಾಮಿಯ ಶಿಷ್ಯನಾಗಿ ಹಲವಾರು ತತ್ವಪದಗಳನ್ನು ರಚಿಸಿದರು. ಇವರ ಹಾಡುಗಳಲ್ಲಿ ಮುಖ್ಯವಾಗಿ ಸಾಮಾಜಿಕ ವಿಡಂಬನೆ ಅಡಗಿರುವುದು ಕಂಡುಬರುತ್ತದೆ. 'ಗುರು ಮೃಗೇಂದ್ರ' ಎಂಬುದು ಇವರ ಅಂಕಿತವಾಗಿದೆ.

ಬಿಳಿ ಕಾಲಿನ ಕುದುರಿ ಬಿಟುಕೊಂಡು
ಹೋಗುತಾದ ಬಿಗಿಯಾಗಿ ಬೇಗ ಕಟ್ಟರೀ |

ಬೈಲೊಳಗ ಬರೆಗಾಲಿಲ್ಯಾಕ ಬಿಡತೀರಿ
ಕಾಲಿಗೊಂದು ಕಡಿಯದಂಥ ದಾವ ಹಚ್ಚರಿ
ಕಡ್ಲಿ ಇಟ್ಟರೆ ಅದು ಕಡಕೊಂಡು ತಿನೊದಿಲ್ಲೊ
ಕಡಿತನಕ ಅದೆ ಹಟಾರೀ |

ಬ್ಯಾಸಿಗಾಗ ಆಯಿತಪ್ಪ ಸಾಯೋ ಹೆಗಾರಿ
ದ್ಯಾಸದಾಗ ನೆನಿತಾದ ಹೆಣ್ಣಾ ಕುದರಿ
ಬಿಟ್ಟಿಮಯ್ಯಾ ಕುದುರಿ ಕಟ್ಟಿ ಮೇಸಿದರೇನು
ಗಟ್ಟಿ ಮನಸು ಯಾಕ ಮಾಡೇತ್ರಿ |

ವಟ್ಟೆನ್ಯಾಗ ಕೆಟ್ಟ ಗುಣಾ ಅದರಲಿ ಸೇರ್‍ಯಾವರಿ
ಬಿಟ್ಟು ಕೊಟ್ಟರೆ ಘಟ್ಟಿಮುಟ್ಟ ತಾನೇ ಆಗತಾದರಿ
ಹುಲ್ಲು ತಿನಲೆಂದು ಕುದರಿ ಹೋದಾಗ ಕಟ್ಟಿದ್ರೆ
ಕಲ್ಲು ಕಟಿಗಿ ಕಡೆ ನೋಡುತಾದ್ರಿ |

ಗಡಬಡಮಾಡಿ ಗೂಟಾ ಕಿತ್ತೊಯತ್ನಾ ಮಾಡತಾದ್ರಿ
ಹಲ್ಲು ಕಿಸ್ತು ಮೋತಿಮ್ಯಾಕಮಾಡಿ ನೋಡುತಾದ್ರಿ
ಎಷ್ಟು ಲಾಭಿದ್ದರೇನು ಎಷ್ಟು ಶೋಭಿದ್ದರೇನು
ಕಟ್ಟಬಾರದಿಂಥ ಕುದರಿ ರೂಢಿಯೊಳಗರಿ |

ದಿಟ್ಟವಾದ ಕೊನಪುರದ ಗುರುರಾಜನಗರೀ
ಅರ್ಪಿತ ಮಾಡಿ ನೀವು ಆನಂದ ಪಡೆಯಾರಿ"[೨]

**ರುಕುಮುದ್ದೀನ ಸಾಹೇಬ**

ಸೇಡಂ ತಾಲೂಕಿನ ಕಲ್ಕಂಬದಲ್ಲಿ ಕ್ರಿ.ಶ. ೧೯೩೦ರಲ್ಲಿ ಮಹ್ಮದ್ ಅಮೀನೂದ್ದೀನ್ ಹಾಗೂ ಅಮೀದಾಬಿ ದಂಪತಿಗಳ ಉದರದಲ್ಲಿ ರುಕುಮುದ್ದೀನ ಸಾಹೇಬರ ಜನನವಾಯಿತು. ಹುಟ್ಟಿದ್ದು ಮುಸ್ಲಿಂ ಜನಾಂಗದಲ್ಲಾದರೂ ಬಾಲ್ಯದಿಂದಲೇ ಶರಣರ, ಅನುಭಾವಿಗಳ ಮಾರ್ಗದಲ್ಲಿ ನಡೆದ ರುಕ್ಮುದ್ದೀನ್ ಶ್ರೀ ಕರಿಘೂಳೇಶ್ವರರಿಂದ ಅನುಭಾವದ ದೀಕ್ಷೆ ಪಡೆದು ಶರಣ ಸಂಸ್ಕೃತಿಯಲ್ಲಿ ಮುಂದುವರೆದರು. ರುಕ್ಮುದ್ದೀನ್ ಸಾಹೇಬರ ಅನುಭಾವದ ಹಾಡುಗಳಲ್ಲಿ ಗುರುಸ್ತುತಿ, ವಿಡಂಬನೆ, ಮೇಲು-ಕೀಳು ಸಂಬಂಧಗಳ ಬಗ್ಗೆ ಮುಕ್ತ ಚರ್ಚೆ ಕಂಡುಬರುವುದರ ಜೊತೆಗೆ ಹಿಂದೂ-ಮುಸ್ಲಿಂ ಐಕ್ಯತೆಯ, ಕೋಮು ಸೌಹಾರ್ದತೆಯ ಹಾಡುಗಳು ಇವರ ಅನುಭಾವದಲ್ಲಿ ಕಾಣಬಹುದಾಗಿದೆ. ಎಲ್ಲ ತತ್ವಪದಕಾರರಂತೆ, ತಮ್ಮನ್ನು ಹುಡುಕಿ ಕೊಂಡು ಬಂದ ಭಕ್ತರಿಗೆ ನೀತಿ ಬೋಧನೆ ಮಾಡುತ್ತಿದ್ದರು. ಅತಿಮಾನುಷ ಶಕ್ತಿಗಳಿಂದ ತೊಂದರೆಗೊಳ ಗಾದವರಿಗೆ ಮಾನಸಿಕ ಚಿಕಿತ್ಸೆ, ದೈಹಿಕ ರೋಗದಿಂದ ಬಳಲುವವರಿಗೆ ಗಿಡಮೂಲಿಕೆಗಳಿಂದ ಔಷಧೋಪಚಾರ ಮಾಡುತ್ತಾ ಅವರಿವರೆನ್ನದೆ ಎಲ್ಲರಲ್ಲಿ ಒಂದಾಗಿ ಬೆರೆತು ಅನುಭಾವದ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದರು. ಇತ್ತೀಚೆಗೆ ಇವರ ಅನುಭಾವದ ಹಾಡುಗಳನ್ನು ಶರಣ ಪ್ರಕಾಶನ ಗುಲಬರ್ಗಾದವರು ಭಜನೆಯ ಹಾಡು ಗಳೆಂದು ಮುದ್ರಿಸಿದ್ದಾರೆ.

**ಮಾನವನಾಗಿ ಹುಟ್ಟಿ ಬಂದ ಈ ಭವಕ**

"ಮಾನವನಾಗಿ ಹುಟ್ಟಿ ಬಂದ ಈ ಭವಕ
ಇಲ್ಲಿ ಮೆಚ್ಚಿಕುಂತಿ ಹೆಣ್ಣಿನ ಮೋಹಕ
ನೀನು ಮೆಚ್ಚಿಕುಂತಿ ಹೆಣ್ಣಿನ ಮೋಹಕ

ಎಷ್ಟು ಜನ್ಮ ತಿರುಗಿ ಬಂದಿ ಈ ಜಗಕ
ಇದು ಇನ್ನೂ ತಿಳ್ದೀ ಇಲ್ಲ ನಿನ್ನ ಮನಕ
ಶಾಶ್ವತವಲ್ಲೋ ಜನ್ಮ ಕಡೆತನಕ
ಶಿವಧ್ಯಾನ ಮಾಡೋ ನೀ ಸಾಯತನಕ

ಹೊಲ ನನ್ನದೆಂದಿ ಮನಿ ನನ್ನದೆಂದಿ
ಬಂಗಾರ ಬೆಳ್ಳಿ ಅದು ನನ್ನದೆಂದಿ
ಮಡದಿ ಮಕ್ಕಳೆಲ್ಲ ನನ್ನವರೆಂದಿ
ಆಸೆ ಮಾಡಿ ಹಿಂದೆ ನೀ ಬಿಟಿಷ್ಟೆ ಬಂದಿ

ಹಣ ಆಸ್ತಿ ಬಹಳಷ್ಟು ಗಳಿಸಿ ಇಟ್ಟಿ
ಲೆಕ್ಕಿಲ್ಲದೆ ಸಾಲ ನೀ ಬಡ್ಡಿಗೆ ಕೊಟ್ಟಿ
ಬಡ್ಡಿಗೆ ಚಕ್ರಬಡ್ಡಿ ಹಾಕಿ ಬಿಟ್ಟಿ
ಬೆಳಸಿದಿ ಕೊಡದಂಥ ಡೊಳ್ಳು ಹೊಟ್ಟಿ

ದೇಶಕಧಿಕವಾದ ವಾಡೀಪುರ ನೋಡು
ಅದು ಸತ್ಯಶಿವಶರಣರ ಬೀಡು
ಅನುದಿನ ಗುರುಧ್ಯಾನವ ಮಾಡು
ಚಿರಮುಕ್ತಿಯ ಮಾರ್ಗ ನೀ ಬೇಡು"[೩೮]

**ಕೋತಿಯಂತೆ ಕುಣಿದಾಡಬೇಡ**

"ಕೋತಿಯಂತೆ ಕುಣಿದಾಡಬೇಡ
ನೀತಿಮಾರ್ಗ ಹಿಡಿಯೋ ಮೂಢ

ಹಡೆದ ತಾಯಿ-ತಂದೆಗೆ ದೂರಾಗಿ
ಮಡದಿ ಮಕ್ಕಳಿಗೆ ಹಿತವಾಗಿ
ದುಡಿದುಡಿದು ಮುದಿ ಕೋಣನಾದಿ
ಬಿದ್ದೋಗೊ ಕಾಲಕ್ಕೆ ನಿನಗ್ಯಾರೋ ಅನಾದಿ

ಹಣ ಇದ್ದಾಗಲೇ ಹರ ಸೇವೆ ಮಾಡು
ಗುಣ ಇದ್ದಾಗಲೇ ಗುರು ಸೇವೆ ಮಾಡು

ನೆಣ ಇದ್ದಾಗಲೇ ನಾಡ ಸೇವೆ ಮಾಡು
ಪಣ ಇದ್ದಾಗಲೇ ರಣ ಸೇವೆ ಮಾಡು

ಈ ಧರೆಯ ಭೋಗವ ಬಿಟ್ಟು
ಕಲಕಂಬದತ್ತ ನದರಿಟ್ಟು
ಗುರು ಭೋದಕ ಕಿವಿಗೊಟ್ಟು
ನಡಿ ನೀ ಕರಿಘೂಳೇಶನಲಿ ದೃಢವಿಟ್ಟು"[೨೯]

**ರಂಜೋಳದ ತಿಪ್ಪಣ್ಣ ಮಾಸ್ತರ**

ಸೇಡಂ ತಾಲೂಕಿನ ರಂಜೋಳದಲ್ಲಿ ಕ್ರಿ.ಶ. ೧೯೨೦ರ ಸುಮಾರಿಗೆ ಹಣಮಪ್ಪ ಹಾಗೂ ವೆಂಕಮ್ಮನವರ ಎಂಟನೆಯ ಮಗನಾಗಿ ತಿಪ್ಪಣ್ಣ ಜನಿಸಿದನು. ಬಡತನದಲ್ಲಿ ಹುಟ್ಟಿ ಬೆಳೆದ ತಿಪ್ಪಣ್ಣನಿಗೆ ಹೆಚ್ಚಿನ ಶಿಕ್ಷಣ ಪಡೆದುಕೊಳ್ಳಲಾಗಲಿಲ್ಲ. ಓದಿನ ನಡುವೆಯೇ ಶಾಲೆ ಬಿಟ್ಟು ರಂಜೋಳದ ಬುಗ್ಗಪ್ಪ ಬೋಯಿನ್ ಎಂಬುವವರಲ್ಲಿ ದೊಡ್ಡಾಟಗಳನ್ನು ಕಲಿತು ಮುಂದೆ ದೊಡ್ಡಾಟದ ಮಾಸ್ತರನಾದ. ವಯಸ್ಸು ಕಳೆದಂತೆ ಆರ್ಥಿಕ ಮತ್ತು ಸಾಮಾಜಿಕವಾಗಿ ಹೆಚ್ಚು ತೊಂದರೆಗೆ ಒಳಗಾಗಿದ್ದರಿಂದ ಇವರ ಮನಸ್ಸು ಆಧ್ಯಾತ್ಮದ ಕಡೆಗೆ ವಾಲಿ ಶ್ರೀ ಮುರುಘೇಂದ್ರ ಸ್ವಾಮಿಗಳ ಪ್ರಭಾವದಿಂದಾಗಿ ಮುಂದೆ 'ಜಾಕನಳ್ಳಿ' ಮತ್ತು 'ಶಿವಯೋಗಿ' ಅಂಕಿತದಲ್ಲಿ ತಿಪ್ಪಣ್ಣ ನೂರಾರು ತತ್ವಪದಗಳನ್ನು ರಚಿಸಿದನು. ತಿಪ್ಪಣ್ಣನ ಕೌಟುಂಬಿಕ ಸ್ಥಿತಿ ಚೆನ್ನಾಗಿರಲಿಲ್ಲವಾದ್ದರಿಂದ ಕೊನೆಯ ದಿನಗಳಲ್ಲಿ ರಂಜೋಳದ ಮಸೀದಿಯಲ್ಲಿ ವಾಸವಾಗಿರಬೇಕಾಯಿತು. ಇಂತಹ ಕಷ್ಟ ಜೀವನವನ್ನು ನಡೆಸಿದ ತಿಪ್ಪಣ್ಣನ ತತ್ವಪದಗಳಲ್ಲಿ ಹೆಚ್ಚಾಗಿ ಅನುಭಾವವನ್ನು ಕಾಣಬಹುದಾಗಿದೆ.

"ಗೌಂಡ್ಯರ್ಯಾವ ದೇಶದವರಮ್ಮ | ಪುಂಡರಿಬ್ಬರು
ದಿಂಡುಗಲ್ಲಿನ ಗ್ವಾಡಿ ನೋಡಮ್ಮ ||

ತಂಡ ತಂಡ ಒಂಬತ್ತಂಕಣ
ದಿಂಡಿಗೆ ಸರ ತುಂಡು ಕೂಡಿಸಿ |
ಕಿಂಡಿ ಸಾವಿರ ಬಂಡಿ ಹಾಕಿ
ಸಂಡಾಸೆಂಬ ಬಚ್ಚಲ ತಿಳಿಯಮ್ಮ

ಬಿಚ್ಚುಗಲ್ಲಿನ ಪೇಟಿ ನೋಡಮ್ಮ | ಒಳ ಮುಚ್ಚಿಕೊಂಡು
ಗಚ್ಚು ಎಷ್ಟು ಹಚ್ಯಾರಿವರಮ್ಮ
ನಿಚ್ಚಣಕಿಯನ್ನು ಎರಿ ನೀನು
ಬಿಚ್ಚಿದ ಕಟ್ಟಿ ಕೆಳಗ ತಾರಮ್ಮ ||

ಏಳು ಕಂಬದ ಕೋಣೆ ನೋಡಮ್ಮ | ಒಳಗಡೆ
ಗೌರಿ ಮೂಡ ಸಿಂಗರಾದಮ್ಮ |
ಏಳು ಕಲ್ಲಿನೊಳಗ ಆರು ವರ್ಣದ ಚಿತ್ರ ಬರೆದು
ಆರು ಭೋದು ಮೂರೆಗಡಗಿ ಎಂಟು ಕಿಂಡಿ ಕೂಡಿಶ್ಯಾರಮ್ಮಾ[೮೦] ||

ಒಟ್ಟಾರೆಯಾಗಿ ವಚನಚಳುವಳಿಯ ನಂತರ ಈ ಭಾಗದಲ್ಲಿ ಕನ್ನಡ ತಲೆ ಎತ್ತಿದ್ದು ಪ್ರಮುಖವಾಗಿ ತತ್ವಪದಕಾರರ ಸಂದರ್ಭದಲ್ಲಿ. ಮುಸ್ಲಿಂ ಆಳ್ವಿಕೆಯ ಕಾಲದಲ್ಲಿ ಹೈದರಾಬಾದ್-ಕರ್ನಾಟಕದ ಅನೇಕ ಭಾಗಗಳಲ್ಲಿ ಕನ್ನಡ ಜನಸಾಮಾನ್ಯರ ಮನೆಯಲ್ಲಿ ಅಡಗಿ ಕುಳಿತಿತ್ತು. ಅದಕ್ಕೆ ಹೊರಬಂದು ಧೈರ್ಯವಾಗಿ ಮುನ್ನಡೆಯಬೇಕಾದರೆ ಉರ್ದುವಿನ ಅಬ್ಬರ, ಆರ್ಭಟಕ್ಕೆ ಎದುರಾಗಿ, ಕನ್ನಡ ತನ್ನ ಸ್ವಂತ ಶಕ್ತಿಯಿಂದ ನಿಲ್ಲುವ ಶಕ್ತಿ ಕಳೆದುಕೊಂಡಿತ್ತು. ರಾಜಭಾಷೆಯ ವಿರುದ್ಧ ಕನ್ನಡದ ಉಳಿವು ತೀರ ಕಷ್ಟವಾಗಿತ್ತು. ಕೇವಲ ಪಟ್ಟಣ ನಗರಗಳಲ್ಲಿ, ಅದು ಸಮಾಜದಲ್ಲಿನ ಕೆಲವೇ ಕೆಲವು ಜನರ ಮನೆಯಲ್ಲಿ ಕಂಡುಬರುತ್ತಿದ್ದ ಕನ್ನಡ, ಗಡಿಗ್ರಾಮಗಳಲ್ಲಿ ಅದರ ಹೆಸರೇ ಇರಲಿಲ್ಲ. ಏಕೆಂದರೆ ಒಂದು ಕಡೆ ಆಡಳಿತ ಭಾಷೆ ಉರ್ದು. ಮತ್ತೊಂದೆಡೆ ತೆಲಗು ಇವೆರಡರ ಮಧ್ಯೆ ಕನ್ನಡ ಮಾಸಿಹೋಗಿತ್ತು. ಇಂತಹ ಸಂಕಷ್ಟದ ಸ್ಥಿತಿಯಲ್ಲಿ ತತ್ವಪದಕಾರರು ತಮ್ಮ ಅನುಭಾವ ಸಾಹಿತ್ಯದ ಮೂಲಕ ಕನ್ನಡಕ್ಕೆ ಈ ಸಂದರ್ಭದಲ್ಲಿ ಆಸರೆಯಾದರು.

ಈವರೆಗೆ ನೋಡಿದ ಈ ಎಲ್ಲ ತತ್ವಪದಕಾರರು ಕರ್ನಾಟಕ-ಆಂಧ್ರದ ಜೊತೆಗೆ ಭಾಷಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಂಬಂಧವನ್ನು ಇಟ್ಟುಕೊಂಡವರಾಗಿದ್ದು ಇವರು ನೆಲೆಸಿದ ಬಳಿಚಕ್ರ, ಕೂಡಲೂರು, ಐನೂಲಿ, ಇಟಗಾ, ಮೋಟನಳ್ಳಿ, ಎಲೇರಾಜೋಳ, ಖಾನಾಪುರ, ಕೋನಾಪುರ, ರಂಜೋಳ, ಕಲ್ಕಂಬ, ಕೋಲಕುಂದಾ, ಸಿದ್ದಾಪುರ, ದುಗನೂರು - ಈ ಗ್ರಾಮಗಳಲ್ಲಿ ಚಿಂಚೋಳಿ, ಸೇಡಂ, ಯಾದಗೀರ ತಾಲ್ಲೂಕುಗಳ ಗಡಿಗ್ರಾಮಗಳಾಗಿದ್ದು ಅಲ್ಲಿನ ಬಹಳಷ್ಟು ಜನರು ತೆಲುಗು ಭಾಷೆಯನ್ನು ಬಳಸುವವ ರಾಗಿದ್ದಾರೆ. ಇಂತಹ ವಾತಾವರಣದಲ್ಲಿ ತತ್ವಪದಕಾರರು ಕನ್ನಡದ ಜೊತೆ ಜೊತೆಗೆ ತೆಲುಗು ಭಾಷೆಯನ್ನು ಬಳಸಬೇಕಾಗಿ ಬಂತು. ಇದಲ್ಲದೆ ತತ್ವಪದಕಾರರು ತೆಲುಗು ಭಾಷೆ ಬಲ್ಲವರಾಗಿದ್ದು ತೆಲುಗು ಭಾಷೆ ಯಲ್ಲಿಯೂ ತತ್ವಪದ ರಚಿಸಿದರು. ಈ ಎಲ್ಲ ತತ್ವಪದಕಾರರಲ್ಲಿ ಶ್ರೀ ಮುರುಘೇಂದ್ರ ಸ್ವಾಮಿಗಳು ಈ ಭಾಗದಲ್ಲಿ ಮುಖ್ಯರಾಗುತ್ತಾರೆ. ಅವರು ಸುತ್ತಮುತ್ತಲ ಪ್ರದೇಶದಲ್ಲಿ ಹೆಚ್ಚು ಪ್ರಚಾರದಲ್ಲಿದ್ದು, ಅವರ ಶಿಷ್ಯ ಪರಂಪರೆಯೇ ದೊಡ್ಡದಿದೆ. ಇವರ ಶಿಷ್ಯರಲ್ಲಿ ಕೋನಾಪುರದ ರಾಮಪ್ಪ, ರಂಜೋಳದ ತಿಪ್ಪಣ್ಣ ಮಾಸ್ತರ, ಕಲ್ಕಂಬದ ರುಕ್ಮುದಿನ, ಸಿದ್ದಾಪುರದ ನರಸಪ್ಪ ಸಾಧು, ರಾಚೋಟಿ ವೀರಸ್ವಾಮಿ ಮತ್ತು ಬಾಬಯ್ಯ ಮುಖ್ಯರಾದವರು. ಇವರೆಲ್ಲರು ಶ್ರೀ ಮುರುಘೇಂದ್ರ ಸ್ವಾಮಿಯವರ ಅಂಕಿತವನ್ನಿಟ್ಟುಕೊಂಡು ಅನೇಕ ತತ್ವಪದಗಳನ್ನು ರಚಿಸಿದ್ದಾರೆ.

ಎಲ್ಲ ತತ್ವಪದಕಾರರು ಮಾಡಿದ ಮೊದಲ ಕೆಲಸವೆಂದರೆ ಸಮಾಜದಲ್ಲಿನ, ಜನರಲ್ಲಿನ ಮೌಢ್ಯತೆ ಯನ್ನು ಹೋಗುವಂತೆ ಮಾಡಿದ್ದು, ವರ್ಗ-ಸಂಘರ್ಷ, ವರ್ಣ-ಭೇದ, ತೊಡಕು-ಆತಂಕ, ಮೇಲು-ಕೀಳು

ಇಂತಹವುಗಳನ್ನು ಖಂಡತುಂಡವಾಗಿ ತಾವು ಜೀವನದಲ್ಲಿ ಕಂಡುಂಡ ಅನುಭವಗಳನ್ನು ಹಾಡಿನ ರೂಪದಲ್ಲಿ ಹಾಡುತ್ತ ಜನರನ್ನು ಎಚ್ಚರಿಸಿದರು. ಹೀಗೆ ಶುರುವಾದ ತಿದ್ದುವ-ತೀಡುವ ಕೆಲಸ ಕೇವಲ ಕನ್ನಡಿಗರಿಗೆ ಮೀಸಲಿರದೆ ಗಡಿಯಾಚೆಗಿನ ತೆಲುಗರಿಗೂ ಅನ್ವಯವಾಗುವಂತೆ ಮಾಡಿದ್ದು, ಗಡಿಯಲ್ಲಿನ ತತ್ವಪದಕಾರರ ಮೊದಲ ಭಾಷಿಕ ಯಶಸ್ಸು ಎನ್ನಬಹುದು. ಕೇವಲ ಒಂದು ಪ್ರದೇಶದ, ಒಂದು ಧರ್ಮದ, ಒಂದು ಭಾಷೆಗೆ, ತತ್ವಪದಕಾರರು ಸೀಮಿತವಾಗಿರದೆ ಹಿಂದೂ-ಮುಸ್ಲಿಂ, ಕರ್ನಾಟಕ-ಆಂಧ್ರ, ಕನ್ನಡ-ತೆಲುಗು ಹೀಗೆ ಎಲ್ಲರಿಗೂ ಬೇಕಾಗಿ ತಮಗರಿವಿಲ್ಲದಂತೆ ಜೀವಿಸಿದ್ದರು. ಇವರನ್ನು ಹುಡುಕಿಕೊಂಡು ಬಂದವರಿಗೆ ಇವರ ಹಿನ್ನಲೆ ಯಾವತ್ತಿಗೂ ಬೇಕಾಗಿರಲಿಲ್ಲ. ಬದಲಾಗಿ ಇವರಿಂದ ರಚನೆಗೊಂಡ ತತ್ವಪದ ಸಾಹಿತ್ಯ ಮುಖ್ಯ ವಾದವು. ಆದ್ದರಿಂದಲೇ ಈ ಗಡಿಭಾಗದಲ್ಲಿನ ತತ್ವಪದಕಾರರೆಲ್ಲ ತಮ್ಮ ಎಲ್ಲ ಅನುಯಾಯಿಗಳಿಗಾಗಿ ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ಭಜನೆಯ ಹಾಡುಗಳನ್ನು ಹಾಡಿ ರಚಿಸಿದರು.

ಹೇಗೆ ೧೨ನೇ ಶತಮಾನದಲ್ಲಿ ಶಿವಶರಣರು ವಚನ ಎಂಬ ಸಾಹಿತ್ಯ ಪ್ರಕಾರ ರಚಿಸಿ ಜನಸಾಮಾನ್ಯರು ಸಾಹಿತ್ಯದಲ್ಲಿ ಮೊದಲ ಬಾರಿಗೆ ಪ್ರವೇಶಿಸುವುದಕ್ಕೆ ಕಾರಣವಾದರೋ, ಹಾಗೆಯೇ ಅಂದಿನ ನಿಜಾಂ ಆಡಳಿತದ ಭಯದಿಂದ ಮಠ-ಮಂದಿರಗಳಲ್ಲಿ ಅಡಗಿ ಕುಳಿತಿದ್ದ ಕನ್ನಡವು ಹಳ್ಳಿಯ ಜನಸಾಮಾನ್ಯರ, ಹಿಂದುಳಿದವರ, ಶೋಷಿತರ ನಾಲಿಗೆಯ ಮೇಲೆ ಭಜನೆಯ ಹಾಡಿನ ಮೂಲಕ, ಯಾರ ಭಯವಿಲ್ಲದೆ, ಒಬ್ಬರಿಂದೊಬ್ಬರಿಗೆ ಕನ್ನಡ ಪ್ರಸಾರಗೊಳ್ಳುವಂತೆ ತತ್ವಪದಗಳ ಮೂಲಕ ಈ ತತ್ವಪದಕಾರರು ಮಾಡಿದರು.

ಹೀಗೆ ತತ್ವಪದಕಾರರು ಒಂದು ಕಡೆ ಕನ್ನಡ ಉಳಿಸಿ ಬೆಳೆಸುವುದರ ಜೊತೆಗೆ ತೆಲುಗು ಭಾಷೆಯಲ್ಲಿ ತತ್ವಪದಗಳನ್ನು ರಚಿಸಿ ಕನ್ನಡ-ತೆಲುಗರ ಮಧ್ಯೆ ಸೌಹಾರ್ದತೆಯ ಬೆಸುಗೆಯಾಗಿ ನಿಂತರು. ಈ ಕಾರಣ ದಿಂದಲೇ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿಗತಿಯನ್ನು ನೋಡುವಾಗ ಈ ತತ್ವಪದಕಾರರು ಮತ್ತು ಅವರು ರಚಿಸಿದ ಕನ್ನಡ-ತೆಲುಗು ಭಾಷೆಯ ತತ್ವಪದಗಳು ಭಾಷಿಕ ಮತ್ತು ಭೌಗೋಳಿಕ ಮಿತಿಯನ್ನು ಹೇಗೆ ಮೀರಿ ಬೆಳೆದವು ಎಂಬುದನ್ನು ಈವರೆಗೆ ಅವಲೋಕಿಸಿರುವುದು ಅಧ್ಯಯನದ ದೃಷ್ಟಿಯಿಂದ ಮುಖ್ಯ ವೆನಿಸುತ್ತದೆ.

**ಟಿಪ್ಪಣಿಗಳು**


೧. **ಅಚ್ಚ ಮಲ್ಲಿಗೆ ಹೂ** - ಎ.ಕೆ. ರಾಮೇಶ್ವರ, ಕವಿರಾಜಮಾರ್ಗ ಪ್ರಕಾಶನ, ಗುಲಬರ್ಗಾ, ೧೯೯೬, ಪು. ೯೬

೨. **ಭಕ್ತಿಗೀತೆಗಳು** - ಚಂದ್ರಕಾಂತ ಹೂಗಾರ, ಭಕ್ತಿಗೀತೆ ಧ್ವನಿ ಸುರಳಿ.

೩. **ಪ್ರವಾಸಿ ಕಂಡ ಇಂಡಿಯಾ** - ಸಂ. ಡಾ. ಬಿ.ಎ. ವಿವೇಕ ರೈ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು. ೪೫.

೪. **ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ** - ಪ್ರೊ.ಎನ್. ಚಂದ್ರಪ್ಪ, ಮುಂಡ ಪ್ರಕಾಶನ, ಬೆಂಗಳೂರು, ೨೦೦೨, ಪು. ೧೩೯.

೫. **ಅಚ್ಚ ಮಲ್ಲಿಗೆ ಹೂ** - ಎ.ಕೆ. ರಾಮೇಶ್ವರ, ಕವಿರಾಜಮಾರ್ಗ ಪ್ರಕಾಶನ, ಗುಲಬರ್ಗಾ, ೧೯೯೬, ಪು. ೧೩-೧೪.

೬. **ಮೋಟ್ನಳಿ ಹಸನಸಾಹೇಬ** - ಬಿ. ಮಹಾದೇವಪ್ಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬, ಪು. ೪೮.

೭. **ರನ್ನನ ಗದಾಯುದ್ಧ ಸಂಗ್ರಹ** - ಸಂ. ಪ್ರೊ. ತೀ.ನಂ. ಶ್ರೀಕಂಠಯ್ಯ, ಕಾವ್ಯಾಲಯ ಪ್ರಕಾಶನ, ಜಯನಗರ, ಮೈಸೂರು, ೨೦೦೫, ಪು. ೩೫.

೮. **ಸರಳ ಸಿದ್ಧರಾಮ ಚರಿತೆ** - ಡಾ.ಎಲ್. ಬಸವರಾಜ್, ಲೋಹಿಯಾ ಪ್ರಕಾಶನ, ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ, ೨೦೦೦, ಪು. ೯೭.

೯. **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ** - ಡಾ.ಎಂ.ಎಂ. ಕಲಬುರ್ಗಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩, ಪು. ೨೯೧.

೧೦. **ಅದೇ.,**

೧೧. **ಅಚ್ಚ ಮಲ್ಲಿಗೆ ಹೂ** - ಎ.ಕೆ. ರಾಮೇಶ್ವರ, ಕವಿರಾಜಮಾರ್ಗ ಪ್ರಕಾಶನ, ಗುಲಬರ್ಗಾ, ೧೯೯೬, ಪು. ೩೬.

೧೨. **ಅದೇ.,** ಪು. ೩೯.

೧೩. **ಅದೇ.,** ಪು. ೪೨.

೧೪. **ಅದೇ.,** ಪು. ೫೧.

೧೫. **ಅದೇ.,** ಪು. ೭೨.

೧೬. **ಅದೇ.,** ಪು. ೨೮.

೧೭. **ಅದೇ.,** ಪು. xxviii.

೧೮. **ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಾಡು** - ವೆಂಕೋಬಾದಾಸ, ಖಂಡೇರಾಯನಪಲ್ಲಿ, ಸೇಡಂ ತಾಲ್ಲೂಕು.

೧೯. **ಶಾಸನಗಳಲ್ಲಿ ಶಿವಶರಣರು** - ಡಾ. ಎಂ.ಎಂ. ಕಲಬುರ್ಗಿ, ಸಿರಿಗನ್ನಡ ಪ್ರಕಾಶನ, ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೦, ಪು. ೬.

೨೦. **ಶರಣ ಸಂಗಮ** - ಎಚ್. ಬಸವಣ್ಣ, ತೃತೀಯ ಅಖಿಲ ಭಾರತ ಶರಣ ಸಾಹಿತ್ಯ ಸಮಾವೇಶ, ಹೊಸಪೇಟೆ, ೧೯೯೦, ಪು. ೩೮.

೨೧. **ದೇಸೀ ದೃಷ್ಟಿ** - ಡಾ. ವೀರಣ್ಣ ದಂಡೆ, ಕವಿಮಾರ್ಗ ಪ್ರಕಾಶನ, ಕಲಬುರ್ಗಿ, ೨೦೦೧, ಪು. ೫೨.

೨೨. **ಶ್ರೀ ಕೂಡ್ಲೂರ ಬಸವಲಿಂಗರ ತತ್ವಪದಗಳು** - ಡಿ.ಎಸ್. ಕುಮಾರ, ಶ್ರೀಶರಣ ಪ್ರಕಾಶನ, ಕಲಬುರ್ಗಿ, ೧೯೯೪, ಪು. ೧೪.

೨೩. **ಅದೇ.**, ಪು. ೨೫.

೨೪. **ಕೂಡಲೂರು ಬಸವಲಿಂಗಪ್ಪ** - ಎಸ್.ಜಿ. ಸ್ವಾಮಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬, ಪು. ೧೦.

೨೫. **ಶ್ರೀ ಕೂಡ್ಲೂರ ಬಸವಲಿಂಗರ ತತ್ವಪದಗಳು** - ಡಿ.ಎಸ್. ಕುಮಾರ, ಶ್ರೀಶರಣ ಪ್ರಕಾಶನ, ಕಲಬುರ್ಗಿ, ೧೯೯೪, ಪು. ೨೫.

೨೬. **ಹೈದರಾಬಾದ್ ಕರ್ನಾಟಕದ ತತ್ವಪದಗಳು** - ಸಂ.ಡಾ. ಬಸವರಾಜ ಸಬರದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೨೫.

೨೭. **ಮುಸ್ಲಿಂ ತತ್ವಪದಕಾರರು** - ಪ್ರಭು ಖಾನಾಪುರೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮, ಪು. ೬.

೨೮. **ಮೋಟ್ನಳಿ ಹಸನಸಾಹೇಬ** - ಬಿ. ಮಹಾದೇವಪ್ಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬, ಪು.೮-೯.

೨೯. **ಶ್ರೀ ಕರಿಗೂಳೇಶ್ವರ ತತ್ವಪದಗಳು** - ಸಂ. ಸೋಮಶೇಖರಪ್ಪ ಎಸ್. ಭಾವಿಕಟ್ಟಿ, ಶ್ರೀಶರಣ ಪ್ರಕಾಶನ, ಕಲಬುರ್ಗಿ, ೨೦೦೩, ಪು. ೫೦.

೩೦. **ಅದೇ.**, ಪು. ೬೫.

೩೧. **ನಿಜಾನಂದ ಕೈವಲ್ಯವು** - ಶ್ರೀ ಅವಧೂತ ಶ್ರೀ ಗುರುರಾಮಲಿಂಗ ಸ್ವಾಮಿಗಳು ಹಾಗೂ ವರಕವಿ ಶ್ರೀ ಗುರು ಮುರುಘೇಂದ್ರ ಸ್ವಾಮಿಗಳು, ಪ್ರಕಾಶಕರು ಶ್ರೀ ವಿರೂಪಾಕ್ಷ ಸ್ವಾಮಿಗಳು, ದಿಗ್ಗಾವಿ, ೧೯೬೫, ಪು. ೫೦.

೩೨. **ಅದೇ.**, ಪು. ೫೮.

೩೩. **ಅದೇ.**, ಪು. ೯೩.

೩೪. **ಅದೇ.**, ಪು. ೧೧೩.

೩೫. **ಅದೇ.,** ಪು. ೨೨.

೩೬. **ಅದೇ.,** ಪು. ೫೫.

೩೭. **ಹೈದರಾಬಾದ್ ಕರ್ನಾಟಕದ ತತ್ವಪದಗಳು** - ಸಂ.ಡಾ. ಬಸವರಾಜ ಸಬರದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೮೪-೮೫.

೩೮. **ಅಪರೋಕ್ಷ ಜ್ಞಾನ-ಜ್ಯೋತಿ** - ಡಾ. ರುಕ್ಮುದ್ದೀನ್ ಸಾಹೇಬ, ಶ್ರೀಶರಣ ಪ್ರಕಾಶನ, ಗುಲಬರ್ಗಾ, ೧೯೯೭, ಪು. ೧೬.

೩೯. **ಅದೇ.,** ಪು. ೨೫.

೪೦. **ಹೈದರಾಬಾದ್ ಕರ್ನಾಟಕದ ತತ್ವಪದಗಳು** - ಸಂ.ಡಾ. ಬಸವರಾಜ ಸಬರದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೯೭-೯೮.

• • •

**ಕ**ರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ಸ್ಥಿತಿ-ಗತಿಗಳನ್ನು ಆ ಪ್ರದೇಶದಲ್ಲಿನ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಆಡಳಿತಾತ್ಮಕ ಮತ್ತು ಅಲ್ಲಿನ ಗ್ರಾಮೀಣ ಜೀವನಾವಶ್ಯಕತೆಗಳ ಆಧಾರದ ಮೇಲೆ, ಸಾಮಾಜಿಕ ಅಂಶಗಳಲ್ಲಿ ಜನರ ಜೀವನಾವರ್ತನ ಆಚರಣೆಗಳಾದ ಗರ್ಭಾವಸ್ಥೆ, ಮಗುವಿನ ಜನನ, ಋತುಮತಿ, ವಿವಾಹ, ಶವಸಂಸ್ಕಾರ ಮತ್ತು ಅವರು ಅನುಸರಿಸುವ ಸೂತಕಗಳ ಕುರಿತಾದ ಆಚರಣೆ, ರೀತಿ-ನೀತಿ, ಆಚಾರ-ವಿಚಾರಗಳನ್ನು ಮತ್ತು ಪ್ರಸ್ತುತ ಸಂದರ್ಭಗಳಲ್ಲಿ ಎಷ್ಟರಮಟ್ಟಿಗೆ ಇವು ಸಾಮಾಜಿಕ ಭದ್ರತೆಗೆ ಕಾರಣಗಳಾಗುತ್ತವೆ ಈ ಆಚರಣೆಗಳು ಇಲ್ಲಿನ ಸಾಮಾಜಿಕ ಸ್ಥಿತಿಗತಿಗಳಿಗೆ ಹೇಗೆ ಪೂರಕವಾಗಿವೆ ಎಂಬುದನ್ನು ನೋಡಬಹುದಾಗಿದೆ. ಶೈಕ್ಷಣಿಕ ಅಂಶಗಳನ್ನು ತೆಗೆದುಕೊಂಡಾಗ ಯಾಕೆ ಈ ಪ್ರದೇಶದ ಗಡಿಭಾಗ ಶೈಕ್ಷಣಿಕವಾಗಿ ಹಿಂದುಳಿದಿದೆ. ಇದಕ್ಕೆ ಕಾರಣವಾಗುವ ಚಾರಿತ್ರಿಕ ಮತ್ತು ಪ್ರಸ್ತುತ ಕಾರಣಗಳ ಮಾಹಿತಿಯನ್ನು ಸಂಗ್ರಹಿಸಿ ಇವುಗಳ ಆಧಾರದ ಮೇಲೆ ಇಲ್ಲಿನ ಶೈಕ್ಷಣಿಕ ಸ್ಥಿತಿಗತಿಯನ್ನು ಅವಲೋಕಿ ಸಲ್ಪಟ್ಟಿದೆ. ಅಲ್ಲದೇ ಪ್ರಮುಖವಾಗಿ ಈ ಗಡಿಪ್ರದೇಶದ ಆರ್ಥಿಕ ಹಿಂದುಳಿಯುವಿಕೆಗೆ ಕಾರಣವಾಗುವ ಕಾರಣಗಳನ್ನು ಇಲ್ಲಿನ ಭೂಗರ್ಭ ಸಂಪತ್ತು, ಕೃಷಿ ಯೋಗ್ಯ ಭೂಮಿ, ಕೈಗಾರಿಕೆಗಳಂತಹ ಆರ್ಥಿಕ ವಲಯವನ್ನು ಮುಂದು ಮಾಡಿಕೊಂಡು ಇಲ್ಲಿನ ತಲಾ ಆದಾಯ, ಕೃಷಿಯಲ್ಲಿನ ಆಧುನಿಕ ಸುಧಾರಣೆ, ಭೂಗರ್ಭದಲ್ಲಿನ ಕಚ್ಚಾವಸ್ತುಗಳಿಗನುಗುಣವಾಗಿ ಸ್ಥಾಪಿಸಬಹುದಾದ ಕೈಗಾರಿಕೆಗಳ ಕುರಿತು ವಿವೇಚಿಸುತ್ತಾ ಇವುಗಳ ಅಭಿವೃದ್ಧಿಯಿಂದ ಇಲ್ಲಿನ ಆರ್ಥಿಕ ಸ್ಥಿತಿಗತಿಗಳನ್ನು ಮೇಲ್ಮಟ್ಟಕ್ಕೆ ಏರಿಸಬಹುದಾಗಿದೆ. ಒಟ್ಟಾರೆ ಯಾಗಿ ಇಲ್ಲಿನ ಸ್ಥಿತಿಗತಿಗಳಿಗೆ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಅಂಶಗಳು ಹೇಗೆ ಕಾರಣವಾಗುತ್ತವೆ ಮತ್ತು ಅಭಿವೃದ್ಧಿಯಲ್ಲಿ ಅವುಗಳ ಪಾತ್ರ ಏನು ಎಂಬುದನ್ನು ಈ ಮುಂದೆ ನೋಡಲಾಗಿದೆ.

**೪.೧. ಸಾಮಾಜಿಕ ಸ್ಥಿತಿಗತಿ**

ಮನುಷ್ಯ ಸಮಾಜಜೀವಿ. ಸಮಾಜದಲ್ಲಿ ಹುಟ್ಟಿ ಸಮಾಜದಲ್ಲಿಯೇ ಸಾಯುವ ಅನಿವಾರ್ಯತೆ ಮನುಷ್ಯನಿಗಿದೆ. ಇಲ್ಲಿ ಸಮಾಜ ಎಂಬುದು ಒಂದು ಧರ್ಮ, ಒಂದು ಜಾತಿ, ಇಲ್ಲವೇ ಒಂದು ಸಮುದಾಯ ಎನ್ನುವ ಅರ್ಥದಲ್ಲಿ ನೋಡಬಹುದು. ಪ್ರತಿಯೊಂದು ಸಮಾಜವು ತನ್ನ ಅಳಿವು ಉಳಿವಿಗಾಗಿ ಅನೇಕಾನೇಕ ರೀತಿ-ನೀತಿ, ಕಟ್ಟಳೆ ಸಿದ್ಧಾಂತಗಳನ್ನು ರಚಿಸಿಕೊಂಡು ಇವುಗಳ ಅಡಿಯಲ್ಲೇ ಆ ಸಮಾಜದ ಒಳಗಿನವರೆಲ್ಲ ಜೀವನ ನಡೆಸುವಂತೆ ಮೇಲಿಂದ ಮೇಲೆ ಅವರಿಗೆ ಸಹಾಯ ಸಹಕಾರಗಳನ್ನು ನೀಡುತ್ತಿರುತ್ತದೆ. ಯಾವುದೇ ಒಂದು ಸಮಾಜವನ್ನು ತೆಗೆದುಕೊಂಡಾಗ ಅದು ಮುಖ್ಯವಾಗಿ ಮಾನವೀಯ ಸಂಬಂಧಗಳನ್ನು ಎತ್ತಿಹಿಡಿದಿ ರುತ್ತದೆ. ಆದ್ದರಿಂದಲೇ ಸಮಾಜದಲ್ಲಿ ಎಲ್ಲರೂ ಒಂದಿಲ್ಲದೊಂದು ಕಾರಣಗಳಿಗೆ ಅಕ್ಕಪಕ್ಕದವರ ಸಹಾಯ ಸಹಕಾರ ಪಡೆಯಬೇಕಾಗುತ್ತದೆ. ಈ ಸಮಾಜದ ವ್ಯಾಪ್ತಿಗೊಳಪಡುವವರೆಲ್ಲ ಸಮಾಜ ನಿರ್ಧರಿಸುವ

ನಿರ್ಧಾರಗಳಿಗೆ ಮನ್ನಣೆಯನ್ನು ನೀಡಬೇಕಾಗುತ್ತದೆ. ಸಮಾಜದ ನಿರ್ಣಯಗಳಿಗೆ ವಿರುದ್ಧವಾದರೆ ಆ ಸಮಾಜದಿಂದ ದೂರ ಸರಿಯಬೇಕಾಗುತ್ತದೆ. ಒಂದು ವೇಳೆ ಹೀಗೆ ಒಂದು ಸಮಾಜದಿಂದ ದೂರ ಉಳಿದರೂ, ತದನಂತರ ಮತ್ತೇ ಅದೇ ಸಮಾಜಕ್ಕೆ, ಇಲ್ಲವೇ ಇನ್ನೊಂದು ಸಮಾಜಕ್ಕೆ ಹೊಂದಿಕೊಳ್ಳಲೇ ಬೇಕಾಗುತ್ತದೆ. ಅಂತಲೆ ಮನುಷ್ಯ ಸಂಘಜೀವಿ, ಸಮಾಜಜೀವಿ ಎಂದು ಹೇಳಲಾಗುವುದು. ಸಮಾಜ ಎಂದೊಡನೆ ಅದಕ್ಕೊಂದು ಹುಟ್ಟು, ಬೆಳವಣಿಗೆ, ರೀತಿ-ನೀತಿ, ಸಿದ್ಧಾಂತ, ತತ್ವಗಳಿರುವುದು ನಮ್ಮೆದುರಿಗೆ ಬರುತ್ತವೆ. ಆದರೆ ಪ್ರಸ್ತುತ ಈ ಅಧ್ಯಯನದಲ್ಲಿ ಸಮಾಜ ಎಂದೊಡನೆ ಕೇವಲ ಒಂದೇ ಸಮಾಜಕ್ಕೆ ಮೀಸಲಾಗಿರದೆ ಇಡೀ ಅಧ್ಯಯನದ ವ್ಯಾಪ್ತಿಗೊಳಪಡುವ ಮತ್ತು ಭೌಗೋಳಿಕತೆಯಲ್ಲಿ ಬರುವ ಹತ್ತು ಹಲವು ಸಮಾಜಗಳು ಎಂದು ತಿಳಿಯಲಾಗಿದ್ದು, ಒಂದು ಸಮೂಹ ಇನ್ನೊಂದು ಸಮೂಹದೊಂದಿಗೆ ಹೇಗೆ ತನ್ನ ಸಾಮಾಜಿಕ ಅನ್ಯೋನ್ಯತೆಯನ್ನು ಉಳಿಸಿ, ಬೆಳೆಸಿಕೊಂಡು ಬಂದಿದೆ. ಹಾಗೂ ಆದರ್ಶ ಸಮಾಜದ ಅಸ್ತಿತ್ವಕ್ಕಾಗಿ ಅಲ್ಲಿನ ಜನರು ಕಟ್ಟಿಕೊಂಡಿರುವ ಆಶಯ. ಈ ಆಶಯದ ಹಿನ್ನೆಲೆಯಲ್ಲಿ ಬರುವ ಜೀವನಾವರ್ತನ ಆಚರಣೆಗಳಾದ ಗರ್ಭಾವಸ್ಥೆ, ಮಗುವಿನ ಜನನ, ಋತುಮತಿ, ವಿವಾಹ, ಶವಸಂಸ್ಕಾರ, ಸೂತಕಗಳು ಮತ್ತು ಇದರೊಂದಿಗೆ ಮನೆ, ಕುಟುಂಬ ಗ್ರಾಮ ಇವುಗಳ ಹಿನ್ನೆಲೆಯಲ್ಲಿಯೇ ಸಮಾಜದ ಅಸ್ತಿತ್ವ ನೆಲೆ ಕಂಡುಕೊಂಡಿರುವುದರಿಂದ ಈ ಅಂಶಗಳನ್ನು ಇಲ್ಲಿ ಕಲೆ ಹಾಕಿ ವಿಶ್ಲೇಷಿಸಲಾಗಿದೆ.

**೪.೧.೧. ಗರ್ಭಾವಸ್ಥೆ ಮತ್ತು ಮಗುವಿನ ಜನನ :**

ಮದುವೆಯೆಂಬ ಸಾಮಾಜಿಕ ಕಟ್ಟಳೆಗೆ ಒಳಗಾದ ಮೇಲೆ ಗಂಡು ಹೆಣ್ಣಿನಲ್ಲಿ ನಿಸರ್ಗ ಸಹಜ ಪ್ರವೃತ್ತಿಗಳಲ್ಲೊಂದಾದ ಲೈಂಗಿಕತೆ ಪಕ್ವವಾಗಿ ಹೆಣ್ಣು ಗರ್ಭಾವಸ್ಥೆಗೆ ಕಾಲಿಡುತ್ತಾಳೆ. ಗರ್ಭಿಣಿಯಾದ ಹೆಣ್ಣಿಗೆ ಮೊಟ್ಟಮೊದಲು ಸೀಮಂತ ಕಾರ್ಯಕ್ರಮವನ್ನು ಮೂರನೆಯ, ಆರನೆಯ ಇಲ್ಲವೆ ಒಂಬತ್ತನೆ ತಿಂಗಳಲ್ಲಿ ಮಾಡುವರು. ತಮ್ಮ ಹತ್ತಿರದ ಸಂಬಂಧಿಕರನ್ನು ನೆರೆಹೊರೆಯವರನ್ನು ಮತ್ತು ಮಿತ್ರರನ್ನು ಈ ಸೀಮಂತ ಕಾರ್ಯಕ್ಕೆ ಕರೆದು ಇವರೆಲ್ಲರ ಸಮ್ಮುಖದಲ್ಲಿ ಗರ್ಭಿಣಿಯಾದ ಸ್ತ್ರೀಗೆ ಹಸಿರು ಇಲ್ಲವೇ ಕೆಂಪು ಬಳೆ, ಸೀರೆ, ಹೂವುಗಳಿಂದ ಶೃಂಗರಿಸಿ ತವರುಮನೆಯವರು ಉಡಿಯಲ್ಲಿ ಧಾನ್ಯಗಳನ್ನು ಹಾಕಿ, ಉಡಿ ತುಂಬಿ, ಮುತ್ತೈದೆಯರಿಂದ ಆರತಿ ಬೆಳಗಿಸಿ ಅದ್ದೂರಿಯಾಗಿ ಈ ಕಾರ್ಯಕ್ರಮವನ್ನು ಮಾಡುವರು. ಈ ಸೀಮಂತ ಕಾರ್ಯಕ್ರಮವಾದ ನಂತರ ಗಂಡಿನ ಮನೆಯಿಂದ ತವರು ಮನೆಯವರು ತಮ್ಮ ಮಗಳನ್ನು ತವರಿಗೆ ಕರೆದುಕೊಂಡು ಹೋಗುತ್ತಾರೆ. ಹೀಗೆ ತವರುಮನೆಗೆ ಕರೆದುಕೊಂಡು ಹೋದಾಗಿನಿಂದ ಮಗುವಿನ ಜನನವಾಗುವವರೆಗೂ ಗರ್ಭಿಣಿಯ ಜವಾಬ್ದಾರಿಯನ್ನು ತವರುಮನೆಯವರೇ ಹೊರಬೇಕಾಗುತ್ತದೆ. ತವರುಮನೆಯಲ್ಲಿ ಗರ್ಭಿಣಿಯ ಆರೈಕೆ ಆರಂಭವಾಗಿ, ಊಟ ಮತ್ತು ಆಕೆಯ ಆರೋಗ್ಯಕ್ಕೆ ಹೆಚ್ಚಿನ ವಿಶಿಷ್ಟ ಆರೈಕೆಯನ್ನು ಈ ಸಂದರ್ಭದಲ್ಲಿ ನೀಡಲಾಗುತ್ತದೆ. ಗರ್ಭಿಣಿಗೆ ಭಾರವಾದ ಕೆಲಸಗಳಲ್ಲಿ ಭಾಗವಹಿಸುವುದನ್ನು ನಿಷೇಧಿಸಲಾಗಿರುತ್ತದೆ. ಒಟ್ಟಾರೆ ಗರ್ಭಿಣಿ ಮತ್ತು ಆಕೆಯ ಗರ್ಭದಲ್ಲಿನ ಮಗುವಿನ ಆರೈಕೆ ಇಲ್ಲಿ ಅತೀ ಮುಖ್ಯವಾಗಿರುವುದರಿಂದ ಕೆಲವೊಂದು ಆರೋಗ್ಯಕರ ಕಟ್ಟಳೆಗಳನ್ನು ಗರ್ಭಿಣಿಯ ಮೇಲೆ ಹೇರಲಾಗಿರುತ್ತದೆ. ಮಗುವಿನ ಜನನದ ಸಂದರ್ಭದಲ್ಲಿ ಅನುಭವಿ ಸೂಲಗಿತ್ತಿಯಿಂದ ಇಲ್ಲವೇ

ಇತ್ತೀಚೆಗೆ ಆಸ್ಪತ್ರೆಗಳಲ್ಲಿ ಹೆರಿಗೆಯನ್ನು ಮಾಡಿಸಲಾಗುತ್ತದೆ. ಮಗು ಜನಿಸಿದ ಐದು ದಿನಗಳಿಗೆ ಸೂತಕ ಕಳೆದು ಮಗುವಿನ ನಾಮಕರಣವನ್ನು ಮಾಡಲಾಗುತ್ತದೆ. ತವರುಮನೆಯಲ್ಲಿನ ನಾಮಕರಣ ಹೆಸರಿಗೆ ಮಾತ್ರವಿದ್ದು ಮುಂದೆ ಗಂಡನ ಮನೆಯಲ್ಲಿ ಮತ್ತೇ ನಾಮಕರಣ ಕಾರ್ಯಕ್ರಮ ನೆರವೇರಿಸಲಾಗುತ್ತದೆ. ಮಗುವಿನ ಕಿವಿಯಲ್ಲಿ ಸೋದರಮಾವ ಐದು ಸಲ ಹೆಸರು ಹೇಳುವುದರ ಮೂಲಕ ಮಗುವಿನ ಹೆಸರನ್ನಿಡಲಾಗುತ್ತದೆ. ಮುಂದೆ ಮಗುವನ್ನು ಮತ್ತು ಆಕೆಯ ತಾಯಿಯನ್ನು ಗಂಡನ ಮನೆಯವರು ಕರೆದುಕೊಂಡು ಹೋಗುತ್ತಾರೆ. ಗಂಡನ ಮನೆಯಲ್ಲಿ ಮತ್ತೊಮ್ಮೆ ಮಗುವಿಗೆ ಹೆಸರಿಡುವ ತೊಟ್ಟಿಲು ಕಾರ್ಯಕ್ರಮ ನಡೆಯುತ್ತದೆ. ಈ ಕಾರ್ಯಕ್ರಮ ನಡೆದಾದ ಬಳಿಕ ಮಗುವಿನ ಎಲ್ಲ ಜವಾಬ್ದಾರಿಗಳು ತಂದೆಯ ಮನೆಗೆ ವರ್ಗವಾಗುತ್ತವೆ. ಮಗು ಜನನವಾದ ಏಳನೇ ಇಲ್ಲವೆ ಒಂಬತ್ತನೇ ತಿಂಗಳಂದು ಮಗುವಿನ ಜವಳ (ಮೊದಲನೆ ಸಲ ತಲೆಕೂದಲು ಕತ್ತರಿಸುವ) ಕಾರ್ಯಕ್ರಮ ನಡೆಯುತ್ತದೆ. ಈ ಜವಳ ಕಾರ್ಯಕ್ರಮವನ್ನು ತಮ್ಮ ಇಷ್ಟದೈವ, ಮನೆದೈವ, ಕುಲದೈವದ ಸಮ್ಮುಖದಲ್ಲಿ ಗುರುಹಿರಿಯರೊಂದಿಗೆ ನಡೆಸಲಾಗುತ್ತದೆ. ಈ ಸಂದರ್ಭದಲ್ಲಿ ಸೋದರಮಾವನ ತೊಡೆಯ ಮೇಲೆ ಮಗುವನ್ನು ಕೂಡಿಸಿ ತಲೆಕೂದಲನ್ನು ದೇವರ ಹೆಸರಿನಲ್ಲಿ ಕತ್ತರಿಸಲಾಗುತ್ತದೆ. ಸೋದರಮಾವನ ಸಂಬಂಧವೆಂದರೆ ತಾಯಿಯ ನಂತರದ ಸ್ಥಾನ, ತಾಯಿಯ ಕರುಳಿನ ಸಂಬಂಧವನ್ನು ಈ ಸೋದರಮಾವ ಹೊಂದಿರುತ್ತಾನೆ ಎಂಬುದನ್ನು ಇಲ್ಲಿ ಸಮೀಕರಿಸಲಾಗತ್ತದೆ. ಮಗುವಿನ ತಲೆಕೂದಲು ಕತ್ತರಿಸಿದ ನಂತರ ಮಗುವಿಗೆ ಹಾಕಲಾದ ಬಟ್ಟೆಗಳನ್ನು ಕಳಚಿ ಎಸೆಯಲಾಗುತ್ತದೆ. ಮತ್ತು ಮಗುವಿನ ತಲೆಕೂದಲನ್ನು ಮೊದಲ ಸಲ ಕತ್ತರಿಸಿದ್ದರಿಂದ ಕೂದಲು ಕತ್ತರಿಸಿದವನಿಗೆ ಗೋಧಿ, ಅಕ್ಕಿ, ಉತ್ತತ್ತಿ, ಅರಿಶಿನಕೊಂಬು, ಅರಿಷಿಣ, ಕುಂಕುಮ, ಗಡಿಗೆಗಳನ್ನು ದಾನ ಕೊಡುತ್ತಾರೆ. ಅಲ್ಲದೆ ಸೋದರಮಾವ ತನ್ನ ಹಣದಿಂದ ಮಗುವಿನ ದೃಷ್ಟಿಯನ್ನು ತೆಗೆದು ಅಲ್ಲಿಯೇ ಇದ್ದ ಹಿಜಡಾ(ನಪುಂಸಕರು)ಗಳಿಗೆ ಹಂಚುತ್ತಾನೆ. ಹಿಜಡಾಗಳು ಮಗುವಿಗೆ ಆಶೀರ್ವದಿಸಿದರೆ ಮಗು ಮುಂದೆ ಬೆಳೆದಾಗ ಶ್ರೀಮಂತಿಕೆ (ಆರ್ಥಿಕವಾಗಿ) ಅದಕ್ಕೆ ದಕ್ಕುತ್ತದೆ ಎಂಬ ನಂಬಿಕೆ ಗಡಿಭಾಗದ ಜನರಲ್ಲಿದೆ. ಈ ನಂಬಿಕೆ ಗಂಡು ಮತ್ತು ಹೆಣ್ಣು ಮಗು ಎರಡಕ್ಕೂ ಅನ್ವಯಿಸುತ್ತದೆ.

**೪.೧.೨. ಋತುಮತಿ :**

ಹೆಣ್ಣು ಮಗಳು ಸಾಮಾನ್ಯವಾಗಿ ೧೫ ವರ್ಷದವಳಾದ ನಂತರ ಪ್ರಾಕೃತಿಕ ನಿಯಮದಂತೆ ಋತುಮತಿ ಯಾಗುತ್ತಾಳೆ. ಇದನ್ನು ಇಲ್ಲಿನ ಜನರು 'ದೊಡ್ಡವಳಾದಳು' 'ಮೈನೆರೆದಳು' ಎಂದು ಆಡುಮಾತಿನಲ್ಲಿ ಕರೆಯುವುದು ವಾಡಿಕೆಯಲ್ಲಿದೆ. ಋತುಮತಿಯಾದಳು ಎಂಬ ವಿಷಯ ತಿಳಿಯುತ್ತಲೇ ಆ ಹುಡುಗಿಯ ತಾಯಿಯ ತವರುಮನೆಯವರು ಮೊಮ್ಮಗಳ ಮನೆಗೆ ಬರುತ್ತಾರೆ. ಋತುಮತಿಯಾದ ಹುಡುಗಿಗೆ ಸೋದರತ್ತೆ ಎಣ್ಣೆ ಸ್ನಾನ ಮಾಡಿಸುವಳು. ನಂತರ ಅವರು ತಂದ ಕೊಬ್ಬರಿ, ಬೆಲ್ಲ ತಿನ್ನಿಸುವರು. ಇಲ್ಲಿಯು ಸೋದರ ಮಾವನಿಗೆ ಹೆಚ್ಚಿನ ಅಧಿಕಾರಗಳನ್ನು ಕೊಟ್ಟಿರುತ್ತಾರೆ. ಸೋದರಮಾವ ತರುವ ಹೊಸ ಸೀರೆಯನ್ನೇ ಋತುಮತಿಯಾದ ಹೆಣ್ಣು ಉಡಬೇಕೆಂಬುದು ಇಲ್ಲಿನ ನಿಯಮ. ಋತುಮತಿಯಾದ ಮೂರನೇ, ಐದನೇ, ಇಲ್ಲವೇ ಒಂಬತ್ತನೇ ದಿನ ಋತುಮತಿ ಕಾರ್ಯಕ್ರಮವನ್ನು ಮಾಡಲಾಗುತ್ತದೆ. ಋತುಮತಿಯಾದ ಹೆಣ್ಣಿನ

ಕೈಗೆ ಮೆಹಂದಿ ಹಚ್ಚಿ, ಸೋದರಮಾವ ತಂದ ಹೂ, ಬಳೆ, ಸೀರೆಗಳನ್ನು ತೊಡಿಸಿ ಮದುಮಗಳಂತೆ ಶೃಂಗರಿಸಿ ಋತುಮತಿ ಕಾರ್ಯಕ್ರಮ ಮಾಡಿ ಸೂತಕವೆಂದು ಇಷ್ಟುದಿನ ಹೊರಗಡೆ ಕೂಡಿಸಿದವಳನ್ನು ಈಗ ಮನೆಯ ಒಳಗೆ ಕರೆದುಕೊಂಡು ಬರುತ್ತಾರೆ.

**೪.೧.೩. ವಿವಾಹ :**

ಸ್ತ್ರೀ-ಪುರುಷರ ನಡುವೆ ಲೈಂಗಿಕ ಹಾಗೂ ಮಾನಸಿಕ ಸಂಬಂಧಗಳನ್ನು ದೃಢೀಕರಿಸುವ ಮತ್ತು ಸಂತಾನೋತ್ಪತ್ತಿಗಾಗಿ ಉದ್ದೇಶಪೂರ್ವಕವಾಗಿ ನಮ್ಮಲ್ಲಿ ವಿವಾಹ ಎಂಬುದನ್ನು ಏರ್ಪಡಿಸಿಕೊಳ್ಳಲಾಗಿದೆ. ಅಂತಲೇ ಪ್ರತಿಯೊಬ್ಬರು ಈ ವಿವಾಹದ ಪ್ರಕ್ರಿಯೆಯಲ್ಲಿ ಭಾಗಿಯಾಗುವಂತೆ ಮೌಖಿಕ ಕಟ್ಟಳೆಯನ್ನು ಸಮಾಜ ಹೇರುವುದರೊಂದಿಗೆ ಸ್ವಾಸ್ಥ್ಯ ಸಮಾಜದ ನಿರ್ಮಾಣಕ್ಕೆ ವಿವಾಹ ಪೂರಕ ಕೆಲಸವನ್ನು ಮಾಡಿದೆ. ಪ್ರಾಚೀನ ವಿವಾಹ ಪ್ರಕಾರಗಳಲ್ಲಿನ ಎಲ್ಲ ಪ್ರಕಾರಗಳು ಇಂದು ತೆರೆಯ ಹಿಂದೆ ಸರಿದಿದ್ದು, ಸದ್ಯದ ಸ್ಥಿತಿಯಲ್ಲಿ ಏಕಪತ್ನಿತ್ವ, ಬಹುಪತ್ನಿತ್ವ, ಏಕಪತಿತ್ವ, ಬಹುಪತಿತ್ವ, ವಿಧವಾ ಪುನರ್ ವಿವಾಹ ಪದ್ಧತಿಗಳು ಜಾರಿಯಲ್ಲಿವೆ. ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಮುಖವಾಗಿ ಇಟ್ಟುಕೊಂಡಿರುವ ಇಲ್ಲಿನ ಸಮಾಜಗಳು ಗಂಡನನ್ನು ಬಿಟ್ಟು, ಇಲ್ಲವೇ ಗಂಡ ತೀರಿದ ನಂತರ ಹೆಣ್ಣು ಮತ್ತೊಂದು ಮದುವೆಯಾಗುವುದನ್ನು ಕೆಲವು ದಶಕಗಳ ಹಿಂದೆ ವಿರೋಧಿಸುತ್ತಿತ್ತಾದರೂ ಇಂದು ಈ ನಿಯಮಗಳನ್ನು ಸಡಿಲಗೊಳಿಸಿವೆ.

ಇಲ್ಲಿನ ಬೇರೆ ಬೇರೆ ಧರ್ಮ, ಜಾತಿಗಳ ವಿವಾಹಕ್ರಮ ಬೇರೆ ಬೇರೆಯಾಗಿ ನಡೆಯುತ್ತವೆ. ಲಿಂಗಾಯತರಲ್ಲಿ ಒಂದೇ ಬೆಡಗಿನಲ್ಲಿ ವಿವಾಹ ನಡೆಯುವುದು ಕಡ್ಡಾಯವಾಗಿದೆ. ಲಿಂಗಾಯತರ ದೀಕ್ಷೆ ಬಳಕೆಯ ಗಂಡಿಗೆ ದೀಕ್ಷೆ ಬಳಕೆಯ ಹೆಣ್ಣನ್ನೇ ತಂದು ಮದುವೆ ಮಾಡಲಾಗುತ್ತದೆ. ಇದು ಲಿಂಗಾಯತರಲ್ಲಿನ ಮದುವೆಯ ವಿಶೇಷತೆ ಎನ್ನಬಹುದು. ಏಕೆಂದರೆ ಉಳಿದೆಲ್ಲಾ ಧರ್ಮ, ಜಾತಿಗಳಲ್ಲಿ ಒಂದೇ ಬೆಡಗಿನ ವಿವಾಹವನ್ನು ವಿರೋಧಿಸಿ ಒಂದೇ ಬೆಡಗಿನವರಲ್ಲಿ ಸಹೋದರತ್ವದ ಭಾವನೆಯನ್ನು ಕಂಡು, ವಿರೋಧಿಸು ವುದುಂಟು. ಉಳಿದಂತೆ ವಿವಾಹದ ಎಲ್ಲ ಕ್ರಮಗಳು ಎಲ್ಲರಲ್ಲಿ ಒಂದೇ ತೆರನಾಗಿದ್ದು, ಒಂದು ಒಳ್ಳೆ ದಿನದಂದು ಮದುವೆ ಗೊತ್ತುಪಡಿಸಿ, ಮದುವೆಯ ದಿನದಂದು, ವರಪೂಜೆ, ಎಣ್ಣೆ ಹಚ್ಚುವ ಕಾರ್ಯಕ್ರಮ, ತಾಳಿ ಕಟ್ಟುವ ಕಾರ್ಯಕ್ರಮ, ಅಕ್ಷತೆ ಕಾರ್ಯಕ್ರಮ, ಕೊನೆಗೆ ಗುರುಹಿರಿಯರ ಆರ್ಶೀವಾದ, ಶುಭಾಷಯ ಸ್ವೀಕರಿಸುವುದು ನಡೆಯುತ್ತದೆ. ವೈದಿಕ ಸಂಪ್ರದಾಯ ಆರಾಧಕರು ಮದುವೆಯಲ್ಲಿ ಲಾಜ ಹೋಮ (ಅಗ್ನಿಹೋಮದಲ್ಲಿ ಭತ್ತದ ಬೀಜಗಳನ್ನು ತುಪ್ಪದೊಂದಿಗೆ ಅರ್ಪಿಸುವುದು) ಮತ್ತು ಸಪ್ತಪದಿ ವಿಧಿಗಳನ್ನು ನಡೆಸುತ್ತಾರೆ. ಆದರೆ ಶೈವ ಸಂಪ್ರದಾಯದ ಆರಾಧಕರು ಪಂಚ ಕಳಶದ ಪ್ರತಿಷ್ಠಾಪನೆ, ಸುರಿಗೆ ಸುತ್ತುವುದು, ಅರಿಶಿನ ಹಚ್ಚುವುದು ಮತ್ತು ವೀರಭದ್ರನನ್ನು ಕುಲದೇವರಾಗಿ ಸ್ವೀಕರಿಸಿದವರು ಮದುವೆಯ ಮೊದಲು ಗುಗ್ಗಳ ಸೇವೆ (ಗುಗ್ಗಳ ಪೂಜೆ : ಇದರಲ್ಲಿ ನಾಲ್ಕು ಕಳಸಗಳಲ್ಲಿ ಹಾಲು, ಲೋಬಾನ ಮತ್ತಿತರ ದಾಹಕ ಪದಾರ್ಥಗಳಿಂದ ಗುಗ್ಗಳ ತುಂಬಿ ಕಳಸಗಳನ್ನು ಮೆರವಣಿಗೆಯಲ್ಲಿ ಹತ್ತಿರದ ಗುಡಿಗೆ ತೆಗೆದುಕೊಂಡು ಹೋಗುವುದು), ಪುರುವಂತರ ಸೇವೆ ಮಾಡುತ್ತಾರೆ. ಶೈವರ ಈ ಎಲ್ಲ ವಿಧಿಗಳು ವೀರಶೈವ ಜಂಗಮರು ನಡೆಸಿಕೊಟ್ಟರೆ ವೈದಿಕ ಸಂಪ್ರದಾಯದಲ್ಲಿ ಬ್ರಾಹ್ಮಣ ಅರ್ಚಕರು ವಿವಾಹದ ಎಲ್ಲ ವಿಧಿ-ವಿಧಾನಗಳನ್ನು

ನಡೆಸಿಕೊಡುತ್ತಾರೆ. ಒಟ್ಟಾರೆಯಾಗಿ ಇಲ್ಲಿನ ಶೈವ ಸಂಪ್ರದಾಯದ ಪ್ರಭಾವದಲ್ಲಿ ಕುರುಬರು, ದಲಿತರು, ಗಂಗಾಮತಸ್ಥರು(ಕಬ್ಬಲಿಗ), ವಡ್ಡರು, ಅಗಸರು, ಲಿಂಗಾಯತರು, ಒಕ್ಕಲಿಗರು(ರೆಡ್ಡಿ) ಮುಂತಾದವರು ಬಂದರೆ, ವೈದಿಕ ಸಂಪ್ರದಾಯದ ಪ್ರಭಾವದಲ್ಲಿ ಖಾಟಿಕರು, ಕೊಮಟಿಗರು(ಶೆಟ್ಟಿ), ಬ್ರಾಹ್ಮಣರು, ಪಾಂಚಾಳರು ಮುಂತಾದವರು ಬರುತ್ತಾರೆ. ಇವರ ಎಲ್ಲ ಸಂಸ್ಕಾರಗಳು ಶೈವ ಮತ್ತು ವೈದಿಕ ಸಂಪ್ರದಾಯ ದಲ್ಲಿ ನಡೆಯುವುದು ಇಲ್ಲಿನ ವಿಶೇಷ.

ಮದುವೆಯ ತದನಂತರದಲ್ಲಿ ದಂಪತಿಗಳಿಗೆ ಮಕ್ಕಳಾಗದಿದ್ದರೆ, ಇಲ್ಲವೇ ಬೇರೆಯ ಪುರುಷನೊಂದಿಗೆ ಹೆಂಡತಿ ಅಕ್ರಮ ಸಂಬಂಧವಿರಿಸಿಕೊಂಡಿದ್ದು ರುಜುವಾತಾದರೇ ಗಂಡ ಹೆಂಡತಿಯನ್ನು ಬಿಟ್ಟು ಬಿಡಬಹುದು. ಮದುವೆಯಾದ ನಂತರ ಗಂಡ ಸತ್ತರೆ ಹೆಂಡತಿಯು ಬೇರೆ ಮದುವೆಯಾಗುವುದು ಇತ್ತಿತ್ತಲಾಗಿ ನಡೆಯುತ್ತಿವೆ. ಅಲ್ಲದೇ ತಕ್ಕಮಟ್ಟಿನ ಅಂತರಜಾತಿ ವಿವಾಹಗಳು ಇಲ್ಲಿ ನಡೆಯುತ್ತಿವೆ. ಇವು ಹಿಂದೂ ವಿವಾಹದ ವಿಧಿವಿಧಾನಗಳು. ಇದರಂತೆಯೇ ಮುಸ್ಲಿಂ ವಿವಾಹವೂ ಒಂದು ಸಾಮಾಜಿಕ ಒಪ್ಪಂದವಾಗಿದೆ. ಹಿಂದೂ ವಿವಾಹ ಪದ್ಧತಿಗಳಿಗಿಂತ ಭಿನ್ನವಾದ ಮುಸ್ಲಿಂ ವಿವಾಹ ಪದ್ಧತಿಯಲ್ಲಿ ಮದುವೆಯ ದಿನ ಮದುಮಗನಿಗೆ ವಿವಾಹದ ಬಟ್ಟೆಗಳನ್ನು ತೊಡಿಸಿ, ಮುಖಕ್ಕೆ ಹೂಗಳಿಂದ 'ಸೇಹರಾ' ಕಟ್ಟಿರುತ್ತಾರೆ. ಬಂಧು-ಬಳಗ, ಮಿತ್ರರು ಮೆರವಣಿಗೆಯಲ್ಲಿ ಮದುಮಗನನ್ನು ಸುಂದರವಾದ, ಎತ್ತರವಾದ ಕುದುರೆಯ ಮೇಲೆ ಕುಳ್ಳಿರಿಸಿ ಮದುವೆಗೆ ಗೊತ್ತುಪಡಿಸಿದ ಸ್ಥಳಕ್ಕೆ ಕರೆತರಲಾಗುತ್ತದೆ. ಮದುವೆಯ ಮಂಟಪದಲ್ಲಿ ಗಂಡು, ಹೆಣ್ಣು ಮತ್ತು ಗಂಡಿನ ಬಂಧು-ಬಳಗ, ಹೆಣ್ಣಿನ ಬಂಧು-ಬಳಗದವರನ್ನು ಎದುರುಬದಿರಾಗಿ ಕೂಡಿಸಿ ಮದುವೆಯ ವಿಧಿವಿಧಾನಗಳನ್ನು ಖಾಜಿ (ಮುಸ್ಲಿಂ ಪೂಜಾರಿ) ಸಮ್ಮುಖದಲ್ಲಿ ಪ್ರಾರಂಭಿಸುವರು. ಗಂಡು ಹೆಣ್ಣಿನ ಜೀವನಾಂಶಕ್ಕಾಗಿ ಇಂತಿಷ್ಟು ಹಣ ಕೊಡಲು ಒಪ್ಪುವುದಾದರೆ ಹೆಣ್ಣಿಗೆ ಗಂಡು ಇಷ್ಟವಾಗಿರುವನೇ ಎಂದು ವಧುವನ್ನು ಆಕೆಯ ಒಪ್ಪಿಗೆ (ಕಬೂಲ್) ಪಡೆದು ಸಾಕ್ಷಿಗಳ ಸಮ್ಮುಖದಲ್ಲಿ ಈ ಕುರಿತು 'ನಿಕಾ ದಫ್ತರ್' (ಮುಸ್ಲಿಂ ವಿವಾಹದ ನೋಂದಣಿ ಪುಸ್ತಕ)ದಲ್ಲಿ ಸಾಕ್ಷಿಗಳಿಂದ ರುಜುವಾತು ಹಾಕಿಸಿಕೊಳ್ಳಲಾಗುತ್ತದೆ. ಹೀಗೆ ಮುಸ್ಲಿಂ ವಿವಾಹವನ್ನು ಪೂರ್ಣಗೊಳಿಸಿ ಬಂದಂತವರಿಗೆ ಅವರವರ (ಮಾಂಸಾಹಾರ, ಶಾಖಾಹಾರ) ಪದ್ಧತಿಯಂತೆ ಊಟ ಮಾಡಿಸಿ ಕಳಿಸಿಕೊಡಲಾಗುತ್ತದೆ. ಹೀಗೆ ಮುಸ್ಲಿಂ ವಿವಾಹ ನೆರವೇರುತ್ತದೆ.

**೪.೧.೪. ಕನ್ನಡಿಗರ ಮತ್ತು ತೆಲುಗರ ವೈವಾಹಿಕ ಸಂಬಂಧಗಳು :**

ಕುಟುಂಬ ಕುಟುಂಬಗಳ ಮಧ್ಯೆ ಸಂಬಂಧ ಬೆಳೆಸಲು ಗಡಿಭಾಗ ಎನ್ನುವುದು ಅಡ್ಡಿಯಾಗುವುದಿಲ್ಲ. ಸಾಮಾಜಿಕವಾಗಿ ಅವರಲ್ಲಿ ತೆಲುಗು-ಕನ್ನಡವೆನ್ನದೆ ನಾವೆಲ್ಲ ಒಂದು ಎನ್ನುವ ಮನೋಭಾವ ಇರುತ್ತದೆ. ಆದ್ದರಿಂದಲೆ ಇಲ್ಲಿನವರು ಹೆಚ್ಚಾಗಿ ವಿವಾಹ ಸಂಬಂಧಗಳನ್ನು ಹತ್ತಿರದ ಆಂಧ್ರ ಗಡಿಗ್ರಾಮಗಳ ಜೊತೆ ನಡೆಸುವುದು ಇಲ್ಲಿ ಕಂಡುಬರುತ್ತದೆ. ಇದೇ ರೀತಿ ಆಂಧ್ರದ ಗಡಿಗ್ರಾಮದವರು ಇತ್ತ ವೈವಾಹಿಕ ಸಂಬಂಧ ಗಳನ್ನು ಬೆಳೆಸಲು ಇಷ್ಟಪಡುತ್ತಾರೆ. ಆಂಧ್ರದಿಂದ ಕರ್ನಾಟಕದ ಗಡಿಗ್ರಾಮಗಳಿಗೆ ಮದುವೆಯಾಗಿ ಬಂದು ಹೆಣ್ಣು ಕೇವಲ ೬-೮ ತಿಂಗಳಲ್ಲಿಯೇ ಮನೆಯ ಪರಿಸರಕ್ಕೆ ಹೊಂದಿಕೊಂಡು ಗಂಡನ ಮನೆಯ ಮಾತು ಕನ್ನಡವಾಗಿದ್ದರೇ ಕನ್ನಡವನ್ನು ಕಲಿಯುತ್ತಾಳೆ. ಇದರಂತೆ ಕರ್ನಾಟಕದ ಹೆಣ್ಣು ಮಗಳನ್ನು ಆಂಧ್ರಕ್ಕೆ

ಕೊಟ್ಟಾಗ ಇವಳು ಅಲ್ಲಿನ ಪರಿಸರಕ್ಕೆ ಹೊಂದಿಕೊಂಡು ಅವರ ಮನೆಯ ಮಾತು ತೆಲುಗನ್ನು ಕಲಿಯುತ್ತಾಳೆ. ಮದುವೆಗಿಂತ ಮುಂಚೆ ಗೋತ್ರ, ನಕ್ಷತ್ರ, ಬೆಡಗುಗಳನ್ನು ನೋಡಿ ಸಂಬಂಧ ಬೆಳೆಸಲು ಮುಂದಾಗುತ್ತ ರಾದರೂ, ಈ ಮೊದಲು ಇಲ್ಲಿಂದ ಆಂಧ್ರಕ್ಕೆ ಹೋದ, ಇಲ್ಲವೇ ಆಂಧ್ರದಿಂದ ಇಲ್ಲಿಗೆ ಬಂದ ಹೆಣ್ಣಿನ ತವರಿನಲ್ಲಿನ ಸಂಬಂಧ ಗಟ್ಟಿಗೊಳಿಸುವಾಗ ಗೋತ್ರ, ನಕ್ಷತ್ರ, ಬೆಡಗುಗಳಲ್ಲಿ ಸಡಿಲಿಕೆಯನ್ನು (ಅಣ್ಣ ತಂಗಿಯ ಮಗಳನ್ನು ತೆಗೆದುಕೊಳ್ಳುವಾಗ, ಇಲ್ಲವೇ ತಾಯಿಯ ಅಣ್ಣ, ತಮ್ಮನಿಗೆ ಮಗಳನ್ನು ಕೊಡುವಾಗ ಈ ಕುಂಡಲಿ, ಗೋತ್ರ, ನಕ್ಷತ್ರ, ಬೆಡಗುಗಳಿಗೆ ರಿಯಾಯಿತಿ ನೀಡುತ್ತಾರೆ) ನೀಡುತ್ತಾರೆ. ಒಂದು ವೇಳೆ ಇವುಗಳು ಸರಿಬರದಿದ್ದರೇ ತಮ್ಮ ರಕ್ತಸಂಬಂಧಕ್ಕೆ ಕೊನೆಯಾದಿತೆಂಬ ಭಯದಿಂದ ತಮ್ಮ ಸಂಬಂಧಗಳು ಮುಂದುವರೆಯಬೇಕೆಂಬ ಇಚ್ಛೆಯಿಂದ ಇಲ್ಲಿ ಹೀಗೆ ಮಾಡಲಾಗುತ್ತದೆ.

**೪.೧.೫. ಶವಸಂಸ್ಕಾರ :**

ಮಗುವಿನ ಹುಟ್ಟಿನಿಂದ, ಅದು ಬೆಳೆದು ಎಲ್ಲ ಘಟ್ಟಗಳನ್ನು ನಿರಂತರವಾಗಿ ಜೀವನಚಕ್ರ ಮುಂದುವರೆಸಿ ಮರಣದೊಂದಿಗೆ ತನ್ನ ತಿರುಗುವಿಕೆಯನ್ನು ನಿಲ್ಲಿಸುತ್ತದೆ. ವ್ಯಕ್ತಿಯ ಸಾವು ಸಂಭವಿಸಿದಾಗ ಅಂತಿಮವಾಗಿ ವೈದಿಕ ಸಂಪ್ರದಾಯವನ್ನು ಆಚರಿಸುವವರು ಶವವನ್ನು ಸುಡುವ ಮತ್ತು ಶೈವ ಸಂಪ್ರದಾಯ ದಲ್ಲಿ ಬರುವವರು ಶವವನ್ನು ಮಣ್ಣಿನಲ್ಲಿ ಹೂಳುವ ಹಾಗೂ ಮುಸ್ಲಿಂಮರು ಶವವನ್ನು ಹೂಳುವುದ ರೊಂದಿಗೆ ಶವಸಂಸ್ಕಾರ ಕ್ರಿಯೆಯನ್ನು ಪೂರ್ಣಗೊಳಿಸುವರು. ಶವಸಂಸ್ಕಾರ ಮಾಡುವ ಮುನ್ನ ಸತ್ತ ವ್ಯಕ್ತಿಯ ಶವವನ್ನು ಸ್ವಚ್ಛವಾಗಿ ತೊಳೆದು ಅದಕ್ಕೆ ಹೊಸ ಬಟ್ಟೆ ತೊಡಿಸಲಾಗುತ್ತದೆ. ಹೆಣ್ಣು ಮಗಳು ಸತ್ತಿದ್ದರೇ ಇಲ್ಲಿಯು ಆಕೆಯ ತವರುಮನೆಯವರಿಗೆ ಎಲ್ಲ ಪ್ರಮುಖ ಹಕ್ಕುಗಳನ್ನು ಬಿಟ್ಟು ಕೊಡಲಾಗಿರುತ್ತದೆ. ಮುತ್ತೈದೆ ಸಾವು ಸಂಭವಿಸಿದಾಗ ತವರುಮನೆಯ ಅಣ್ಣ, ತಮ್ಮ (ಸಹೋದರರು) ತವರುಮನೆಯ ಪರವಾಗಿ ಮುತ್ತೈದೆ ಸೀರೆ ತಂದು ಉಡಿಸುತ್ತಾರೆ. (ಅಕ್ಕ-ತಂಗಿಯ ಮರಣದೊಂದಿಗೆ ಆಕೆಯ ಅಣ್ಣನ, ತವರುಮನೆಯ ಎಲ್ಲ ಪಾತ್ರಗಳು ಮುಗಿಯುತ್ತವೆ.) ಮದುವೆಯಾದವರನ್ನು ಸಾಮಾನ್ಯ ವಾಗಿ ಕುಳ್ಳಿಸುವುದುಂಟು. ಹೀಗೆ ಶವವನ್ನು ಕುಳ್ಳಿರಿಸುವಾಗ ಆ ಶವದ ಕಾಲುಗಳನ್ನು ಮುರಿದು ಚಪಗಾಲ (ಒಂದರ ಮೇಲೊಂದರಂತೆ ಪದ್ಮಹಾಸನ ರೀತಿಯಲ್ಲಿ) ಹಾಕಿ ಶವ ಬೀಳದಂತೆ ದಾರ ಕಟ್ಟಿದ ಮೊಳೆಯನ್ನು ತಲೆಯ ಹಿಂದಿನ ಗೋಡೆಗೆ ಹೊಡೆದು ಶವವನ್ನು ಕಟ್ಟಿರುತ್ತಾರೆ. ಮದುವೆಯಾಗದ ಶವವನ್ನು ಮಲಗಿಸ ಲಾಗುತ್ತದೆ. ವೈದಿಕ ಸಂಪ್ರದಾಯದವರು ಶವವನ್ನು ಸುಟ್ಟು, ಮರುದಿನ ಸುಟ್ಟ ಶವದ ಅಸ್ಥಿ (ಎಲುಬು) ಬೂದಿಯನ್ನು ಸಂಗ್ರಹಿಸಿ ಹತ್ತಿರದ ನದಿಯಲ್ಲಿ ವಿಸರ್ಜಿಸುತ್ತಾರೆ. ನಂತರ ಒಂದು ನಿಗದಿತ ದಿನದಂದು ತಿಥಿ ಮಾಡಿ ಸೂತಕವನ್ನು ಕಳೆದುಕೊಳ್ಳುತ್ತಾರೆ. ಶೈವ ಸಂಪ್ರದಾಯದವರು ೩x೬ ಅಳತೆಯ ಗುಂಡಿಯನ್ನು ತೋಡಿ ಅದರಲ್ಲಿ ಶವವನ್ನು ಹೂಳುತ್ತಾರೆ. ನಂತರದ ದಿನದಂದು ಆ ಸ್ಥಳದಲ್ಲಿ ದೀಪ ಹಚ್ಚಿ, ಹಾಲು ಇಟ್ಟು ಬರುತ್ತಾರೆ. ಮುಂದಿನ ಮೂರನೇ, ಒಂಬತ್ತನೇ ಇಲ್ಲವೇ ತಮ್ಮ ಪಂಚಾಂಗಕ್ಕೆ ಸರಿಹೊಂದುವಂತ ಒಂದು ದಿನದಂದು ಮನೆ ಶುಭ್ರಗೊಳಿಸಿ ತಿಥಿ ಕಾರ್ಯ ಮುಗಿಸುತ್ತಾರೆ.

### ೪.೧.೬. ಸೂತಕಗಳು :

ಇಲ್ಲಿನ ಗಡಿಗ್ರಾಮಗಳ ಎಲ್ಲ ಸಮಾಜಗಳು ಸೂತಕವನ್ನು ಆಚರಿಸುತ್ತವೆ. ಸೂತಕ ಎಂದರೆ ಮೈಲಿಗೆ, ಮುಟ್ಟು-ತಟ್ಟು ಎಂಬರ್ಥದಲ್ಲಿ ನಾವು ಇಲ್ಲಿ ಪರಿಗಣಿಸಬಹುದು. ಮಗುವಿನ ಹುಟ್ಟಿನೊಂದಿಗೆ ಪ್ರಾರಂಭವಾಗುವ ಈ ಸೂತಕ, ಸತ್ತ ಬಳಿಕವೇ ಕಳೆಯುತ್ತದೆ ಎಂಬುದನ್ನು ಬಲವಾಗಿ ಇಲ್ಲಿಯ ಸಮಾಜಗಳು ನಂಬಿವೆ. ಮಗು ಹುಟ್ಟಿದ ಮೂರನೇ, ಐದನೇ ಇಲ್ಲವೇ ಒಂಬತ್ತನೇ ದಿನದಂದು ಮಗುವಿನ ನಾಮಕರಣ ಮಾಡುವುದರ ಮೂಲಕ ಹುಟ್ಟಿನ ಸೂತಕವನ್ನು ಹೋಗಲಾಡಿಸುತ್ತಾರೆ. ತದನಂತರ ಹೆಣ್ಣು ಹುಡುಗಿ ಋತುಮತಿಯಾದಾಗ ಆಕೆಯನ್ನು ಮನೆಯಿಂದ ಹೊರಗಡೆ ಇಲ್ಲವೇ ಮನೆಯ ಒಂದು ಮೂಲೆಯಲ್ಲಿ ಕುಳ್ಳಿರಿಸುತ್ತಾರೆ. ಆಕೆಯು ಮನೆಯ ಪರಿಸರದಲ್ಲಿ ಓಡಾಡುವುದನ್ನು, ಇತರರು ಆಕೆಯನ್ನು ಮುಟ್ಟುವುದನ್ನು ನಿಷೇಧಿಸಲಾಗಿರುತ್ತದೆ. ಮೂರನೇ, ಐದನೇ, ಇಲ್ಲವೇ ಒಂಬತ್ತನೇ ದಿನದಂದು ಋತುಮತಿ ಆದ ಹೆಣ್ಣಿಗೆ ತಲೆಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುವುದರ ಮೂಲಕ ಆಕೆಯ ಸೂತಕವನ್ನು ಕಳೆಯುತ್ತಾರೆ. ಇನ್ನು ಸಾವು ಸಂಭವಿಸಿದಾಗ ಶವಸಂಸ್ಕಾರದ ನಂತರ ಮನೆಯನ್ನು ಶುಭ್ರಗೊಳಿಸಿ ಒಂದು ನಿಗದಿತ ದಿನ ನೋಡಿ ಬಂಧು ಬಳಗದವರನ್ನೆಲ್ಲ ಕರೆದು ತಿಥಿ ಕಾರ್ಯ ಮಾಡಿ ಸತ್ತ ವ್ಯಕ್ತಿಯ ಸೂತಕವನ್ನು ಕಳೆಯ ಲಾಗುತ್ತದೆ.

### ೪.೧.೭. ಮನೆ :

ಕರ್ನಾಟಕಾಂಧ್ರ ಗಡಿಭಾಗದ ಗಡಿಗ್ರಾಮಗಳಲ್ಲಿನ ಮನೆಗಳು ಸಾಮಾನ್ಯವಾಗಿ ಒಂದೇ ಮಾದರಿಯ ರಚನೆಗಳನ್ನು ಹೊಂದಿವೆ. ಜನರ ಜೀವನಮಟ್ಟ, ಆರ್ಥಿಕತೆ ಮತ್ತು ಸಾಮಾಜಿಕ ಸ್ಥಾನಮಾನಗಳಿಗನು ಗುಣವಾಗಿ ಮನೆಯ ಮಾದರಿ ಇಲ್ಲಿ ನಿರ್ಧರಿಸಲ್ಪಟ್ಟಿವೆ. ಆದರೂ ಇತ್ತೀಚಿನ ದಿನಗಳಲ್ಲಿ ನಗರಗಳ ಪ್ರಭಾವದಿಂದಾಗಿ ಈ ಗಡಿಗ್ರಾಮಗಳಲ್ಲಿನ ಮನೆಗಳ ಸಾಂಪ್ರದಾಯಿಕ ಮಾದರಿಗಳು ಬದಲಾವಣೆಗೆ ಒಳಗಾಗಿದ್ದು, ಗಡಿಗ್ರಾಮಗಳಲ್ಲಿನ ಜನರು ಪಟ್ಟಣ ನಗರಗಳಿಗೆ ದುಡಿಯಲು ಹೋಗಿ, ಅಲ್ಲಿನ ಮನೆಗಳ ಮಾದರಿಗಳಿಗೆ ಮಾರುಹೋಗಿ, ದುಡಿದು ಹಣ ಸಂಗ್ರಹಿಸಿ ತಮ್ಮ ಗ್ರಾಮಗಳಲ್ಲಿನ ಮನೆಗಳನ್ನು ಆಧುನಿಕತೆಗೆ ಒಗ್ಗುವಂತೆ ನಿರ್ಮಿಸುತ್ತಿದ್ದಾರೆ. ಆದರೂ ಈ ಗಡಿಗ್ರಾಮಗಳಲ್ಲಿನ ಸುಮಾರು ಶೇ.೮೫ರಷ್ಟು ಮನೆಗಳು ಹಿಂದಿನ ಶೈಲಿಯ ಮಾದರಿಯನ್ನೇ ಮುಂದುವರೆಸಿಕೊಂಡು ಬಂದಿವೆ. ಬಹಳ ದುಬಾರಿಯಲ್ಲದ ತಮ್ಮ ಭೌಗೋಳಿಕ ವ್ಯಾಪ್ತಿಯೊಳಗಡೆ ಉಚಿತ ಇಲ್ಲವೇ ಕಡಿಮೆ ಖರ್ಚಿನಲ್ಲಿ ದೊರೆಯುವ ಕಲ್ಲು, ಮಣ್ಣು, ಕಟ್ಟಿಗೆ ಮುಂತಾದ ವಸ್ತುಗಳನ್ನು ಬಳಸಿ ಬಹು ದೀರ್ಘಕಾಲ ಬಾಳಿಕೆಬರುವಂತಹ ಪಕ್ಕಾಮನೆಗಳನ್ನು ಕಟ್ಟಿಕೊಂಡಿರುವುದನ್ನು ಇಲ್ಲಿ ಕಾಣಬಹುದು.

ಈ ಗಡಿಗ್ರಾಮಗಳಲ್ಲಿ ಮನೆಗಳು ಎಲ್ಲ ಕಡೇ ಇರುವಂತೆ ಜಾತಿ ವ್ಯವಸ್ಥೆಯ ಪ್ರಭಾವಕ್ಕೆ ಒಳಗಾಗಿ ರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಸಮಾಜದಲ್ಲಿ ಇದುವರೆಗೂ ಗುರುತಿಸಿಕೊಂಡು ಬಂದ ಶ್ರೇಣೀಕೃತ ಜಾತಿಗಳು ತಮ್ಮ ಯಜಮಾನಿಕೆಯ ಪ್ರಭಾವದಿಂದ ಇಂತಿಂಥ ಜಾತಿಯವರ ಮನೆಗಳು ಇಂತಿಂತ ಕಡೆಗೆ ಇರಬೇಕು ಎಂಬ ಮೌಖಿಕ ಕಟ್ಟಳೆಗಳನ್ನು ಗಡಿಗ್ರಾಮಗಳಲ್ಲಿ ಹೇರಿರುವುದು

ಕಂಡುಬರುತ್ತದೆ. ಸಾಮಾನ್ಯವಾಗಿ ಇಲ್ಲಿನ ಮೇಲ್ವರ್ಗದವರ ಮನೆಗಳ ಮುಂಭಾಗದ ಎರಡು ಪಾರ್ಶ್ವಗಳಲ್ಲಿ ಕಟ್ಟೆಗಳು, ಒಳಗೆ ಜಗಲಿ(ಜಳಂತರ), ಪಡಸಾಲೆ, ನಡುಮನೆ, ಅಡುಗೆಮನೆ, ದೇವರಮನೆ, ಅಡಿಗೆಮನೆಯ ಒಲೆಗೆ ಹೊಂದಿಕೊಂಡಂತೆ ಒಂದು ಮೂಲೆಯಲ್ಲಿ ಸ್ನಾನದ ಬಚ್ಚಲು, ದೇವರಮನೆಯಲ್ಲಿ ದೇವರ ಜಗುಲಿ, ಮನೆಯ ಅಂಗಳಕ್ಕೆ ಹೊಂದಿಕೊಂಡಂತೆ ದನದ ಕೊಟ್ಟಿಗೆ ಮತ್ತು ಮನೆಯ ಹಿಂಬದಿಗೆ ಹೂದೋಟಗಳ ವಿನ್ಯಾಸದ ಮನೆಯ ಮಾದರಿಗಳನ್ನು ಇಲ್ಲಿ ಕಾಣಬಹುದು. ಸೈಜುಕಲ್ಲು, ಕಲ್ಲುಗುಂಡು, ಜಿಗುಟಾದ ಮಣ್ಣುಗಳಿಂದ ಗೋಡೆಗಳನ್ನು, ಮರದ ದೊಡ್ಡ ದೊಡ್ಡ ಕಾಂಡಗಳಿಂದ ತೊಲೆಗಳನ್ನು ಮತ್ತು ಒಡೆದ ಹಾಸುಗಲ್ಲುಗಳಿಂದ ಛಾವಣಿಯನ್ನು ಹೊದಿಸಿದ ಮನೆಗಳನ್ನು ಇಲ್ಲಿ ಕಾಣಬಹುದು. ಇಲ್ಲಿನ ಮನೆಗಳಿಗೆ ಬಹುಮುಖ್ಯವಾದ್ದದೆಂದರೆ ತಲಬಾಗಿಲು. ತಲಬಾಗಿಲಿನ ಆಧಾರದ ಮೇಲೆಯೇ ಈ ಮನೆಯ ಶ್ರೀಮಂತಿಕೆ, ಸಾಮಾಜಿಕ ಸ್ಥಾನಮಾನ ಅಳೆಯಲಾಗುತ್ತದೆ. ಅಂತಲೇ ಇಲ್ಲಿನ ಮನೆಗಳಿಗೆ ದೊಡ್ಡ ದೊಡ್ಡ ತಲಬಾಗಿಲುಗಳು, ತಲಬಾಗಿಲಿನ ಎರಡು ಪಕ್ಕದಲ್ಲಿ, ತಲಬಾಗಿಲಿಗೆ ಸರಿಹೊಂದುವಂತ ಕುದುರೆಗಳ ಮುಖಗಳನ್ನು ಅಂದವಾಗಿ ಕೆತ್ತಿಸಲಾಗಿರುತ್ತದೆ. ಇನ್ನು ಮಧ್ಯಮ ವರ್ಗದವರ ಮನೆಗಳು ಸರಳತೆಯಿಂದ ಕೂಡಿದ್ದು ಕಂಡುಬಂದರೇ, ಈವರೆಗೂ ಸಮಾಜದಲ್ಲಿ ಕೆಳಸ್ತರದವರೆಂದು ಗುರುತಿಸಲ್ಪಟ್ಟವರು ಗ್ರಾಮದ ಮೂಲೆಗಳಲ್ಲಿ ವಾಸಿಸುತ್ತ ಹುಲ್ಲುಗುಡಿಸಲು, ಇಲ್ಲವೇ ಜೋಪಡಿಗಳಿಂದಲೇ ತಮ್ಮ ಮನೆಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಆಧುನಿಕತೆಯ ಸೋಂಕಿನಿಂದ ಇಲ್ಲಿನ ಮನೆಗಳಲ್ಲಿ ಇವತ್ತು ಕಬ್ಬಿಣದ ಮಂಚ, ಪ್ಲಾಸ್ಟಿಕ್ ಕುರ್ಚಿ, ಮೇಜು, ಫೆಟ್ರೊಮಾಕ್ಸ್, ದ್ವಿಚಕ್ರ ವಾಹನ, ಗಡಿಯಾರ, ಟಿ.ವಿ., ಟೇಪರೇಕಾರ್ಡರ್, ಮೊಬೈಲ್ ಫೋನ್, ಡಿಶ್ ಟಿ.ವಿ.ಬಾಕ್ಸುಗಳನ್ನು ಉಪಯೋಗಿಸುವುದು ಕಂಡುಬರುತ್ತಿವೆ.

**೪.೧.೮. ಕುಟುಂಬ :**

ಕುಟುಂಬವು ಅತಿ ಚಿಕ್ಕ ಹಾಗೂ ಪ್ರಾಥಮಿಕ ಸಾಮಾಜಿಕ ಘಟಕ. ಇದು ಸಮಾಜದ ಕೇಂದ್ರಬಿಂದು. ಕರ್ನಾಟಕ-ಆಂಧ್ರ ಗಡಿಗ್ರಾಮಗಳಲ್ಲಿನ ಕುಟುಂಬಗಳು ತುಂಬು ಕುಟುಂಬಗಳಾಗಿವೆ. ಅಂದರೆ ಅವಿಭಕ್ತ ಕುಟುಂಬಗಳಾಗಿದ್ದು, ಈ ಕುಟುಂಬಗಳಲ್ಲಿ ತಲೆಮಾರಿನಿಂದ ತಲೆಮಾರಿನವರೆಗೆ ಅಜ್ಜನಿಂದ ಮೊಮ್ಮಕ್ಕಳ ವರೆಗೆ ಎಲ್ಲರೂ ಒಂದೇ ಸೂರಿನಡಿ ವಾಸವಿರುತ್ತಾರೆ. ಕುಟುಂಬವೆಂಬುದು ಸಾಮಾಜಿಕ ಪ್ರಕ್ರಿಯೆಗಳನ್ನು ಸರಾಗವಾಗಿ ಸಾಗುವಂತೆ ತನ್ನ ಕಾರ್ಯವನ್ನು ಯಾವಾಗಲು ಮಾಡುತ್ತಿರುತ್ತದೆ. ಹಿರಿಯರಿಗೆ ಗೌರವ ಕೊಡುವುದು ಮತ್ತು ಕಿರಿಯರಿಗೆ ಮಾರ್ಗದರ್ಶನ ನೀಡುವುದು ಕುಟುಂಬದ ಪ್ರಮುಖ ಕಾರ್ಯಗಳಲ್ಲೊಂದು. ಒಂದೇ ಮನೆಯಲ್ಲಿ ಕುಟುಂಬದ ಎಲ್ಲ ಸದಸ್ಯರು ವಾಸವಾಗಿರುತ್ತಾರೆ. ಇವರ ಪ್ರಮುಖ ಉದ್ಯೋಗ ಕೃಷಿ. ಮನೆಯ ಮತ್ತು ಭೂಮಿಯ ಒಡೆತನವನ್ನು ಕುಟುಂಬದ ಹಿರಿಯನಿಗೆ ಒಪ್ಪಿಸಲಾಗಿರುತ್ತದೆ. ಕುಟುಂಬದ ಹಿರಿಯನೇ ಆ ಕುಟುಂಬದ ಎಲ್ಲ ಜವಾಬ್ದಾರಿಯನ್ನು ನಿರ್ವಹಿಸುವುದರ ಜೊತೆಗೆ ಎಲ್ಲಾ ಆಗುಹೋಗುಗಳಿಗೆ ಇವನೇ ಜವಾಬ್ದಾರ. ಕುಟುಂಬದ ಒಟ್ಟು ಆಸ್ತಿಯನ್ನು ಇಲ್ಲಿ ವಿಭಾಗಿಸದೇ ಎಲ್ಲರಿಗೂ ಈ ಭೂಮಿ ಸೇರಲ್ಪಟ್ಟಿರುತ್ತದೆ. ಎಲ್ಲರೂ ಕೂಡಿಯೇ ತಮಗೊಪ್ಪಿಸಿದ, ತಮಗೆ ಗೊತ್ತಿರುವ ಕೆಲಸಗಳನ್ನು ಯಾವ ಬೇಡಿಕೆಗಳಿಲ್ಲದೇ ಮಾಡುತ್ತಾರೆ. ಬೀಜವನ್ನು ಭೂಮಿಯಲ್ಲಿ ಬಿತ್ತಿದ ಸಂದರ್ಭದಿಂದ ಬೆಳೆ ಬಂದು ರಾಶಿಯಾಗಿ ಮನೆ ಸೇರುವವರೆಗೂ, ಎಲ್ಲರೂ ಕಷ್ಟಪಟ್ಟು ದುಡಿಯುವುದು ಇಲ್ಲಿ ಕಂಡುಬರುತ್ತದೆ.

ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಬದಲಾಗುತ್ತಿವೆ. ಇದಕ್ಕೆ ಇಂದಿನ ಬಡತನ, ನಿಸರ್ಗದ ಅವಗಡಗಳು, ಶೈಕ್ಷಣಿಕ ಕಾರಣ, ನಿರುದ್ಯೋಗದ ಸಮಸ್ಯೆ, ನಗರ ಪಟ್ಟಣಗಳ ಸೆಳೆತಗಳಿಂದಾಗಿ ಅವಿಭಕ್ತ ಕುಟುಂಬದಲ್ಲಿನ ಸದಸ್ಯರು ತಮ್ಮ ಅವಿಭಕ್ತ ಕುಟುಂಬ, ತಮ್ಮ ಹಳ್ಳಿಗಳನ್ನು ಬಿಟ್ಟು ಬೇರೆ ಬೇರೆ ಕಡೆ ಚೆದುರಿ ಹೋಗುತ್ತಿದ್ದಾರೆ. ಇದು ಇವತ್ತಿನ ಅನಿವಾರ್ಯತೆಗೆ ಕಾರಣವನ್ನು ನೀಡುತ್ತದೆ. ಹೀಗೆ ತಮ್ಮ ಅವಿಭಕ್ತ ಕುಟುಂಬಗಳಿಂದ ಹೊರಗುಳಿಯುವ ಸದಸ್ಯರು, ಹಬ್ಬ-ಹರಿದಿನಗಳಲ್ಲಿ, ಉತ್ಸವ-ಜಾತ್ರೆಗಳಲ್ಲಿ, ಕುಟುಂಬದ ವಿವಾಹ ಮತ್ತಿತರ ಸಮಾರಂಭಗಳಲ್ಲಿ, ಕುಟುಂಬದಲ್ಲಿ ಸಾವು ಸಂಭವಿಸಿದಾಗ, ತಪ್ಪದೇ ಕುಟುಂಬದೊಂದಿಗೆ ಜೊತೆಗೂಡಿ ಅವರು ಅವಿಭಕ್ತ ಕುಟುಂಬದಲ್ಲಿನ ಇರುವಿಕೆಯನ್ನು ಬಲಪಡಿಸಿಕೊಳ್ಳುತ್ತಾರೆ. ಹೀಗೆ ಅವಿಭಕ್ತ ಕುಟುಂಬದಲ್ಲಿ ಹುಟ್ಟಿದ ಮಕ್ಕಳಿಗೆ ತಮ್ಮ ತಲೆಮಾರಿನ ಹಿರಿಯ ಹೆಸರುಗಳನ್ನು ಇಡುವುದರ ಮೂಲಕ ಅವರಿಗೆ ಗೌರವ ಮತ್ತು ಅವರ ನೆನಪುಗಳು ಸದಾ ತಮ್ಮ ಜೊತೆಯಲ್ಲಿರುವಂತೆ ಅವರ ಹೆಸರಿನೊಂದಿಗೆ ಭಾವನಾತ್ಮಕ ಸಂಬಂಧಗಳನ್ನು ಬೆಳೆಸಿ ಕೊಂಡಿರುತ್ತಾರೆ. ಈ ಅವಿಭಕ್ತ ಕುಟುಂಬದಲ್ಲಿ ಸ್ವಾರ್ಥ, ಮೈಗಳ್ಳತನ, ಸ್ವಪ್ರತಿಷ್ಠೆಗಳು ಎಲ್ಲಿಯೂ ಕಂಡುಬರುವುದಿಲ್ಲ. ಹೀಗೆ ಇಲ್ಲಿನ ಕುಟುಂಬಗಳು ಸಮಾಜಮುಖಿ ಕೆಲಸವನ್ನು ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ನಿರಂತರವಾಗಿ ಮಾಡುತ್ತಿವೆ.

೪.೧.೯. ಗ್ರಾಮಜೀವನ :

ಕರ್ನಾಟಕ-ಆಂಧ್ರ ಗಡಿಗ್ರಾಮಗಳಲ್ಲಿ ಜನರು ಎಲ್ಲ ಮತ-ಧರ್ಮಗಳೊಡನೆ ಅನ್ಯೋನ್ಯತೆಯಿಂದ ಜೀವನ ನಡೆಸುತ್ತಿದ್ದಾರೆ. ಗ್ರಾಮದಲ್ಲಿನ ಎಲ್ಲರಲ್ಲಿ ಪ್ರೀತಿ, ವಿಶ್ವಾಸ, ಗೌರವದ ಭಾವನೆ ಎದ್ದು ಕಾಣುತ್ತದೆ. ಎಲ್ಲರಲ್ಲಿ ಸಹೋದರತ್ವದ ಭಾವನೆಗಳು ಒಗ್ಗೂಡಿವೆ. ಸರಳ ಜೀವನಕ್ಕೆ ಆದ್ಯತೆ ಕೊಡುವ ಇಲ್ಲಿನ ಜನರು ಗ್ರಾಮದಲ್ಲಿ ಯಾರಿಗಾದರೂ ಕಷ್ಟ ಬಂದರೇ, ಯಾರ ಮನೆಯಲ್ಲಾದರು ಮದುವೆ ಮತ್ತಿತರ ಕಾರ್ಯಕ್ರಮಗಳು ನಡೆಯುತ್ತಿದ್ದರೆ, ಇಲ್ಲವೇ ಯಾರ ಮನೆಯಲ್ಲಾದರೂ ಸಾವು ಸಂಭವಿಸಿದರೆ ಇಡೀ ಊರೇ ಅವರ ಹತ್ತಿರ, ಅವರ ಬೆಂಬಲಕ್ಕಾಗಿ ಬಂದು ನಿಲ್ಲುವುದು ಇಲ್ಲಿನ ವಿಶೇಷ. ಇಲ್ಲಿನ ಗ್ರಾಮಗಳು ಕಡಿಮೆ ಜನಸಂಖ್ಯೆಯನ್ನು ಹೊಂದಿರುವುದರಿಂದ, ಗ್ರಾಮದಲ್ಲಿನ ಜನರ ನಡುವೆ ನಿಕಟ ಸಂಬಂಧಗಳು ಏರ್ಪಟ್ಟಿವೆ. ಒಂದೇ ಗ್ರಾಮದಲ್ಲಿ ವಾಸಿಸುವ ಜನರ ನಡುವೆ ಪರಸ್ಪರ ಪರಿಚಯ, ಮುಖಾಮುಖಿ ಭೇಟಿ, ನೇರ ಸಂಬಂಧ, ಸೌಹಾರ್ದ ಬಾಂಧವ್ಯಗಳು ಏರ್ಪಟ್ಟಿವೆ. ಪರಸ್ಪರ ಕೊಡುವುದು, ತೆಗೆದು ಕೊಳ್ಳುವುದು, ಕಷ್ಟ-ಸುಖಗಳಲ್ಲಿ, ನೋವು-ನಲಿವುಗಳಲ್ಲಿ ಮುತುವರ್ಜಿ ವಹಿಸುವುದು, ಪರಸ್ಪರ ಸಹಾಯ, ಸಹಕಾರ, ನೆರವು ಇಲ್ಲಿನ ಜನರಲ್ಲಿ ರಕ್ತಗತವಾಗಿ ಬಂದಂತಿದೆ. ಇವರ ಈ ರೀತಿಯ ಸಹಜ ಪ್ರಕ್ರಿಯೆಗಳು ಎಂದಿಗೂ ಇನ್ನೊಬ್ಬರಲ್ಲಿ ಪ್ರತಿಷ್ಠೆ, ಒಣಜಂಬ, ನಾನು ದೊಡ್ಡವನು ಎಂಬುದನ್ನು ಪ್ರಕಟಿಸುವುದಿಲ್ಲ. ಅಲ್ಲದೇ ಜೀವನದ ಅನಿಶ್ಚಿತತೆ, ನಶ್ವರತೆಯ ಅರಿವು ಇವರಿಗಿದ್ದು ತೋರಿಕೆಯ ಆಡಂಬರ ಇವರಲ್ಲಿಲ್ಲ. ಪ್ರೀತಿ, ವಿಶ್ವಾಸ, ಅನ್ಯೋನ್ಯತೆ, ಕಷ್ಟಸಹಿಷ್ಣುತೆ, ಅತಿಥಿ ಸತ್ಕಾರ ಇವು ಇಲ್ಲಿನ ಜನರಲ್ಲಿ ಹಾಸುಹೊಕ್ಕಾಗಿವೆ. ಅಲ್ಲದೇ ನಾಟಕೀಯತೆ, ಕೃತ್ರಿಮತೆ ಹಾಗೂ ವಂಚನೆಗಳನ್ನು ಇವರೆಂದು ಮಾಡುವುದಿಲ್ಲ. ಇವರ ಚಟಗಳು

ಅಷ್ಟೊಂದು ದುಬಾರಿಯಲ್ಲ. ಏನಿದ್ದರು ಚಹಾ, ಬೀಡಿ, ಹಳ್ಳಿಯ ದೊಡ್ಡಾಟ, ಸಣ್ಣಾಟ, ಭಜನೆ ಮೇಳಗಳ ಗುಂಗು ಇವೇ ಇವರ ಚಟಗಳು.

ಇಲ್ಲಿನ ಸಮುದಾಯಗಳು ಧರ್ಮ, ಜಾತಿ, ಉಪಜಾತಿ ಮತ್ತು ತಲಾತಲಾಂತರದಿಂದ ಬೆಳೆದುಕೊಂಡು ಬಂದ ಸಂಪ್ರದಾಯಗಳಿಗೆ ಹೆಚ್ಚಿನ ಆದ್ಯತೆಯನ್ನು ಕೊಟ್ಟರು ಇತರರಲ್ಲಿ ಮಾನವೀಯತೆಯನ್ನು ಕಂಡುಕೊಳ್ಳುತ್ತಾರೆ. ಪಾರಂಪರಿಕವಾಗಿ ಬಂದಂತಹ ಸಂಪ್ರದಾಯಗಳನ್ನು ದೀಢರನೆ ಮಾರ್ಪಡಿಸುವುದನ್ನು ಇಲ್ಲಿನವರು ವಿರೋಧಿಸುತ್ತಾರೆ. ಲಿಂಗಾಯತ, ಬ್ರಾಹ್ಮಣ, ಪಾಂಚಾಳ, ಅಗಸ, ಈಡಿಗ, ಉಪ್ಪಾರ, ಕಬ್ಬಲಿಗ, ಕಾಟಿಕ, ಕುರುಬ, ಗಾಣಿಗ, ಗೊಲ್ಲ, ಭೋಯಿ (ವಡ್ಡರ), ಮರಾಠ, ಮಾದಿಗ, ಸಮಗಾರ, ಚಲವಾದಿ, ಡೋರ, ದರ್ಜಿ, ದಾಸರು, ದೇವಾಂಗ, ನಾಯಿಂದ, ನೇಕಾರ, ಪಟೇಗಾರ, ಹೊಲೆಯ, ಮುಸ್ಲಿಂ, ಮೇದ, ರಜಪೂತ, ರೆಡ್ಡಿ, ಲಂಬಾಣಿ, ಪಿಂಜಾರ, ದರ್ವೆಷಿ, ಬುಡಜಂಗಮ ಮುಂತಾದ ಜಾತಿ ಮತ್ತು ಬುಡಕಟ್ಟು ಸಮೂಹಗಳು ಈ ಗಡಿಗ್ರಾಮಗಳಲ್ಲಿ ಕಂಡುಬರುತ್ತವೆ. ಇವೆಲ್ಲ ಸೌಹಾರ್ದತೆಯಿಂದ ಕೂಡಿರುವುದು ಇಲ್ಲಿನ ವಿಶೇಷವಾಗಿದೆ.

ಇಲ್ಲಿನ ಬಹುತೇಕ ಜನರೆಲ್ಲ ಕೃಷಿಕರಾಗಿದ್ದು, ಭೂಮಿಯ ಜೊತೆ ಅವಿನಾಭಾವ ಸಂಬಂಧ ಇರಿಸಿಕೊಂಡಿದ್ದಾರೆ. ಹೀಗಿರುವುದರಿಂದಲೇ ಭೂಮಿಯನ್ನು ತಾಯಿಗೆ ಹೋಲಿಸಿ ಭೂತಾಯಿ ಎಂಬ ಗೌರವದ ಸ್ಥಾನವನ್ನು ಕೊಟ್ಟಿರುತ್ತಾರೆ. ಈ ಭಾವನಾತ್ಮಕ ಸಂಬಂಧ ಇಲ್ಲಿನ ಎಲ್ಲ ಧರ್ಮ, ಜಾತಿ, ಬಡವ-ಶ್ರೀಮಂತರಲ್ಲಿ ಕಂಡುಬರುವದರೊಂದಿಗೆ ಇವರ ಭೂ ಆರಾಧನೆಯು ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತದೆ. ಹುಟ್ಟಿನಿಂದ ಸಾಯುವವರೆಗಿನ ಇವರ ಬದುಕಿನಲ್ಲಿ ಭೂಮಿಯ ಆರಾಧನೆ ಆವರ್ತಿತವಾಗಿರುವುದರ ಜೊತೆಗೆ 'ಹುಟ್ಟುವುದು ತಾಯಿಯ ಗರ್ಭದಲ್ಲಿ, ಸತ್ತು ಸೇರುವುದು ಭೂತಾಯಿಯ ಮಡಿಲಲ್ಲಿ' ಎಂಬ ಮೌಖಿಕ ಕಟ್ಟಳೆಯನ್ನು ಇಲ್ಲಿನ ಜನರು ರೂಢಿಸಿಕೊಂಡಿರುವರು. ಭೂಮಿಯ ಜೊತೆಗೆ ಒಂದಿಲ್ಲದೊಂದು ತರಹದಲ್ಲಿ ಕೃಷಿಕನಿಗೆ (ಆಯಗಾರ) ಎಲ್ಲರೂ ಸಂಬಂಧ ಇಟ್ಟುಕೊಂಡವರೇ ಆದುದರಿಂದ ಕೃಷಿಕರ ಜೀವನಾವರ್ತ ಸಂಸ್ಕಾರಗಳಲ್ಲಿ ಭೂಮಿಗೂ ಒಂದು ಯೋಗ್ಯ ಸ್ಥಾನ ನೀಡಲಾಗಿದೆ. ವರ್ಷದ ಕೃಷಿ ಚಟುವಟಿಕೆಗಳು ಪ್ರಾರಂಭಿಸುವುದಕ್ಕೆ ಮೊದಲು ಭೂಮಿಪೂಜೆ ಮಾಡಲಾಗುತ್ತದೆ. ಇದರ ನಂತರವೇ ಕೃಷಿ ಚಟುವಟಿಕೆಗಳು ಪ್ರಾರಂಭಗೊಳ್ಳುವವು. ಭೂಮಿಪೂಜೆ ಮೃಗಶಿರ ನಕ್ಷತ್ರದಂದು ಮಾಡಲಾಗುತ್ತದೆ. ಈ ಮೃಗಶಿರಾಕ್ಕೆ ಇಲ್ಲಿನ ಆಡುಮಾತಿನಲ್ಲಿ 'ಮೀರಗಾ' ಎಂದು ಕರೆಯುತ್ತಾರೆ. ಈ ಮೀರಗಾ ಮಿಂಚಿದ ದಿನದಂದು ವಿವಿಧ ಪ್ರಕಾರದ ಸಿಹಿ ಅಡುಗೆಯ ನೈವೇದ್ಯ ಮಾಡಿ ಭೂಮಿಗೆ ಎಡೆ ಹಿಡಿಯಲಾಗುತ್ತದೆ. ಮಾಂಸಹಾರಿಗಳು ಕುರಿ, ಕೋಳಿಗಳ ನೈವೇದ್ಯ ಮಾಡುವುದುಂಟು. ಇದಾದ ನಂತರ ನೇಗಿಲ ಪೂಜೆಯನ್ನು ಸುಮಂಗಲೆಯರಿಂದ ಮಾಡಿಸಿ ಹೊಲದಲ್ಲಿ ನೇಗಿಲು ಹೂಡುವುದರ ಮೂಲಕ ಕೃಷಿ ಚಟುವಟಿಕೆಗಳನ್ನು ಪ್ರಾರಂಭಿಸಲಾಗುತ್ತದೆ.

ಇಲ್ಲಿನ ಕೃಷಿಕರು ಪ್ರತಿಯೊಂದು ಹಬ್ಬ ಹರಿದಿನಗಳಲ್ಲಿ ತಪ್ಪದೇ ಭೂಮಿ ಪೂಜೆಯನ್ನು ಮಾಡುತ್ತಾರೆ. ಮಕರಸಂಕ್ರಾಂತಿಯಂದು ಮನೆಯನ್ನು ಶೃಂಗಾರಗೊಳಿಸಿ ಹೊಲಗಳಲ್ಲಿ ಬೆಳೆದು ನಿಂತಿರುವ

ಕಬ್ಬು, ಬಾಳೆಹಣ್ಣು, ಕಡಲೆಕಾಯಿಗಳನ್ನು ತಂದು ಗೋವಿನ ಸಗಣಿಯಿಂದ ಮಾಡಿದ ಬಟ್ಟಲುಗಳಲ್ಲಿಟ್ಟು, ಮನೆಯ ತಲಬಾಗಿಲಿನ ಎರಡು ಮಗ್ಗಲು ಮತ್ತು ಅಂಗಳದ ನಟ್ಟನಡುವೆ ಇಡುತ್ತಾರೆ. ಎತ್ತುಗಳನ್ನು ದೇವರೆಂದು, ಬಸವನೆಂದು ಪೂಜಿಸುತ್ತಾರೆ. ದನಕರುಗಳನ್ನು ಶೃಂಗರಿಸಿ ಊರಿನ ಆಯಕಟ್ಟಿನ ಮೈದಾನದಲ್ಲಿ ಗ್ರಾಮದವರೆಲ್ಲ ತಮ್ಮ ತಮ್ಮ ದನಕರುಗಳನ್ನು ಅಲ್ಲಿಗೆ ತಂದು ಅಲ್ಲಿ ನಡೆಯುವ ದನಗಳ ಸ್ಪರ್ಧೆಯಲ್ಲಿ ಭಾಗಿಯಾಗುತ್ತಾರೆ. ಸುಂದರ, ಬಲಿಷ್ಠವಾದ ಎತ್ತುಗಳು ಈ ಸ್ಪರ್ಧೆಯಲ್ಲಿ ಗೆದ್ದು ಮಾಲೀಕನ ನಂಬಿಕೆಗೆ ಪ್ರಮಾಣಪತ್ರ ಒದಗಿಸುತ್ತವೆ. ಈ ಎಲ್ಲ ಎತ್ತುಗಳನ್ನು ಸಾಲುಸಾಲಾಗಿ ಊರಿನ ಬೀದಿಗಳಲ್ಲಿ ಮೆರವಣಿಗೆ ಮಾಡಿ ರಾತ್ರಿ ಬೆಂಕಿಯ ಕಿಚ್ಚಿನಲ್ಲಿ ಅವುಗಳನ್ನು ಓಡಿಸಲಾಗುತ್ತದೆ. ಹೀಗೆ ಬೆಂಕಿಯಲ್ಲಿ ಓಡಿಸುವುದರಿಂದ ಎತ್ತುಗಳಿಗೆ ದೃಷ್ಟಿ ತಾಕಿದ್ದರೆ, ಇಲ್ಲವೇ ರೋಗ ರುಜಿನಗಳು ಬಂದಿದ್ದರೆ, ವಾಸಿಯಾಗುತ್ತವೆಂಬ ನಂಬಿಕೆ ಇವರಲ್ಲಿದೆ.

ಯುಗಾದಿ ಹಬ್ಬ ಎಂದರೆ ಇಲ್ಲಿನ ಗ್ರಾಮೀಣರಿಗೆ ಹೊಸ ವರ್ಷ, ಅವತ್ತಿನಿಂದಲೇ ತಮ್ಮ ಹೊಸ ವರ್ಷವನ್ನು, ಹೊಸ ವರ್ಷದ ಪಂಚಾಂಗವನ್ನು ಪ್ರಾರಂಭಿಸುವರು. ಈ ಹಬ್ಬದಲ್ಲಿನ ವಿಶೇಷವೆಂದರೆ ಊರಿನ ಎಲ್ಲ ಹಿಂದೂಗಳು ಜೀವನದ ಕಷ್ಟ-ಸುಖಗಳ ಕಲ್ಪನೆಯಲ್ಲಿ, ಬೇವು-ಬೆಲ್ಲಗಳ ಮಿಶ್ರಣದ ಬೇವಿನಹಾಲನ್ನು ಮನೆಯಲ್ಲಿ ತಯಾರಿಸಿ ಸೇವಿಸುವುದು. ಮನೆಯಲ್ಲಿ ತಯಾರಿಸಿದ ಬೇವನ್ನು ಅವರಷ್ಟೇ ಕುಡಿಯದೆ, ಅಕ್ಕ-ಪಕ್ಕ, ನೆರೆ-ಹೊರೆ ಮತ್ತು ಮುಸ್ಲಿಂ ಜನಾಂಗದವರಿಗೂ ಕೊಡುವುದು ಇಲ್ಲಿನ ವಿಶೇಷ. ಇದೇ ದಿನ ಸಂಜೆ ಗ್ರಾಮದ ಎಲ್ಲ ಸದಸ್ಯರು ಗ್ರಾಮದೇವರ ಗುಡಿಯಲ್ಲಿ ಇಲ್ಲವೇ ಗ್ರಾಮದ ಚಾವಡಿಯಲ್ಲಿ ಸೇರಿ ವರ್ಷದ ಭವಿಷ್ಯವನ್ನು ಪೂಜಾರಿಗಳಿಂದ ಓದಿಸಿ, ಶುಭ-ಅಶುಭಗಳನ್ನು ತಿಳಿದುಕೊಳ್ಳುವರು. ಗ್ರಾಮಕ್ಕೆ ಏನಾದರೂ ತೊಂದರೆಗಳಾಗುವಂತಿದ್ದರೆ ಅದಕ್ಕೆ ಪರಿಹಾರಗಳನ್ನು ಕೇಳಿ ಗ್ರಾಮಕ್ಕೆ ಕೇಡುಂಟಾಗದಂತೆ ನೋಡಿಕೊಳ್ಳುವರು. ಇವುಗಳಲ್ಲದೇ ದೀಪಾವಳಿ, ಶಿವರಾತ್ರಿ, ನಾಗರಪಂಚಮಿ, ಗ್ರಾಮದೇವರ ಜಾತ್ರೆ/ ಉತ್ಸವಗಳನ್ನು ಗ್ರಾಮದ ಎಲ್ಲರೂ ಕೂಡಿ ಭಾಗವಹಿಸುವುದು ಇಲ್ಲಿನ ವಿಶೇಷವಾಗಿದೆ.

ಇನ್ನು ಈ ಗಡಿಗ್ರಾಮಗಳಲ್ಲಿ ಬಾಲ್ಯವಿವಾಹ ಪದ್ಧತಿ, ದೇವದಾಸಿ ಪದ್ಧತಿ, ಬಸವಿ ಬಿಡುವ ಪದ್ಧತಿ, ಜೀತಪದ್ಧತಿ, ಆಯಪದ್ಧತಿ, ಬಿಟ್ಟಿಚಾಕರಿ ಪದ್ಧತಿ, ಅಸ್ಪೃಶ್ಯತೆಗಳಂತಹ ಅನಿಷ್ಟ ಪದ್ಧತಿಗಳು ಜಾರಿಯಲ್ಲಿವೆ. ಇವುಗಳನ್ನು ತುರ್ತಾಗಿ ಹೋಗಲಾಡಿಸಲು ಮುಂದಾಗಬೇಕಾಗಿದೆ. ಇಂತಹ ಪದ್ಧತಿಗಳನ್ನು ಗ್ರಾಮಸಮಾಜದಿಂದ ಹೋಗಲಾಡಿಸಿದಾಗ ಮಾತ್ರ ಗ್ರಾಮಸಂಸ್ಕೃತಿ ಇನ್ನಷ್ಟು ಗಟ್ಟಿಗೊಳ್ಳುತ್ತದೆ.

### ೪.೨. ಶೈಕ್ಷಣಿಕ ಸ್ಥಿತಿಗತಿ

### ೪.೨.೧. ಚಾರಿತ್ರಿಕ ಕಾಲದ ಶೈಕ್ಷಣಿಕತೆ :

ಶಾಸನಗಳು, ಸಾಹಿತ್ಯ ಕೃತಿಗಳು ಅಂದಂದಿನ ಅರಸರು ಶೈಕ್ಷಣಿಕ ಚಟುವಟಿಕೆಗಳಿಗೆ ಅನೇಕ ದಾನ ದತ್ತಿ, ಉಂಬಳಿಗಳನ್ನು ಧಾರಾಳವಾಗಿ ಕೊಡುತ್ತಿದ್ದರು ಎಂಬುದನ್ನು ತಿಳಿಸುತ್ತವೆ. ಈ ಪ್ರದೇಶವನ್ನಾಳಿದ ಎಲ್ಲ ಹಿಂದೂ-ಮುಸ್ಲಿಂ ಅರಸರು ಶೈಕ್ಷಣಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸಿದ್ದರು. ಅಂತೆಯೇ ರಾಷ್ಟ್ರಕೂಟ ಅರಸರ ಗತವೈಭವ ಸಾರುವ ಅನೇಕ ಶಿಲಾಶಾಸನಗಳಲ್ಲಿ ಕೆಲವು ಶಿಕ್ಷಣಕ್ಕೆ ಸಂಬಂಧಿಸಿದ ಶಾಸನಗಳು

ಕಂಡುಬರುತ್ತವೆ. ಕವಿರಾಜಮಾರ್ಗ ಕೃತಿಯ ಶ್ರೀವಿಜಯನು ಕವಿರಾಜಮಾರ್ಗದಲ್ಲಿ ಕಾವ್ಯವನ್ನು ಕುರಿತು ಓದದೆಯೂ, ಅಕ್ಷರ ಜ್ಞಾನದಿಂದ ದೂರ ಉಳಿದ ಜನಸಾಮಾನ್ಯರು ಸೊಗಸಾಗಿ ಕಾವ್ಯ ಕಟ್ಟುವ ಕಲೆಯನ್ನು ತಿಳಿದಿದ್ದರು ಎಂದಿದ್ದಾನೆ. ಪಂಡಿತರು ಒಂದು ಕಡೆ ಶಿಷ್ಟಸಾಹಿತ್ಯವನ್ನು ಪೋಷಿಸಿಕೊಂಡು ಬಂದರೆ, ಜನಪದರು ಮೌಖಿಕವಾಗಿ ಜನಪದ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕಟ್ಟಿ ಬೆಳೆಸಿದರು.

ಈ ಪ್ರದೇಶದ ಸಾಂಸ್ಕೃತಿಕತೆಯಲ್ಲಿ ಶಿಕ್ಷಣದ ಪ್ರಗತಿಯು ಪ್ರಾಚೀನ ಕಾಲದಿಂದಲು ಪ್ರಮುಖವಾಗಿ ಬೆಳೆದುಕೊಂಡು ಬಂದಿದೆ. ಈ ಭಾಗದಲ್ಲಿ ಪ್ರಚಲಿತದಲ್ಲಿದ್ದ ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾ ಸ್ಥಾನಗಳು, ದೇವಾಲಯಗಳು ಬಹುಮುಖ್ಯವಾದ ಶೈಕ್ಷಣಿಕ ಕೇಂದ್ರಗಳಾಗಿದ್ದವು. ಇಲ್ಲಿನ ಆಡಕಿ, ಸೇಡಂ, ಹಂದರ್ಕಿ ಗ್ರಾಮಗಳು ಕನ್ನಡ ಪಾಠಶಾಲೆಗಳಾಗಿದ್ದವು ಎಂಬುದು ಇಲ್ಲಿ ದೊರೆತ ಶಾಸನಗಳಿಂದ ಗೊತ್ತಾಗುತ್ತದೆ.

"ಸೇಡಂ ಅಗ್ರಹಾರವಾಗಿತ್ತು ಎನ್ನುವುದಕ್ಕೆ ಇಲ್ಲಿಯ ಕ್ರಿ.ಶ. ೧೧೦೬ ಮತ್ತು ಕ್ರಿ.ಶ. ೧೧೨೪ರ ಶಾಸನಗಳೇ ಸಾಕ್ಷಿ, ಸೇಡಿಂಬ ಅಗ್ರಹಾರದ ವಿಪ್ರೋತ್ತಮರನ್ನು ಕುರಿತು 'ಚವುಷಷ್ಠಿಕಳಾನ್ವಿತ ವಸುಮತೀ ನಿರ್ವಾಣರುಂ, ಸಮಸ್ತ ವಿದ್ಯಾ ವಿಶೇಷಣರುಂ, ಶ್ರೀ ನಾರಾಯಣ ದೇವರ ಪಾದ ಪಂಕಜ ಭ್ರಮರರುಮಪ್ಪ ಶ್ರೀಮದಗ್ರಹಾರಂ ಸೇಡಿಂಬದ ಅಶೇಷ ಮಹಾಜನ ಮೂನ್ನೂರರುಂ ಸ್ಥಿರಂಜೀಯಾತ್' ಎಂದು ಶಾಸನ ವರ್ಣಿಸಿದೆ. ಇನ್ನೊಂದು ಶಾಸನದಲ್ಲಿ ಇಲ್ಲಿಯ ೩೦೦ ಮಹಾಜನರು ಶಾಂತಿನಾಥ ಚೈತ್ಯಾಲಯವನ್ನು ಕಟ್ಟಿಸಿ ಅದಕ್ಕೆ ಸುವರ್ಣ ಕಳಸಾರೋಹಣ ಮಾಡಿಸಿ ಅದಕ್ಕೆ ಬ್ರಹ್ಮ ಜಿನಾಲಯ ಎಂದು ಹೆಸರಿಟ್ಟಿದ್ದು ಶಾಸನ ಸ್ಪಷ್ಟವಾಗಿ ಹೇಳಿದ್ದರಿಂದ, ಸೇಡಂ ಒಂದು ಅಗ್ರಮಾನ್ಯ ಅಗ್ರಹಾರವಾಗಿತ್ತು"[೧] ಎಂಬುದು ಖಚಿತವಾಗುತ್ತದೆ. ಅಲ್ಲದೇ ಶಾಂತಿನಾಥ ಬಸದಿಯ ಬಳಿಯ ಕೊಟ್ಟಿಗೆಯೊಂದರಲ್ಲಿನ ಶಾಸನವು ಸೇಡಂನಲ್ಲಿ ಸರಸ್ವತಿ ದೇವಿಗೆಂದೇ ದೇವಸ್ಥಾನವನ್ನು ಕಟ್ಟಿಸಿದ್ದಕ್ಕೆ ಸಾಕ್ಷಿಯಾಗುತ್ತದೆ. ಇದರಂತೆ "ಹಂದರ್ಕಿಯಲ್ಲಿ ಕನ್ನಡ ಪಾಠಶಾಲೆ ಇದ್ದುದನ್ನು ಅಲ್ಲಿಯ ಲೋಕೇಶ್ವರ ದೇವಾಲಯದಲ್ಲಿನ ಕ್ರಿ.ಶ.೧೧೯೧ರ ಶಾಸನವೊಂದು ವಿವರ ನೀಡುತ್ತದೆ. ಆಡಳಿತದ ಘಟಕ ಹೈಹೈಯ ವಂಶಸ್ಥರ ಆಳ್ವಿಕೆಯ ಅರಳೂರು ಕೇಂದ್ರ ತೀರ ಹತ್ತಿರವಿರುವ ಹಂದರ್ಕಿ ಪಾಠಶಾಲೆಯಾಗಿತ್ತು. ಅರಸ ಲೋಕರಸನು ದಾನಕೊಟ್ಟ ದತ್ತಿಯ ಉಲ್ಲೇಖ ಗಮನಾರ್ಹವಾಗಿದೆ. "ದೇವರಂಗ ಭೋಗಕ್ಕೆಂ ರಂಗಭೋಗರಂ ತಪೋದನಕ್ಕಂ ಆಹಾರಕ್ಕೆ ಮತ್ತು ವಿದ್ಯಾಕೇಂದ್ರಕ್ಕೆ ಯಾವ ಯಾವ ಖರ್ಚಿಗಾಗಿ ಎಷ್ಟೆಷ್ಟು ಎಕರೆ ಜಮೀನು ಧಾರೆ ಎರೆದಿದ್ದ ವಿವರದ ಜೊತೆಗೆ ಕನ್ನಡ ವಕ್ಕರ(ಕನ್ನಡ ಅಕ್ಷರ) ವಿದ್ಯಾರ್ಥಿ ಮಾಣಿಗಳಿಗೆ ವೋದಿಸುವ ಉಪಾಧ್ಯಾರ್ಯಗಂ ಎಂದು ಕನ್ನಡ ಅಭ್ಯಾಸಕ್ಕೆ ಕೊಟ್ಟ ವಿಶೇಷ ಪ್ರಾಧಾನ್ಯತೆಯನ್ನು ನಾವು ಮೆಚ್ಚಲೇಬೇಕು."[೨] ಈ ರೀತಿಯಾಗಿ ಅಂದಿನ ಅರಸರು ಅಪಾರವಾದ ದಾನದತ್ತಿಗಳನ್ನು ನೀಡುತ್ತ ಕರ್ನಾಟಕ-ಆಂಧ್ರಗಡಿಭಾಗದಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸುತ್ತಿದ್ದು ಗೊತ್ತಾಗುತ್ತದೆ..

ಆಳರಸರಿಂದ ನಡೆದುಕೊಂಡು ಬಂದ ಶೈಕ್ಷಣಿಕ ಚಟುವಟಿಕೆಗಳು ತದನಂತರದ ಮುಸ್ಲಿಂ ಅರಸರ ಕಾಲಕ್ಕೆ ಈ ದಿಕ್ಕನ್ನು ಬದಲಾಯಿಸಿಕೊಂಡಿತು. ಮುಸ್ಲಿಂ ಅರಸರು ಮೊದಲಿನಿಂದ ನಡೆದುಕೊಂಡು

ಬಂದಂತಹ ಆಡಳಿತ ವ್ಯವಸ್ಥೆಯನ್ನು ತಮಗೆ ಸೂಕ್ತವೆನಿಸಿದ ರೀತಿಯಲ್ಲಿ ಮಾರ್ಪಡಿಸಿದರು. ಇಲ್ಲಿಯ ವರೆಗೂ ಇದ್ದ ಶೈಕ್ಷಣಿಕ ವ್ಯವಸ್ಥೆಯನ್ನು ಮಧ್ಯಯುಗದ ಮುಸ್ಲಿಂ ಆಡಳಿತ ಮಾರ್ಪಡಿಸಿ, ಈ ಭಾಗಕ್ಕೆ ಮೊಟ್ಟಮೊದಲ ಬಾರಿಗೆ ಇಸ್ಲಾಂ ಮಾದರಿಯ ಶಿಕ್ಷಣ ಕ್ರಮವನ್ನು ಜಾರಿಗೆ ತಂದರು. ಬಹುಮನಿ ಸುಲ್ತಾನ ಮಹಮ್ಮದಷಾನ ಮಂತ್ರಿ(ಗವಾನ) ಶಿಕ್ಷಣ ಪ್ರೇಮಿಯಾಗಿದ್ದು, ಇವನ ಮುಖಾಂತರವೇ ಈ ಪ್ರದೇಶದಲ್ಲಿ ಸಾಕಷ್ಟು 'ಮುಕ್ತಾಬ' ಎನ್ನುವ ಇಸ್ಲಾಂ ಮಾದರಿಯ ಪ್ರಾಥಮಿಕ ಶಿಕ್ಷಣ ಕೇಂದ್ರಗಳು ಪ್ರಾರಂಭವಾದವು. ಮುಸ್ಲಿಂ ಅರಸರು ಶಿಕ್ಷಣಕ್ಕೆ ಅಪಾರವಾದ ಪ್ರೋತ್ಸಾಹ ನೀಡಿದ್ದರೂ, ಅದು ಕೇವಲ ಮುಸ್ಲಿಮರಿಗಾಗಿ, ಈ ಶಿಕ್ಷಣ ಕೇಂದ್ರಗಳಲ್ಲಿ ಮುಸ್ಲಿಂಮೇತರರಿಗೆ ಶೈಕ್ಷಣಿಕ ರಂಗದಲ್ಲಿ ಭಾಗವಹಿಸುವುದನ್ನು ನಿಷೇಧಿಸಿತ್ತು. ಅಲ್ಲದೇ ಮುಸ್ಲಿಮರಲ್ಲಿಯೇ ಕೇವಲ ರಾಜಮನೆತನದ ಹಾಗೂ ಅವರ ಬಂಧುಗಳ ಸ್ತ್ರೀಯರಿಗೆ ಮಾತ್ರ ಶಿಕ್ಷಣವನ್ನು, ಅವರವರ ಮನೆಗಳಲ್ಲಿಯೇ ನೀಡುತ್ತಿದ್ದರು. ಸಾಮಾನ್ಯ ಮುಸ್ಲಿಂ ಸ್ತ್ರೀಯರಿಗೆ ಶಿಕ್ಷಣ ನಿರಾಕರಿಸಲಾಗಿತ್ತು. ಮತ್ತು ಇವರನ್ನು ಪರ್ದಾ ಪದ್ಧತಿಯಲ್ಲಿ ಇಟ್ಟಿದ್ದರು. ಹೀಗಾಗಿ ಬಹುಮನಿ ಸುಲ್ತಾನರ ಕಾಲದಲ್ಲಿ ಹಿಂದೂಗಳು ತಮ್ಮ ನಿವಾಸಗಳಲ್ಲೋ, ಮಠಮಾನ್ಯಗಳಲ್ಲೋ ಜ್ಞಾನದಾಹ ತೀರಿಸಿ ಕೊಳ್ಳುತ್ತಿದ್ದರು. ಮಹಿಳಾ ಶಿಕ್ಷಣ ಈ ಕಾಲಕ್ಕೆ ತೀರಾ ಅಪರೂಪವಾಗಿತ್ತು.

ಮುಂದಿನ ಹೈದರಾಬಾದ್ ನಿಜಾಂನ ಆಡಳಿತವು ಬಹುಮನಿ ಮತ್ತು ಇತರ ಮುಸ್ಲಿಂ ಆಡಳಿತದ ಮಾದರಿಯನ್ನೇ ಮುಂದುವರೆಸಿಕೊಂಡು ಬಂತು. ನಿಜಾಂನ ಕಾಲಕ್ಕೆ ಅವರ ಮಾತೃಭಾಷೆ ಉರ್ದುವೇ ಎಲ್ಲ ರಂಗಗಳಲ್ಲಿ ಕಂಡುಬಂದು ಪ್ರಾಥಮಿಕ ಶಾಲೆಯಿಂದ ವಿಶ್ವವಿದ್ಯಾಲಯದ ತನಕ ಉರ್ದು ಭಾಷೆಯೇ ಕಲಿಕೆಯ ಮಾಧ್ಯಮವಾಗಿತ್ತು. ನ್ಯಾಯಾಲಯಗಳು, ಕಛೇರಿಗಳು ಮಾತ್ರವಲ್ಲದೆ ದೈನಂದಿನ ಸಂಪರ್ಕಗಳು ಉರ್ದುವಿನಲ್ಲಿಯೇ ನಡೆಯುತ್ತಿದ್ದವು. ರಾಜಭಾಷೆಯಾದ ಉರ್ದು, ರಾಜ್ಯಭಾಷೆಯಾಗಿ ಕನ್ನಡವನ್ನು ಕುಂಠಿತಗೊಳಿಸಿತು. ಉರ್ದು ಭಾಷೆಯನ್ನು ಮುಸ್ಲಿಂಮೇತರರು ದ್ವೇಷಿಸದಿದ್ದರೂ ತಮ್ಮ ತಮ್ಮ ಭಾಷೆಯ ಮೇಲಿನ ಪ್ರೀತಿಯನ್ನು ಹಿಂದೂಗಳು, ಕನ್ನಡಿಗರು ಮರೆಯುವಂತಿರಲಿಲ್ಲ. ಅದಕ್ಕಾಗಿ ಹಿಂದೂಗಳಿಗೆ ಕನ್ನಡ ಕಲಿಯುವ ಶಾಲೆಗಳು ಬೇಕೆನ್ನಿಸಿದವು. ಉರ್ದು ಮಾಧ್ಯಮ ಒತ್ತಾಯವಾಗಿದ್ದು, ಕನ್ನಡ ಭಾಷೆಯನ್ನು ತುಳಿಯುವುದಕ್ಕಾಗಿಯೇ ಇದನ್ನು ಜಾರಿಗೊಳಿಸಲಾಗಿದೆ ಎಂಬುದು ಇಲ್ಲಿ ಸ್ಪಷ್ಟವಾದಂತಿತ್ತು. ನಿಜಾಂನ ರಾಜ್ಯದಲ್ಲಿ ಕನ್ನಡ ಮಾಧ್ಯಮದ ಶಾಲೆಗಳಿಗೆ ಅನುಮತಿ ಕೊಡುತ್ತಲೇ ಇರಲಿಲ್ಲ.

ಹೈದ್ರಾಬಾದ್ ಸಂಸ್ಥಾನ ಬ್ರಿಟಿಷರ ಮಾಂಡಲಿಕತ್ವವನ್ನು ಸ್ವೀಕರಿಸಿದ್ದರಿಂದ ಅವರ ಸಲಹೆಗಳನ್ನು ಹೈದ್ರಾಬಾದ್ ರಾಜ್ಯದಲ್ಲಿ ಸಹಜವಾಗಿಯೇ ಕಾರ್ಯಗತಗೊಳಿಸಲಾಯಿತು. ಕ್ರಿ.ಶ. ೧೮೫೪ರ ವುಡನ್ ಪತ್ರದ ಪ್ರಭಾವದಿಂದಾಗಿ ಕ್ರಿ.ಶ. ೧೮೬೫ರಲ್ಲಿ ನಿಜಾಂ ಸರ್ಕಾರ ಸ್ವತಂತ್ರವಾದ ಶಿಕ್ಷಣ ಇಲಾಖೆ ಪ್ರಾರಂಭಿಸಿತು. "ಪ್ರತಿ ತಾಲೂಕಿಗೆ ಎರಡರಂತೆ, ಜಿಲ್ಲಾಕೇಂದ್ರದಲ್ಲಿ ಒಂದರಂತೆ ಉರ್ದು ಮಾಧ್ಯಮದ ಶಾಲೆಗಳು ಪ್ರಾರಂಭಗೊಂಡು ಇವುಗಳ ಉಸ್ತುವಾರಿಯನ್ನು ಹಳ್ಳಿಯ ಮುಖ್ಯಸ್ಥ ಅಥವಾ ಪಟವಾರಿಯು ನೋಡುಕೊಳ್ಳುತ್ತಿದ್ದನು. ನಂತರ ಕ್ರಿ.ಶ. ೧೯೨೪ರಲ್ಲಿ ಈ ಶಾಲಾ ಉಸ್ತುವಾರಿಯ ಹೊಣೆಯನ್ನು ತಪಾಸಣಾಧಿಕಾರಿ ವಹಿಸಿಕೊಂಡನು."[೩] ಕ್ರಿ.ಶ. ೧೯೧೮ರಲ್ಲಿ ಹೈದ್ರಾಬಾದಿನಲ್ಲಿ ಉಸ್ಮಾನಿಯಾ

ವಿಶ್ವವಿದ್ಯಾಲಯ ಸ್ಥಾಪನೆಗೊಂಡು ಈ ಭಾಗದ ಜನತೆಗೂ ಇದರಿಂದ ಪದವಿ ಪಡೆಯಬಲ್ಲೆವೆಂಬ ಭರವಸೆಯುಂಟಾಯಿತು. ಮುಂದೆ ಸ್ವಲ್ಪ ಸಮಯದಲ್ಲಿಯೇ ಕಲಬುರ್ಗಿ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಇಂಟರ್ ಮಿಡಿಯೇಟ್ ತರಗತಿಗಳನ್ನು ಪ್ರಾರಂಭಿಸಲಾಯಿತು. ಕ್ರಿ.ಶ. ೧೯೨೦ರ ವೇಳೆಗೆ ಈ ಭಾಗದಲ್ಲೆಲ್ಲ ಶಿಕ್ಷಣವು ಉರ್ದು ಮಾಧ್ಯಮದಲ್ಲಿ ಜಾರಿಯಲ್ಲಿತ್ತು.

ಇಂತಹ ಸಂದರ್ಭದಲ್ಲಿ ಹಿಂದೂಗಳು ಖಾಸಗಿಯಾಗಿ ಮಠಮಾನ್ಯಗಳಲ್ಲಿ ವಿದ್ಯಾಭ್ಯಾಸ ಪಡೆದರು. ಈ ಮಠಮಾನ್ಯಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ನೀಡಲಾಗುತ್ತದೆ ಎಂದು ನಿಜಾಂ ಅರಸನಿಗೆ ತಿಳಿಯಬಾರದೆಂದು ಉರ್ದು ಭಾಷೆಗೆ ಸಮೀಪವಾದ 'ಮೋಡಿ' ಭಾಷೆಯನ್ನು ಈ ಸಂದರ್ಭದಲ್ಲಿ ಬಳಸಲಾಯಿತು. ಈ ಮೋಡಿಲಿಪಿ ಮೇಲ್ನೋಟಕ್ಕೆ ಉರ್ದು ಲಿಪಿಯ ಹಾಗೆ ಕಂಡರೂ ಅದರಲ್ಲಿನ ವಿಷಯ ಕನ್ನಡಕ್ಕೆ ಸಂಬಂಧಿಸಿದ್ದಾಗಿರುತ್ತಿದ್ದು, ಸಾಮಾನ್ಯವಾಗಿ ನಿಜಾಂ ಅರಸನ ಆಡಳಿತಗಾರರು ಈ ಮೋಡಿಲಿಪಿಯನ್ನು ಅರಿಯಲು ಸಾಧ್ಯವಾಗುತ್ತಿರಲಿಲ್ಲ. ಹೀಗೆ ಮಠಮಾನ್ಯಗಳು ಮೋಡಿಲಿಪಿಯನ್ನು ಬಳಸಿಕೊಂಡು ಕನ್ನಡಿಗರ, ಕನ್ನಡದ ಮತ್ತು ಧಾರ್ಮಿಕ, ಸಾಮಾಜಿಕ, ಆರ್ಥಿಕ ಅಂಶಗಳ ಶಿಕ್ಷಣವನ್ನು ಹಿಂದೂಗಳಿಗೆ ನೀಡಿತು. ಇಂದಿಗೂ ಇಲ್ಲಿನ ಹಳ್ಳಿಗಳಲ್ಲಿನ ಸುಮಾರು ೮೦-೯೦ ವರ್ಷದ ಹಿರಿಯರು ಈ ಮೋಡಿಲಿಪಿ ಬಲ್ಲವರಾಗಿದ್ದು, ಇದನ್ನೇ ಅವರು ಇಂದಿಗೂ ಬಳಸುತ್ತಾರೆ.

ಸ್ವಾತಂತ್ರ್ಯ ಪೂರ್ವದ ಕ್ರಿ.ಶ. ೧೯೨೭ರಲ್ಲಿ ಇಡೀ ಹೈದ್ರಾಬಾದ್ ಸಂಸ್ಥಾನದಲ್ಲಿದ್ದುದು ಕೇವಲ ಹದಿನೈದು ಪ್ರೌಢಶಾಲೆಗಳು. ಓದು-ಬರಹ ಬರುತ್ತಿದ್ದುದು ನೂರಕ್ಕೆ ಮೂರು-ನಾಲ್ಕು ಜನಕ್ಕೆ ಮಾತ್ರ. ಎರಡು ಮೂರು ಸಾವಿರ ಜನಸಂಖ್ಯೆಯುಳ್ಳ ತಾಲೂಕಿನ ಪ್ರಮುಖ ಸ್ಥಳಗಳಲ್ಲಿ ಕೂಡ ಪ್ರಾಥಮಿಕ ಶಾಲೆಗಳು ಇರಲಿಲ್ಲವೆಂದರೆ ಇಲ್ಲಿನ ವಿದ್ಯಾಭ್ಯಾಸದ ದುಃಸ್ಥಿತಿ ಎಷ್ಟು ಧಾರುಣವಾಗಿತ್ತೆಂಬುದನ್ನು ಅರಿಯ ಬಹುದು.

ಕ್ರಿ.ಶ. ೧೮೭೫ರಲ್ಲಿ ಗುಲಬರ್ಗಾದಲ್ಲಿ ಆಂಗ್ಲ-ದೇಶೀಯ ಮಾಧ್ಯಮದ ಶಾಲೆಯೊಂದು ತೆರೆಯಲ್ಪಟ್ಟಿತು. ಇದರಲ್ಲಿ ಉರ್ದು ಮಾಧ್ಯಮವಿದ್ದು, ಆಂಗ್ಲಭಾಷೆಯನ್ನು ಒಂದು ವಿಷಯವನ್ನಾಗಿ ಬೋಧಿಸಲಾಗುತ್ತಿತ್ತು. ಬರುಬರುತ್ತ ಇಂಥ ಶಾಲೆಗಳಲ್ಲಿ ವಿಜ್ಞಾನ ವಿಷಯವನ್ನು ಆಂಗ್ಲಭಾಷೆಯಲ್ಲೇ ಬೋಧಿಸುವ ವ್ಯವಸ್ಥೆ ಮಾಡಲಾಯಿತು. ಕ್ರಿ.ಶ. ೧೮೯೦ರಲ್ಲಿ ಉನ್ನತ ಪ್ರಾಥಮಿಕ ಹಂತದ ನಂತರ ವಿಶೇಷ ಮುಲ್ಕಿ ಪರೀಕ್ಷೆ ನಡೆಸುವ ವ್ಯವಸ್ಥೆ ಪ್ರಾರಂಭಿಸಲಾಯಿತು. ಇದೇ ವರ್ಷ ಗುಲಬರ್ಗಾ ಜಿಲ್ಲೆಯಲ್ಲಿ ಶಿಕ್ಷಕರ ತರಬೇತಿ ಒದಗಿಸುವ ನಾರ್ಮಲ್ ಶಾಲೆ ಪ್ರಾರಂಭವಾಯಿತು. ಕ್ರಿ.ಶ. ೧೯೧೦ರಲ್ಲಿ ಮೆಟ್ರಿಕ್ಯೂಲೇಶನ್ (S.S.L.C.) ಬೋರ್ಡ್ ನಿಜಾಂ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಎಸ್.ಎಸ್.ಎಲ್.ಸಿ.ಯ ಪರೀಕ್ಷೆಗಳು ಉರ್ದು ಮಾಧ್ಯಮದಲ್ಲೇ ನಡೆಯುತ್ತಿದ್ದವು.

ಕ್ರಿ.ಶ. ೧೯೫೨-೫೩ರಲ್ಲಿ ಉಚಿತ ಕಡ್ಡಾಯ ಶಿಕ್ಷಣವು ಹೈದ್ರಾಬಾದ್ ಕಡ್ಡಾಯ ಶಿಕ್ಷಣ ಕಾಯ್ದೆ-ಕ್ರಿ.ಶ. ೧೯೫೨ರ ಅನ್ವಯ ಇಲ್ಲಿ ಜಾರಿಗೊಂಡಿತು. ಅದರ ಫಲವಾಗಿ ಹೈದ್ರಾಬಾದ್ ಸಂಸ್ಥಾನದ

ಆಡಳಿತದಲ್ಲಿ ೩ ಬಗೆಯ ಮಾಧ್ಯಮಿಕ ಶಾಲೆಗಳು ಪ್ರಾರಂಭಗೊಂಡವು. ಅವು - ೧. ಇಂಗ್ಲೀಷ್ ಮಾಧ್ಯಮ ಶಾಲೆಗಳು: ಇವು ವಿದ್ಯಾರ್ಥಿಗಳನ್ನು ಎಸ್.ಎಸ್.ಎಲ್.ಸಿ. ಅಥವಾ ಲೋಕಲ್ ಕೆಂಬ್ರಿಜ್ ಪರೀಕ್ಷೆಗಳಿಗೆ ತಯಾರುಗೊಳಿಸುತ್ತಿದ್ದವು. ೨. ಉಸ್ಮಾನಿಯಾ ಮಾಧ್ಯಮಿಕ ಶಾಲೆಗಳು : ಇವು ವಿದ್ಯಾರ್ಥಿಗಳನ್ನು ಉಸ್ಮಾನಿಯಾ ಮೆಟ್ರಿಕ್ಯೂಲೇಷನ್ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತಯಾರಿಸುತ್ತಿದ್ದವು. ೩. ಸಮ್ಮಿಶ್ರ ಶಾಲೆಗಳು : ಇವು ಮೇಲಿನ ಎರಡೂ ಬಗೆಯ ಪರೀಕ್ಷೆಗಳಿಗೆ ತಮಗೆ ಬೇಕಾದ ವಿದ್ಯಾರ್ಥಿಗಳನ್ನು ತಯಾರಿಸುತ್ತಿತ್ತು.

**೪.೨.೨. ಭಾಷಾವಾರು ರಾಜ್ಯಗಳ ಸಂದರ್ಭದಲ್ಲಿ ಕಂಡುಬಂದ ಶೈಕ್ಷಣಿಕ ಅಸಮಾನತೆಗಳು :**

ಕ್ರಿ.ಶ. ೧೯೫೬ರಲ್ಲಿ ರಾಜ್ಯಗಳ ಪುನರ್‌ರಚನೆಯಾಗಿ ಈ ಭಾಗದ ಶೈಕ್ಷಣಿಕ ಆಡಳಿತ ಮಂಡಳಿ, ಮೈಸೂರು ಕರ್ನಾಟಕ ಶಿಕ್ಷಣ ಇಲಾಖೆಯ ನಿಯಂತ್ರಣಕ್ಕೊಳಗಾಯಿತು. ಹೈದರಾಬಾದ ನಿಜಾಂನ ಸಂಸ್ಥಾನದಿಂದ ಕರ್ನಾಟಕಕ್ಕೆ ಸೇರುವ ಸಂದರ್ಭದಲ್ಲಿ ಇಲ್ಲಿನ ಶಾಲೆಗಳ ಅಂಕಿ-ಸಂಖ್ಯೆಗಳನ್ನು ಗಮನಿಸುವುದಾದರೇ,

| | |
|---|---|
| ೧. ಪ್ರಾಥಮಿಕ ಶಾಲೆಗಳು ಹುಡುಗರಿಗೆ (೧ನೇ ತರಗತಿಯಿಂದ ೫ನೇ ತರಗತಿಯವರೆಗೆ) | ೯೦೬ |
| ೨. ಪ್ರಾಥಮಿಕ ಶಾಲೆಗಳು ಹುಡುಗಿಯರಿಗೆ (೧ನೇ ತರಗತಿಯಿಂದ ೫ನೇ ತರಗತಿಯವರೆಗೆ) | ೫೧ |
| ೩. ಉನ್ನತ ಪ್ರಾಥಮಿಕ ಶಾಲೆಗಳು (೧ನೇ ತರಗತಿಯಿಂದ ೭ನೇ ತರಗತಿಯವರೆಗೆ) | ೦೨ |
| ಒಟ್ಟು = | ೯೫೯ |

ಕ್ರಿ.ಶ. ೧೯೫೬ರಲ್ಲಿ ಕೇವಲ ೯೫೯ ಶಾಲೆಗಳು ಈ ಭಾಗದಲ್ಲಿ ತೆರೆಯಲ್ಪಟ್ಟಿದ್ದವು. ಉಳಿದ ಹಳೇ ಮೈಸೂರು ಪ್ರಾಂತ್ಯ, ಬಾಂಬೆ-ಕರ್ನಾಟಕ, ಬ್ರಿಟಿಷ್ ಆಡಳಿತ ಪ್ರೆಸಿಡೆನ್ಸಿಗಳಲ್ಲಿ ಈ ಅಂಕಿ-ಅಂಶಗಳು ಗಣನೀಯ ಪ್ರಮಾಣದಲ್ಲಿ ಹೆಚ್ಚಾಗಿದ್ದವು.

**೧೯೫೬ರಲ್ಲಿನ ಮಾಧ್ಯಮಿಕ ಶಾಲೆಗಳ ಸ್ವರೂಪ**

ಕೋಷ್ಟಕ-೧

| ಶಾಲೆಗಳ ಸ್ವರೂಪ | ಶಾಲೆಗಳ ಸಂಖ್ಯೆ | ವಿದ್ಯಾರ್ಥಿಗಳ ಸಂಖ್ಯೆ |
|---|---|---|
| ೧. ಸರ್ಕಾರಿ ಶಾಲೆಗಳು | ೨೨ | ೧೦,೯೮೪ |
| ೨. ಅನುದಾನಿತ ಶಾಲೆಗಳು | ೨೭ | ೪,೯೪೯ |
| ೩. ಹುಡುಗಿಯರ ಪ್ರತ್ಯೇಕ ಶಾಲೆಗಳು | ೦೪ | ೧,೪೫೭ |
| **ಒಟ್ಟು** | ೫೩ | ೧೭,೩೯೦ |

**ಆಧಾರ :** ಕಲಬುರ್ಗಿ ಜಿಲ್ಲಾ ದರ್ಶನ, ನೀಲಮ್ಮ ಪತಂಗಿ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫, ಪು.೧೧

ಕ್ರಿ.ಶ. ೧೯೬೫ರ ವೇಳೆಗೆ ಈ ಭಾಗದಲ್ಲಿ ಕೇವಲ ೫ ಸರ್ಕಾರಿ ಹೈಯರ್ ಸೆಕೆಂಡರಿ ಶಾಲೆಗಳು ಪ್ರಾರಂಭವಾಗಿದ್ದವು. ಅವು ಕಲಬುರ್ಗಿ, ಯಾದಗೀರ, ಆಳಂದ, ಕಮಲಾಪುರ, ಶಹಾಪುರಗಳಲ್ಲಿದ್ದವು.

ಈ ಐದು ಶಾಲೆಗಳಲ್ಲಿ ಕನ್ನಡ, ಉರ್ದು, ಮರಾಠಿ ಭಾಷೆಗಳಿಗೆ ಮೊದಲ ಬಾರಿಗೆ ಪ್ರಾಧಾನ್ಯತೆ ನೀಡಲಾಯಿತು. ಕ್ರಿ.ಶ. ೧೯೬೫ರ ವೇಳೆಗೆ ಈ ಭಾಗದಲ್ಲಿ ಮಾಧ್ಯಮಿಕ ಶಾಲೆಗಳ ಸಂಖ್ಯೆಯಲ್ಲಿ ಸ್ವಲ್ಪ ಹೆಚ್ಚಳ ಕಂಡು ಬಂದಿತು.

ಈ ಭಾಗದ ಶೈಕ್ಷಣಿಕ ಸ್ಥಿತಿಗತಿಗಳನ್ನು ಮೈಸೂರು ಪ್ರಾಂತ್ಯ, ಬ್ರಿಟಿಷ್ ಪ್ರೆಸಿಡೆನ್ಸಿ, ಬಾಂಬೆ-ಕರ್ನಾಟಕಗಳಿಗೆ ಹೋಲಿಸಿ ನೋಡಿದರೆ ಪ್ರಾರಂಭದಿಂದಲೂ ಈ ಅಂಕಿ-ಅಂಶಗಳು ಬಹಳಷ್ಟು ಅಗಾಧ ಪ್ರಮಾಣದಲ್ಲಿ ಗಣನೀಯ ವ್ಯತ್ಯಾಸ ತೋರಿಸುತ್ತವೆ.

ಮೈಸೂರು ಪ್ರಾಂತ್ಯದಲ್ಲಿ ಕ್ರಿ.ಶ. ೧೮೩೩ರಷ್ಟು ಹಿಂದೆಯೇ ಆಧುನಿಕ ಶಿಕ್ಷಣ ವ್ಯವಸ್ಥೆ ಮೈಸೂರಿನಲ್ಲಿ ಸ್ಥಾಪನೆಗೊಂಡಿತ್ತು. ಇದರಿಂದ ಬೆಂಗಳೂರು, ತುಮಕೂರು, ಹಾಸನ ಮತ್ತು ಶಿವಮೊಗ್ಗದಲ್ಲಿ ಆಂಗ್ಲ ಶಾಲೆಗಳನ್ನು ಆರಂಭಿಸಲಾಯಿತು. ಹೆಣ್ಣು ಮಕ್ಕಳಿಗೆ ಶಿಕ್ಷಣಕ್ಕಾಗಿ ಕ್ರಿ.ಶ. ೧೮೪೦ರಲ್ಲಿ ಬೆಂಗಳೂರು ನಗರದಲ್ಲಿ ಲಂಡನ್ ಮಿಷನ್ ಬಾಲಕಿಯರಿಗಾಗಿ ಪ್ರಥಮ ಶಾಲೆಯನ್ನು ತೆರೆಯಿತು. ಕ್ರಿ.ಶ. ೧೮೮೧ರಲ್ಲಿ ಪ್ರಾರಂಭವಾದ ಸರ್ಕಾರಿ ಬಾಲಕಿಯರ ಶಾಲೆ ಮೈಸೂರು ಮಹಾರಾಜರ ಬೆಂಬಲದಿಂದ ಪ್ರಾರಂಭವಾಯಿತು. ಕ್ರಿ.ಶ. ೧೯೧೬ರಲ್ಲಿ ಮೈಸೂರು ವಿಶ್ವವಿದ್ಯಾಲಯ ಸ್ಥಾಪನೆಗೊಂಡು ಉನ್ನತ ಶಿಕ್ಷಣಕ್ಕೆ ದಾರಿಯಾಯಿತು. ಮೈಸೂರು ಪ್ರಾಂತ್ಯದಲ್ಲಿ ಶಿಕ್ಷಣರಂಗ ಪ್ರಬಲಗೊಳ್ಳಲು ಮೈಸೂರು ಅರಸರ ರಾಜಾಶ್ರಯ ಪ್ರಮುಖವಾಯಿತು. ಬಾಂಬೆ-ಕರ್ನಾಟಕದ ಬೆಳಗಾಂವ, ಧಾರವಾಡದ ಕಡೆ ಬ್ರಿಟಿಷರು ಮತ್ತು ಮಠಮಾನ್ಯಗಳು ಈ ಕೆಲಸವನ್ನು ಮಾಡಿದವು. ಇದರಿಂದಾಗಿ ಕ್ರಿ.ಶ. ೧೮೨೬ರಲ್ಲಿಯೇ ಆಧುನಿಕ ಶಿಕ್ಷಣ ವ್ಯವಸ್ಥೆಯನ್ನು ಬೆಳಗಾವಿಯಲ್ಲಿ ಸ್ಥಾಪಿಸಲಾಯಿತು. ಕ್ರಿ.ಶ. ೧೮೩೬ರ ನಂತರ ಕನ್ನಡ ಶಾಲೆಗಳನ್ನು ಆರಂಭಿಸಲಾಯಿತು. ಅದರಂತೆ ಬೆಳಗಾವಿಯಲ್ಲಿ ಕ್ರಿ.ಶ. ೧೮೩೬ರ ನಂತರದಲ್ಲಿ ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ ಮತ್ತು ಖಾಸಗಿ ಸಂಸ್ಥೆಗಳು ಶಿಕ್ಷಣವನ್ನು ಪ್ರಚುರಪಡಿಸುವತ್ತ ಮಹತ್ತರ ಪಾತ್ರ ವಹಿಸಿದವು.

೧೯೫೬ರ ಹೊತ್ತಿಗೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನ ಭಿನ್ನ ರೀತಿಯಲ್ಲಿ ಪ್ರೌಢಶಾಲೆಗಳ ಸಂಖ್ಯೆಗಳಲ್ಲಿ ಕಂಡುಬಂದ ಗಣನೀಯ ವ್ಯತ್ಯಾಸಗಳು

ಕೋಷ್ಟಕ-೨

| ಪ್ರದೇಶಗಳು | ವರ್ಷ | ಶಾಲೆಗಳ ಸಂಖ್ಯೆ |
|---|---|---|
| ಮೈಸೂರು ಕರ್ನಾಟಕ | ಕ್ರಿ.ಶ. ೧೮೭೧ | ೧೧ |
| | ಕ್ರಿ.ಶ. ೧೯೧೧ | ೧೬ |
| ಬಾಂಬೆ ಕರ್ನಾಟಕ | ಕ್ರಿ.ಶ. ೧೯೨೧ | ೧೯ |
| | ಕ್ರಿ.ಶ. ೧೯೫೬ | ೧೨೮ |

| | | |
|---|---|---|
| ಬ್ರಿಟಿಷ್ ಪ್ರೆಸಿಡೆನ್ಸಿ | ಕ್ರಿ.ಶ. ೧೯೩೧ | ೧೭ |
| | ಕ್ರಿ.ಶ. ೧೯೪೬ | ೨೯ |
| | ಕ್ರಿ.ಶ. ೧೯೫೧ | ೬೪ |
| ಹೈದರಾಬಾದ್-ಕರ್ನಾಟಕ | ಕ್ರಿ.ಶ. ೧೯೫೬ | ೧೯ |

ಆಧಾರ : ವಿವಿಧ ಕೃತಿಗಳಿಂದ ಸಂಗ್ರಹಿಸಿದ ಮಾಹಿತಿ.

ಪ್ರೌಢಶಿಕ್ಷಣವನ್ನು ಮೈಸೂರು ಪ್ರದೇಶದಲ್ಲಿ ಸರಕಾರದ ಅನುದಾನದಲ್ಲಿ ಕ್ರಿ.ಶ. ೧೮೫೮ರಲ್ಲಿ ಬೆಂಗಳೂರಿನಲ್ಲಿ ಆರಂಭಿಸಲಾಗಿತ್ತು. ಕ್ರಿ.ಶ. ೧೮೭೧ರ ವೇಳೆಗೆ ೧೧ ಪ್ರೌಢಶಾಲೆಗಳು ಇಲ್ಲಿದ್ದವು. ಕ್ರಿ.ಶ. ೧೯೧೧ರ ವೇಳೆಗೆ ಇವುಗಳ ಸಂಖ್ಯೆ ೧೬ಕ್ಕೇರಿತ್ತು. ಕ್ರಿ.ಶ. ೧೯೩೦-೩೧ರವರೆಗೆ ಈ ಶಾಲೆಗಳಲ್ಲಿ ಇಂಗ್ಲೀಷ್ ಶಿಕ್ಷಣ ಮಾಧ್ಯಮವಾಗಿದ್ದು, ನಂತರ ಕನ್ನಡವನ್ನು ಪರಿಚಯಿಸಲಾಯಿತು. ಬೆಳಗಾವಿ ಪ್ರಾಂತ್ಯದಲ್ಲಿ ಕ್ರಿ.ಶ. ೧೯೨೧-೨೨ರ ವೇಳೆಗೆ ಈ ಜಿಲ್ಲೆಯಲ್ಲಿ ೧೯ ಪ್ರೌಢಶಾಲೆಗಳಿದ್ದು, ಕ್ರಿ.ಶ. ೧೯೫೬ರ ಹೊತ್ತಿಗೆ ಇವುಗಳ ಸಂಖ್ಯೆ ೧೨೮ಕ್ಕೆ ಏರಿಕೆಯಾಗಿತ್ತು. ಮದ್ರಾಸ್ ಪ್ರಾಂತ್ಯದಲ್ಲಿ ಕ್ರಿ.ಶ. ೧೯೩೧ರ ವೇಳೆಗೆ ೧೭ ಪ್ರೌಢಶಾಲೆ ಗಳಿದ್ದು ಕ್ರಿ.ಶ. ೧೯೪೬-೪೭ರಲ್ಲಿ ೨೯ಕ್ಕೂ, ಕ್ರಿ.ಶ. ೧೯೫೧ರಲ್ಲಿ ೬೪ಕ್ಕೂ ಇವುಗಳ ಸಂಖ್ಯೆ ಏರಿಕೆಯಾಗಿತ್ತು. ಇನ್ನು ನಿಜಾಂ ಅರಸರ ಆಡಳಿತದ ಭಾಗದಲ್ಲಿ ಮೊಟ್ಟಮೊದಲ ಪ್ರೌಢಶಾಲೆ ಕ್ರಿ.ಶ. ೧೮೮೫-೮೬ರಲ್ಲಿ ಪ್ರಾರಂಭವಾಯಿತು. ಕ್ರಿ.ಶ. ೧೯೫೬ರ ವೇಳೆಗೆ ಇಡೀ ಹೈದರಾಬಾದ್-ಕರ್ನಾಟಕದಲ್ಲಿ ಕೇವಲ ೧೯ ಪ್ರೌಢಶಾಲೆಗಳಿದ್ದುದ್ದನ್ನು ಗಮನಿಸಬೇಕಾದದ್ದು.

ಇನ್ನು ಬಾಲಕಿಯರ ಶೈಕಣಿಕತೆಯನ್ನು ಗಮನಿಸಿದಾಗ ಮೈಸೂರು ಪ್ರದೇಶದಲ್ಲಿ ಲಂಡನ್ ಮಿಶನ್ ಕ್ರಿ.ಶ. ೧೮೪೦ರಲ್ಲಿ ಬಾಲಕಿಯರಿಗಾಗಿ ಔಪಚಾರಿಕ ಶಿಕ್ಷಣವನ್ನು ಆರಂಭಿಸಿ, ಬೆಂಗಳೂರಿನಲ್ಲಿ ಬಾಲಕಿಯರಿ ಗಾಗಿ ಕನ್ನಡ ಶಾಲೆಯನ್ನು ತೆರೆಯಿತು. ಹೀಗಾಗಿ ಕ್ರಿ.ಶ. ೧೯೧೮ರ ವೇಳೆಗೆ ಈ ಶಾಲೆಯಲ್ಲಿನ ಬಾಲಕಿಯರ ಸಂಖ್ಯೆಯು ೪.೮% ರಷ್ಟಾಗಿತ್ತು. ಬೆಳಗಾವಿ ಪ್ರದೇಶದಲ್ಲಿ ಲಂಡನ್ ಮಿಶನರಿ ಸಂಘವು ಬಾಲಕಿಯರಿಗಾಗಿ ಕೆಲವು ಶಾಲೆಗಳನ್ನು ಆರಂಭಿಸಿತು. ಕ್ರಿ.ಶ. ೧೮೮೧ರ ವೇಳೆಗೆ ಬೆಳಗಾವಿ ವಿಭಾಗದಲ್ಲಿ ಬಾಲಕಿಯರ ೪೭ ಶಾಲೆಗಳಿದ್ದವು. ಮತ್ತು ಕ್ರಿ.ಶ. ೧೯೪೭ರ ವೇಳೆಗೆ ೪೦೨ ಪ್ರಾಥಮಿಕ ಶಾಲೆಗಳು ಬಾಲಕಿಯರಿಗಾಗಿ ಸ್ಥಾಪನೆಗೊಂಡಿದ್ದವು. ಮದ್ರಾಸ್ ಪ್ರದೇಶದಲ್ಲಿ ಲಂಡನ್ ಮಿಶನ್ ಕ್ರಿ.ಶ. ೧೮೩೩ರಲ್ಲಿ ಬಾಲಕಿಯರಿಗಾಗಿ ಪ್ರಥಮ ಶಾಲೆಯನ್ನು ಆರಂಭಿಸಿದ ಹೆಗ್ಗಳಿಕೆಯನ್ನು ಗಳಿಸಿತು. ದ.ಕನ್ನಡ ಜಿಲ್ಲೆಯಲ್ಲಿ ಮಹಿಳಾ ಶಿಕ್ಷಣವು ಶೀಘ್ರವೇ ಅತ್ಯಂತ ಜನಪ್ರಿಯಗೊಂಡು, ಕ್ರಿ.ಶ. ೧೮೮೧ರ ವೇಳೆಗೆ ಈ ಜಿಲ್ಲೆಗಳಲ್ಲಿ ಬಾಲಕಿಯರಿಗಾಗಿ ೭ ಶಾಲೆಗಳಿದ್ದವು. ಕ್ರಿ.ಶ. ೧೯೩೧-೩೨ರ ವೇಳೆಗೆ ಇಲ್ಲಿ ೧೩೪ ಪ್ರಾಥಮಿಕ ಮತ್ತು ೭ ಪ್ರೌಢಶಾಲೆಗಳಿದ್ದವು. ಮೈಸೂರು ಅರಸರ ಮತ್ತು ಲಂಡನ್ ಮಿಷನರಿಯ ಪ್ರಭಾವ ಹೈದರಾಬಾದ್ -ಕರ್ನಾಟಕ ಭಾಗದ ಮೇಲೆ ಆಗದೇ ಬಾಲಕಿಯರು ಶಿಕ್ಷಣದಿಂದ ವಂಚಿತರಾಗಿದ್ದರು. ಕ್ರಿ.ಶ. ೧೯೫೬ರ ನಂತರ ಈ ಭಾಗದಲ್ಲಿ ಬಾಲಕಿಯರಿಗಾಗಿ ಸರ್ಕಾರಿ ಶಾಲೆಗಳು ತೆರೆಯಲ್ಪಟ್ಟವು. ಆಗ ಅವುಗಳ ಸಂಖ್ಯೆ ಕೇವಲ ೫೧

(೧-೫%)ರಷ್ಟಾಗಿತ್ತು. ಮೈಸೂರು ಪ್ರಾಂತ್ಯದಲ್ಲಿ ಕ್ರಿ.ಶ. ೧೮೪೦ರಲ್ಲಿ, ಬೆಳಗಾವಿಯಲ್ಲಿ ಕ್ರಿ.ಶ. ೧೮೮೧ರಲ್ಲಿ, ಮದ್ರಾಸ್ ಪ್ರಾಂತ್ಯದಲ್ಲಿ ಕ್ರಿ.ಶ. ೧೮೩೩ರಲ್ಲಿ ಬಾಲಕಿಯರ ಶಾಲೆಗಳು ಪ್ರಾರಂಭಗೊಂಡರೆ ನಿಜಾಂ ಆಡಳಿತ ರಾಜ್ಯದಲ್ಲಿ ಕ್ರಿ.ಶ. ೧೯೫೬ರ ವೇಳೆಗೆ ಬಾಲಕಿಯರ ಶಾಲೆಗಳು ಪ್ರಾರಂಭಗೊಂಡವು.

ಈ ಎಲ್ಲ ಅಂಶಗಳಿಂದಾಗಿ ಕ್ರಿ.ಶ. ೧೯೫೫-೫೬ರಲ್ಲಿ ಸಾಕ್ಷರತೆ ಪ್ರಮಾಣ ಈ ರೀತಿಯಲ್ಲಿತ್ತು.

೧. ಕೊಡಗು ಕರ್ನಾಟಕ - ಶೇ. ೨೭.೨%

೨. ಮದ್ರಾಸ್ ಕರ್ನಾಟಕ - ಶೇ. ೨೩.೩%

೩. ಮುಂಬೈ ಕರ್ನಾಟಕ - ಶೇ. ೨೨.೩%

೪. ಮೈಸೂರು ಕರ್ನಾಟಕ - ಶೇ. ೨೦.೬%

ಹಾಗೂ **೫. ಹೈದ್ರಾಬಾದ್ ಕರ್ನಾಟಕ - ಶೇ. ೮.೫%**

ಉಳಿದೆಲ್ಲ ಕಡೆ ಮಹಿಳಾ ಸಾಕ್ಷರತೆ ಶೇ. ೧೮-೧೯ರಷ್ಟಿದ್ದರೆ ಇಲ್ಲಿನ ಮಹಿಳಾ ಸಾಕ್ಷರತೆ ಕೇವಲ ಶೇ. ೭ರಷ್ಟಿತ್ತು. ಈ ರೀತಿಯ ಶೈಕ್ಷಣಿಕ ಹಿಂದುಳಿಯುವಿಕೆ ಇವತ್ತಿಗೂ ಹಾಗೆಯೇ ಮುಂದುವರೆಯುತ್ತಿದೆ. ಅಂತೆಯೆ ಕರ್ನಾಟಕದಲ್ಲಿನ ಸಾಕ್ಷರತೆಯಲ್ಲಿ ಅತ್ಯಂತ ಹಿಂದುಳಿದ ಪ್ರದೇಶ ಗುಲಬರ್ಗಾ, ಇದರಲ್ಲಿಯೂ ಈ ಕರ್ನಾಟಕ-ಆಂಧ್ರ ಗಡಿಭಾಗ. ಸರ್ಕಾರ ಜಾರಿಗೊಳಿಸಿದ ಶೈಕ್ಷಣಿಕ ಯೋಜನೆಗಳು ಕೇವಲ ಕಡತದಲ್ಲಿ ಉಳಿದಿವೆ. ಅವುಗಳನ್ನು ಜಾರಿಗೊಳಿಸಲು ಹೋದಾಗ ಒಂದರ ಮೇಲೊಂದರಂತೆ ತಾಂತ್ರಿಕ ಕಾರಣಗಳು ಕಾಣಿಸಿಕೊಳ್ಳುತ್ತವೆ. ಪ್ರಸ್ತುತ ಈ ಅಧ್ಯಯನದ ವ್ಯಾಪ್ತಿಗೆ ಒಟ್ಟು ಸುಮಾರು ೧೮೨ ಸರ್ಕಾರಿ ಶಾಲೆಗಳು ಬರುತ್ತವೆ. ಇವುಗಳಲ್ಲಿ ಕಿರಿಯ ಮಾಧ್ಯಮಿಕ ಶಾಲೆಗಳು ೧೦೫, ಮಾಧ್ಯಮಿಕ ಶಾಲೆಗಳು ೩೨, ಹಿರಿಯ ಮಾಧ್ಯಮಿಕ ಶಾಲೆಗಳು ೪೫. ಈ ಒಟ್ಟು ಶಾಲೆಗಳಲ್ಲಿ ತೆಲುಗು ಮತ್ತು ಉರ್ದು ಮಾಧ್ಯಮದ ಶಾಲೆಗಳು ಸಹ ಸೇರಿಕೊಂಡಿವೆ.

**೪.೨.೩. ಪ್ರಸ್ತುತ ಸಂದರ್ಭದಲ್ಲಿನ ಶೈಕ್ಷಣಿಕತೆ :**

ಕರ್ನಾಟಕದ ಗಡಿಯೊಳಗಿನ ಕನ್ನಡ ಶಾಲೆಗಳ ಸ್ಥಿತಿಗತಿ ತೀರ ಹದಗೆಟ್ಟು ಹೋಗಿವೆ. ಮುಖ್ಯವಾಗಿ ಇಲ್ಲಿನ ಶಾಲೆಗಳಲ್ಲಿ ಶೈಕ್ಷಣಿಕ ವಾತಾವರಣಗಳು ಕಂಡುಬರುತ್ತಿಲ್ಲ. ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳಿಗೆ ಬೋಧಿಸುವ ಶಿಕ್ಷಕರು, ಮಕ್ಕಳ ಬೌದ್ಧಿಕ ಮಟ್ಟಕ್ಕೆ ಸರಿಹೊಂದುವಂತೆ ಬೋಧಿಸುತ್ತಿಲ್ಲ. ಪ್ರಾಥಮಿಕ (೧-೪) ಮಕ್ಕಳಿಗೆ ಮುಖ್ಯವಾಗಿ ಬೇಕಾಗಿರುವುದು ಅಕ್ಷರ ಜ್ಞಾನಕ್ಕಿಂತ ನಾವು ಏನು ಹೇಳುತ್ತಿದ್ದೇವೆ ಎಂಬುದು ಮಕ್ಕಳು ನಾವು ಹೇಳುವುದನ್ನು ಹೇಗೆ ಅರ್ಥಮಾಡಿಕೊಳ್ಳುತ್ತಿದ್ದಾರೆ ಎಂಬ ಕನಿಷ್ಠ ಪ್ರೌಢತೆಯನ್ನು ಇಲ್ಲಿನ ಶಿಕ್ಷಕರು ತಿಳಿದುಕೊಳ್ಳುತ್ತಿಲ್ಲ. ಇಂತಹ ಸಮಸ್ಯೆಗಳ ಜೊತೆಗೆ ವಿದ್ಯಾರ್ಥಿಗಳ ಸಂಖ್ಯೆ ಶಿಕ್ಷಕರ ಸಂಖ್ಯೆಗೆ ಸರಿಯಾದ ಅನುಪಾತದಲ್ಲಿ ಕಂಡುಬರುವುದಿಲ್ಲ.

ವಿದ್ಯಾರ್ಥಿ ಮತ್ತು ಶಿಕ್ಷಕರ ಸಂಖ್ಯೆಗೆ ಅನುಗುಣವಾಗಿ ಹಿಂದುಳಿದಿರುವಿಕೆಯ ಒಂದು ನೋಟ

ಕೋಷ್ಟಕ-೩

| ಚಿಂಚೋಳಿ, ಸೇಡಂ, ಯಾದಗೀರ ಗಡಿಗ್ರಾಮಗಳಿಗೆ ಅನ್ವಯಿಸಿ | ಸಂವಾದಿಯಾಗಿ ಅಭಿವೃದ್ಧಿ ಹೊಂದಿದ ತಾಲೂಕು | ಹಿಂದುಳಿದ ತಾಲೂಕು | ಅತೀ ಹಿಂದುಳಿದ ತಾಲೂಕು | ಅತ್ಯಂತ ತೀರ ಹಿಂದುಳಿದ ತಾಲೂಕು |
|---|---|---|---|---|
| ವಿದ್ಯಾರ್ಥಿ ಶಿಕ್ಷಕ ದಾಮಾಷಾ ಪ್ರಮಾಣ (೧ ರಿಂದ ೧೦ನೇ ತರಗತಿ) | ___ | ಸೇಡಂ | ___ | ಚಿಂಚೋಳಿ ಯಾದಗೀರ |
| ವಯೋಗುಂಪಿನಲ್ಲಿ ಶಾಲೆಯಿಂದ ಹೊರಗುಳಿದಿರುವ ಮಕ್ಕಳ ಪ್ರಮಾಣ | ___ | ___ | ___ | ಚಿಂಚೋಳಿ ಸೇಡಂ ಯಾದಗೀರ |
| ಸರ್ಕಾರಿ ಮತ್ತು ಅನುದಾನಿತ ಪದವಿ ಕಾಲೇಜುಗಳಲ್ಲಿ ಪ್ರತಿ ೧ ಲಕ್ಷ ಜನಸಂಖ್ಯೆಗೆ ದಾಖಲಾದ ವಿದ್ಯಾರ್ಥಿಗಳ ಪ್ರಮಾಣಕ್ಕೆ ಅನುಗುಣವಾಗಿ | ___ | ___ | ಸೇಡಂ | ಚಿಂಚೋಳಿ ಯಾದಗೀರ |

**ಆಧಾರ :** ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ.

ಇಡೀ ಈ ಗಡಿಭಾಗದಲ್ಲಿನ ೧ ರಿಂದ ೧೪ನೇ ವಯಸ್ಸಿನ ವಿದ್ಯಾರ್ಥಿಗಳ ಸಂಖ್ಯೆ ೨೪,೦೮೦ ಇದ್ದು, ಈ ಸಂಖ್ಯೆಗೆ ೫೩೩ ಶಿಕ್ಷಕರ ಸಂಖ್ಯೆ ಇದೆ. ಸರ್ಕಾರಿ ನಿಯಮದ ಪ್ರಕಾರ ೪೦ ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕನಂತೆ ಲೆಕ್ಕ ಹಿಡಿದರೆ ಈ ಮೇಲಿನ ಸಂಖ್ಯೆಗಳಿಗನುಗುಣವಾಗಿ ಒಟ್ಟು ೬೦೨ ಶಿಕ್ಷಕರು ಇರಬೇಕಾಗಿತ್ತು. ಇಲ್ಲಿ ಇರುವುದು ೫೩೩ ಇನ್ನು ೭೦ ಶಿಕ್ಷಕರ ಅಭಾವ ಎದ್ದು ಕಾಣುತ್ತದೆ. ಹೀಗಾಗಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಶಿಕ್ಷಕರ ಸಂಖ್ಯೆ ಇಲ್ಲದೇ ಇರುವುದು ಇಲ್ಲಿನ ಕಲಿಕೆ ಹಿಂದುಳಿಯುವಿಕೆಯ ಕಾರಣಕ್ಕೆ ಪುಷ್ಠಿ ನೀಡುತ್ತದೆ. ಇದಕ್ಕೆ ಆಂತರಿಕ ಮತ್ತು ಬಾಹ್ಯ ಕಾರಣಗಳನ್ನು ಕೊಡಬಹುದು. ಆಂತರಿಕ ಕಾರಣಗಳಲ್ಲಿ ನೇರವಾಗಿ ವಿದ್ಯಾರ್ಥಿಗಳು ಮತ್ತು ಪೋಷಕರು ಕಂಡುಬಂದರೆ ಬಾಹ್ಯ ಕಾರಣದಲ್ಲಿ ಸರ್ಕಾರದ ಶೈಕ್ಷಣಿಕ ನೀತಿ, ಶೈಕ್ಷಣಿಕ ಸೌಲಭ್ಯಗಳು, ಆರ್ಥಿಕ ಅಂಶಗಳು, ನಿರುದ್ಯೋಗದ ಸಮಸ್ಯೆಗಳು ಪ್ರಮುಖವಾಗುತ್ತವೆ.

ಈ ಭಾಗದಲ್ಲಿನ ವಿದ್ಯಾರ್ಥಿಗಳಿಗೆ ಸೂಕ್ತವಾದ ಶೈಕ್ಷಣಿಕ ಪರಿಸರದ ಕೊರತೆ ಎದ್ದು ಕಾಣುತ್ತದೆ. ಅಂದರೆ ಪೋಷಕರ ಬೇಜವಾಬ್ದಾರಿತನದಿಂದ ಮಕ್ಕಳು ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿಲ್ಲ. ತೀರ ಕಡುಬಡತನದಲ್ಲಿರುವ ಇಲ್ಲಿನ ಕುಟುಂಬಗಳು, ತಮ್ಮ ಆರ್ಥಿಕ ಮೂಲ ಆದಾಯವನ್ನು ಇಲ್ಲಿನ ಕಲ್ಲಿನ ಗಣಿ, ಸಿಮೆಂಟು ಉದ್ಯಮ, ವ್ಯವಸಾಯ ಇಲ್ಲವೇ ಹೈದರಾಬಾದ್‌ಗಳಂತಹ

ನಗರಗಳಲ್ಲಿ ಕೂಲಿ ಕೆಲಸಗಳಿಂದ ಪೂರೈಸಿಕೊಳ್ಳುತ್ತಾರೆ. ಗಣಿಗಳಿಗೆ ಕೆಲಸಕ್ಕೆ ಹೋಗುವ ಪೋಷಕರು ಬೆಳಿಗ್ಗೆಯಿಂದ ಸಂಜೆಯವರೆಗೆ ಅಲ್ಲಿಯೇ ದುಡಿದು ಕಾಲಕಳೆಯುತ್ತಾರೆ. ಇನ್ನೂ ಮಕ್ಕಳಿಗೆ ಶಾಲೆಗೆ ಕಳುಹಿಸುವವರು ಕುಟುಂಬದಲ್ಲಿ ಇಲ್ಲದ್ದರಿಂದ ಮಕ್ಕಳು ಪೋಲಿ ಅಲೆಯುತ್ತಾ ಕಾಲ ಕಳೆಯುತ್ತಾರೆ. ಈ ಮಾಹಿತಿಯನ್ನು ಆಡಕಿ ಗ್ರಾಮದ ೨೮ ವರ್ಷದ ಮೊಗಲಪ್ಪ ನೀಡಿದ್ದು, ಆತನ ಬಾಲ್ಯದಲ್ಲಿಯೂ ಹೀಗೆ ನಡೆದುದುಂಟು. ಈ ಮೊಗಲಪ್ಪ ಈಗ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಮುಂದಾದರೂ ಬಡತನದ ಪರಿಸ್ಥಿತಿ ಆತನನ್ನು ಬಿಡುತ್ತಿಲ್ಲ. ಮಳೆಗಾಲದ ಸಂದರ್ಭದಲ್ಲಿ ಜೋರಾಗಿ ಮಳೆಯಾಗಿ ನೀರು ಕಲ್ಲಿನ ಗಣಿಗಳಿಗೆ ಹರಿದು ಬಂದು ಅಲ್ಲಿನ ಕಲ್ಲಿನ ಗಣಿಯ ಹೊಂಡ ತುಂಬಿಕೊಳ್ಳುತ್ತವೆ. ಮಳೆಗಾಲ ನಿಲ್ಲುವವರೆಗೂ ಕಲ್ಲಿನ ಗಣಿಗಳಲ್ಲಿ ಕೆಲಸ ನಡೆಯುವುದಿಲ್ಲ. ಅನಿವಾರ್ಯವೆಂಬಂತೆ ತಮ್ಮ ಮೂಲಭೂತ ಅವಶ್ಯಕತೆಗಳಿಗಾಗಿ ಹತ್ತಿರದ ಹೈದರಾಬಾದಿಗೆ ಕೂಲಿ ಕೆಲಸಕ್ಕೆ ತಮ್ಮ ಇಡೀ ಕುಟುಂಬದ ಜೊತೆ ಗುಳೆ ಹೋಗುತ್ತಾರೆ. ಇದರಿಂದಾಗಿ ಇವರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ವಿಫಲರಾಗಿದ್ದಾರೆ. ಇದು ಒಂದು ಕಾರಣವಷ್ಟೇ. ಇಂತಹ ಅನೇಕ ಕಾರಣಗಳಿಂದಾಗಿ ಪೋಷಕರು ಮಕ್ಕಳಿಗೆ ಶಿಕ್ಷಣದಿಂದ ದೂರ ಉಳಿಸುತ್ತಿದ್ದಾರೆ.

**ಕರ್ನಾಟಕ-ಆಂಧ್ರ ಗಡಿಭಾಗದ ಹೂಡಾ(ಎಂ.) ವಿದ್ಯಾರ್ಥಿಗಳ ಬರಹದ ಒಂದು ನೋಟ**

ಇನ್ನೂ ಸರ್ಕಾರಗಳು ಸರಿಯಾಗಿ ಈ ಗಡಿಗ್ರಾಮಗಳ ಮೇಲೆ ಗಮನಹರಿಸದೇ ಇರುವುದರಿಂದ ಇಲ್ಲಿನ ಶೈಕ್ಷಣಿಕ ಚಟುವಟಿಕೆಗಳು ತೀರಾ ಕೆಳಮಟ್ಟದಲ್ಲಿವೆ. ಸರ್ಕಾರದ ನಿಯಮದಂತೆ ೪೦ ಮಕ್ಕಳಿಗೆ ಒಬ್ಬ ಶಿಕ್ಷಕರಿಲ್ಲವೇ ಇಲ್ಲ. ಮಕ್ಕಳಿಗೆ ಅನುಗುಣವಾಗಿ ಶಿಕ್ಷಕರ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಕಡಿಮೆ ಇದೆ. ಶಿಕ್ಷಕರ ನೇಮಕಾತಿ ಮುಕ್ತ ರೀತಿಯಲ್ಲಿರುವುದರಿಂದ ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿನ ಉದ್ಯೋಗ ಆಕಾಂಕ್ಷಿಗಳು, ಈ ಭಾಗಗಳಲ್ಲಿ ಹುದ್ದೆ ಪಡೆಯುವ ಪೈಪೋಟಿ ಸ್ಥಳೀಯರಿಂದ ಕಡಿಮೆ ಎಂದು, ಬೇರೆ ಕಡೆಯವರೆಲ್ಲ ಇಲ್ಲಿ ಅರ್ಜಿ ಹಾಕಿ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಹುದ್ದೆ ಪಡೆಯುತ್ತಾರೆ. ಬೇರೆ ಪ್ರದೇಶದವರು ಹುದ್ದೆ ಪಡೆಯುವುದರಲ್ಲಿ ಸ್ಥಳೀಯರಿಗೆ ಏನು ಅಭ್ಯಂತರವಿಲ್ಲ. ಆದರೆ ಶಿಕ್ಷಕರಾಗಿ ಆಯ್ಕೆಯಾದವರು ಸರಿಯಾಗಿ ಈ ಪರಿಸರಕ್ಕೆ ಹೊಂದಿಕೊಳ್ಳದೆ, ಮಕ್ಕಳಿಗೆ ಬೇಕಾದಂತಹ ಶಿಕ್ಷಣವನ್ನು ನೀಡುವಲ್ಲಿ ವಿಫಲರಾಗುತ್ತಿದ್ದಾರೆ. ಅಲ್ಲದೆ ಕೆಲವೇ ಕೆಲವು ವರ್ಷಗಳ ನಂತರ ತಮ್ಮ ಊರುಗಳ ಕಡೆಗೆ ವರ್ಗ ಮಾಡಿಸಿಕೊಂಡು ಹೋಗುತ್ತಾರೆ. ಮತ್ತೇ ಇಲ್ಲಿ ಶಿಕ್ಷಕರ ಕೊರತೆ ಉಂಟಾಗುತ್ತದೆ. ಮತ್ತೆ ಆಯ್ಕೆ ಪ್ರಕ್ರಿಯೆಗಳು ನಡೆಯುತ್ತವೆ. ಮತ್ತೇ ಮೇಲಿನಂತೆ ಪುನರಾವರ್ತಿತವಾಗುತ್ತವೆ. ಉದಾಹರಣೆಗೆ ನೋಡುವುದಾದರೆ ಯಾದಗೀರ ತಾಲೂಕಿನ ಗಡಿಗ್ರಾಮ ಪುಟಪಾಕನಲ್ಲಿ ಕೆಲಸ ಮಾಡುತ್ತಿರುವ ಮಂಡ್ಯ ಜಿಲ್ಲೆಯ ಶಿಕ್ಷಕನನ್ನು ನೋಡಬಹುದು. ಈ ಮಂಡ್ಯ ಜಿಲ್ಲೆಯ ಶಿಕ್ಷಕನು ಅಲ್ಲಿಂದ ಬಂದು ಯಾದಗೀರಿ ಶೈಕ್ಷಣಿಕ ಜಿಲ್ಲೆಯಲ್ಲಿ ಅರ್ಜಿ ಹಾಕಿ ಸಿ.ಇ.ಟಿ. ಪರೀಕ್ಷೆ ಬರೆದು ಪುಟಪಾಕನಲ್ಲಿನ ಶಾಲೆಗೆ ನಿಯುಕ್ತಿ ಯಾದನು. ಪುಟಪಾಕ ಗ್ರಾಮ ಕರ್ನಾಟಕ-ಆಂಧ್ರ ಗಡಿಯಲ್ಲಿರುವುದರಿಂದ ಇಲ್ಲಿನ ವಾತಾವರಣ ಕನ್ನಡಕ್ಕಿಂತ ತೆಲುಗುಮಯವಾಗಿದೆ. ಮಂಡ್ಯದ ಈ ಶಿಕ್ಷಕನಿಗೆ ತೆಲುಗು ಬರುವುದಿಲ್ಲ. ಇಲ್ಲಿನ ಮಕ್ಕಳ ಮತ್ತು ಶಿಕ್ಷಕರ ಮುಖ್ಯ ಸಮಸ್ಯೆ ಎಂದರೆ ಭಾಷಾ ಸಮಸ್ಯೆ. ತೆಲುಗು ಭಾಷೆ ಬಾರದ ಶಿಕ್ಷಕ ತೆಲುಗು ಪರಿಸರದಲ್ಲಿನ ಮಕ್ಕಳಿಗೆ ಪಾಠವನ್ನು ಅರ್ಥ ಮಾಡಿಸಿಕೊಡುವುದಾದರೂ ಹೇಗೆ? ಕನ್ನಡದಲ್ಲಿ ಹೇಳಿದರೆ ಇಲ್ಲಿನ ಮಕ್ಕಳಿಗೆ ಅರ್ಥವಾಗುವುದಿಲ್ಲ. ಶಿಕ್ಷಕನಾದವನು ಮಕ್ಕಳ ಬೌದ್ಧಿಕತೆಯನ್ನು ಅರಿತು ಅವರ ಮಟ್ಟಕ್ಕಿಳಿಯಬೇಕಾಗುತ್ತದೆ. ಆದರೆ ಹೀಗೆ ಹೊರಗಿನಿಂದ ಬಂದ ಶಿಕ್ಷಕರಿಂದ ಆಗುತ್ತಿಲ್ಲ. ಈ ತರಹ ಹೊರಗಿನಿಂದ ಬಂದ ಶಿಕ್ಷಕರು ಇಲ್ಲಿ ಪಾಠ ಮಾಡುವುದೇ ಒಂದು ಕಾಟವೆಂದು ಆದಷ್ಟು ಬೇಗ ತಮ್ಮ ನೆಲೆಗಳಿಗೆ ಹೋಗುವ ತರಾತುರಿಯಲ್ಲಿರುತ್ತಾರೆ. ಹೀಗೆಯೇ ಮುಂದುವರೆದರೆ ಇಂತಹ ಗಡಿಭಾಗದ ವಿದ್ಯಾರ್ಥಿಗಳ ಗತಿ ಏನಾಗಬೇಕು? ಆದ್ದರಿಂದ ಸರ್ಕಾರ ತನ್ನ ನೀತಿಗಳಲ್ಲಿ ಕೆಲವೊಂದು ಮಾರ್ಪಾಡುಗಳನ್ನು ಮಾಡಬೇಕಾಗಿದೆ. ಅದಕ್ಕೆ ಪ್ರಾದೇಶಿಕ ಹಿನ್ನಲೆಯಲ್ಲಿ ಶಿಕ್ಷಕರನ್ನು ನೇಮಿಸುವುದು ಮತ್ತು ಒಂದು ವೇಳೆ ಬೇರೆ ಪ್ರದೇಶದಿಂದ ಬಂದು ಇಲ್ಲಿ ಹುದ್ದೆ ಪಡೆಯುವ ಶಿಕ್ಷಕರಿಗೆ ವರ್ಗಾವಣೆ ಮಾಡುವುದನ್ನು ನಿಲ್ಲಿಸಿ, ನಿವೃತ್ತಿ ಆಗುವವರೆಗೂ ಇಲ್ಲಿಯೇ ವೃತ್ತಿಜೀವನವನ್ನು ನಡೆಸುವಂತೆ ಮಾಡಬೇಕು.

**೪.೨.೫. ದ್ವಿಭಾಷಿಕ ಪರಿಸರದಲ್ಲಿನ ಕನ್ನಡ ಮತ್ತು ತೆಲುಗು ಭಾಷಾಮಾಧ್ಯಮ ಶಾಲೆಗಳ ಸ್ಥಿತಿಗತಿ :**

ಹುಟ್ಟಿನಿಂದ ಬರುವ ಭಾಷೆಯ ಜೊತೆಗೆ ಆ ಪರಿಸರದಲ್ಲಿನ ಭಾಷೆಯನ್ನು ನಾವು ಸಂಪರ್ಕ ಭಾಷೆಯಾಗಿ ಬಳಸಬೇಕಾಗುತ್ತದೆ. ಅಂದರೆ ಮಾತೃಭಾಷೆಯ ಜೊತೆಗೆ ಇನ್ನೊಂದು ಭಾಷೆಯನ್ನು ಬಳಸುವುದು

ಎಂದರ್ಥ. ಹೀಗೆ ಎರಡು ಭಾಷೆಯನ್ನು ಬಳಸುವವರಿಗೆ ದ್ವಿಭಾಷಿಕರೆಂದು, ಮಾತೃಭಾಷೆ ಮತ್ತು ಆ ಪರಿಸರದಲ್ಲಿ ಒಂದಕ್ಕಿಂತ ಹೆಚ್ಚಿನ ಭಾಷೆಗಳನ್ನು ಬಲ್ಲವರಿಗೆ ಬಹುಭಾಷಿಕರೆಂದು ಕರೆಯಬಹುದು. ದ್ವಿಭಾಷಿಕರು ಮಾತೃಭಾಷೆಯ ಜೊತೆಗೆ ಇನ್ನೊಂದು ಭಾಷೆ ಬಲ್ಲವರಾಗಿರುತ್ತಾರೆ. ಅದೇ ರೀತಿ ಬಹುಭಾಷಿಕರು ಮಾತೃಭಾಷೆಯ ಜೊತೆಗೆ ಅಲ್ಲಿನ ಅನೇಕ ಇಲ್ಲವೆ ಎರಡಕ್ಕಿಂತ ಹೆಚ್ಚಿನ ಭಾಷೆ ಬಲ್ಲವರಾಗಿ ರುತ್ತಾರೆ. ಇದರಂತೆ ಈ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿಯೂ ದ್ವಿ-ಭಾಷಿಕ (ಕನ್ನಡ, ತೆಲುಗು) ಮತ್ತು ಬಹುಭಾಷಿಕ(ಕನ್ನಡ, ತೆಲುಗು, ಹಿಂದಿ, ಉರ್ದು)ರನ್ನು ನೋಡಬಹುದು. ಈ ದ್ವಿಭಾಷಿಕ ಮತ್ತು ಬಹುಭಾಷಿಕರು ಹೇಗೆ ಇಲ್ಲಿನ ಪ್ರಾದೇಶಿಕ ಭಾಷೆಯ(ಕನ್ನಡ) ಜೊತೆಗೆ ಶೈಕ್ಷಣಿಕ ಚಟುವಟಿಕೆಗಳನ್ನು ಇಟ್ಟುಕೊಂಡಿರುತ್ತಾರೆ ಎಂಬುದನ್ನೇ ಈ ಮುಂದೆ ನೋಡಲಾಗಿದೆ.

ಕರ್ನಾಟಕದ ಗಡಿಗ್ರಾಮದಲ್ಲಿನ ಜನರ ಮಾತೃಭಾಷೆ ಕನ್ನಡ, ಇದರ ಜೊತೆ ಜೊತೆಗೆ ತೆಲುಗು, ಹಿಂದಿ, ಉರ್ದು ಭಾಷೆಗಳನ್ನು ಇವರು ಬಲ್ಲವರಾಗಿದ್ದಾರೆ. ಇಲ್ಲಿನ ಕನ್ನಡಿಗರ ಮಕ್ಕಳಿಗೆ ಶೈಕ್ಷಣಿಕವಾಗಿ ಮಾತೃಭಾಷೆ ಕನ್ನಡದ ತೊಡಕೇನಾಗುವುದಿಲ್ಲ. ಆದರೆ ಕನ್ನಡ ಶಾಲೆಗಳಲ್ಲಿ ಅನ್ಯ ಭಾಷಿಕರ ಮಕ್ಕಳಿಗೆ ಕಲಿಕೆಯಲ್ಲಿ ಭಾಷೆ ತೊಡಕಾಗುತ್ತಿದೆ.

ಏಕೀಕರಣದ ನಂತರ ಕರ್ನಾಟಕದ ಗಡಿಭಾಗಗಳಲ್ಲಿನ ತೆಲುಗು ಶಾಲೆಗಳನ್ನು ಹಾಗೆಯೇ ಉಳಿಸಿಕೊಂಡು, ಇಂದಿಗೂ ಅವುಗಳನ್ನು ನಡೆಸಿಕೊಂಡು ಬರಲಾಗುತ್ತಿದೆ. ಇದರಂತೆ ಆಂಧ್ರದ ಗಡಿಯಲ್ಲಿ ಕನ್ನಡ ಶಾಲೆಗಳು ಇಂದಿಗೂ ಕಾರ್ಯ ನಿರ್ವಹಿಸುತ್ತಿವೆ. ಆದರೆ ಈ ಗಡಿಗಳಲ್ಲಿನ ಶಾಲೆಗಳನ್ನು ಎರಡು ಸರ್ಕಾರಗಳು ನಿರ್ಲಕ್ಷಿಸುತ್ತಿವೆ. ಕರ್ನಾಟಕದ ಈ ಗಡಿಯಲ್ಲಿನ ತೆಲುಗು ಶಾಲೆಗಳನ್ನು ಆಂಧ್ರ ಸರ್ಕಾರ ಮತ್ತು ಆಂಧ್ರದಲ್ಲಿನ ಕನ್ನಡ ಶಾಲೆಗಳು ನಮಗೆ ಸಂಬಂಧವಿಲ್ಲವೆಂಬಂತೆ ನಮ್ಮ ಸರ್ಕಾರ ನಡೆದು ಕೊಳ್ಳುವುದರಿಂದ ಇಲ್ಲಿನ ಮಕ್ಕಳ ಸ್ಥಿತಿ ಚಿಂತಾಜನಕವಾಗಿದ್ದು, ಇವೆಲ್ಲದರ ನಡುವೆ ಎರಡು ಕಡೆಯ ಪಾಲಕರು ದಿಕ್ಕುತೋಚದೆ ಕಂಗಾಲಾಗುತ್ತಿದ್ದಾರೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಚಂಡರಕಿ, ಮೋತಕಪಲ್ಲಿ, ಮಡೇಪಲ್ಲಿ, ಶಕಲಸಪಲ್ಲಿ, ಗಾಡದಾನ, ವೆಂಕಟಾಪುರ, ಕೃಷ್ಣಾಪುರ, ಮುಧೋಳ, ಮಲ್ಲಾಬಾದ, ಗೋಪನಪಲ್ಲಿ, ಎಲೇರಾಜೋಳ, ಶಾದಿಪುರ, ಕೊಂಚಾವರಂ, ಬುರಗಪಲ್ಲಿ, ಜಟ್ಟುರು, ಕಾಕಲವಾರ, ಪುಟಪಾಕ, ಚಂದಾಪುರ, ಗಾಜರಕೋಟ, ಎಲ್‌ಸತ್ತಿ, ಕೊಲ್ಲುರು, ಮಿರ್ಯಾಣ - ಈ ಕರ್ನಾಟಕದ ಗಡಿಗ್ರಾಮಗಳಲ್ಲಿನ ಸರ್ಕಾರಿ ಶಾಲೆಗಳನ್ನು ಭೇಟಿ ಕೊಟ್ಟು ಅಲ್ಲಿನ ಸ್ಥಿತಿಯನ್ನು ದಾಖಲಿಸಿಕೊಳ್ಳಲಾಯಿತು. ಈ ಎಲ್ಲ ಗಡಿಗ್ರಾಮಗಳ ಶೈಕ್ಷಣಿಕ ಸ್ಥಿತಿಗತಿಗಳು ಸಾಮಾನ್ಯವಾಗಿ ಒಂದೇ ರೀತಿಯಲ್ಲಿರುವುದರಿಂದ ಇವುಗಳಲ್ಲಿನ ಕೆಲವು ಶಾಲೆಗಳ ಸ್ಥಿತಿಗತಿಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಈ ಗಡಿಭಾಗದಲ್ಲಿನ ತೆಲುಗು ಮಕ್ಕಳು ಶಾಲೆಗಳಲ್ಲಿ ಭಾಷಿಕ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

ಕಲ್ಲೂರು ಗಡಿಗ್ರಾಮವಾಗಿದ್ದು, ಇದು ಹಾಸುಗಲ್ಲಿನ ಉದ್ಯಮಕ್ಕೆ ತುಂಬಾ ಪ್ರಸಿದ್ಧವಾಗಿದೆ. ಈ ಊರಿನ ಸುತ್ತಮುತ್ತ ಸುಮಾರು ೧೫-೨೦ ಕಲ್ಲಿನ ಗಣಿಗಳಿವೆ. ಇಲ್ಲಿನ ಜನರಿಗೆ ಮುಖ್ಯವಾಗಿ ಆರ್ಥಿಕ

ಭದ್ರತೆ ಮತ್ತು ಉದ್ಯೋಗ ಈ ಕಲ್ಲಿನ ಗಣಿಗಳೇ ಆಗಿವೆ. ಸ್ಥಳೀಯರಲ್ಲದೆ ಪಕ್ಕದ ಆಂಧ್ರದ ಗ್ರಾಮಗಳಿಂದಲೂ ಅನೇಕ ಜನರು ಈ ಗಣಿಗಳಲ್ಲಿ ದುಡಿಯಲು ಬರುತ್ತಾರೆ. ಹೀಗೆ ದುಡಿಯಲು ಬಂದವರಲ್ಲಿ ಹೆಚ್ಚಿನವರು ಇಲ್ಲಿಯೇ ನೆಲೆಸಿದ್ದಾರೆ. ಇನ್ನುಳಿದವರು ಮಳೆಗಾಲದ ಸಂದರ್ಭದಲ್ಲಿ ಗಣಿಗಳಲ್ಲಿ ಕೆಲಸ ಇರದೆ ಇಲ್ಲದಿರುವುದರಿಂದ ತಮ್ಮ ತಮ್ಮ ಊರುಗಳಿಗೆ ಹೋಗುತ್ತಾರೆ. ಮಳೆಗಾಲ ನಿಂತ ಮೇಲೆ ಮತ್ತೇ ಕೆಲಸ ಹುಡುಕಿಕೊಡು ಇಲ್ಲಿಗೆ ಬರುತ್ತಾರೆ. ಸದ್ಯ ಇಲ್ಲಿಯೆ ನೆಲೆ ನಿಂತಿರುವ ತೆಲುಗರು ಇಂದು ಸಂಪೂರ್ಣವಾಗಿ ಕರ್ನಾಟಕವನ್ನೆ ಅವಲಂಬಿಸಿದ್ದಾರೆ. ಇವರ ಮಕ್ಕಳನ್ನು ಇಲ್ಲಿಯ ತೆಲುಗು-ಕನ್ನಡ ಶಾಲೆಗಳಿಗೆ ಸೇರಿಸಿದ್ದಾರೆ.

ಏಕೀಕರಣದ ನಂತರ ಈ ಗಡಿಭಾಗದಲ್ಲಿ ಅನೇಕ ತೆಲುಗು ಮಾಧ್ಯಮದ ಶಾಲೆಗಳು ಕನ್ನಡ ಶಾಲೆಗಳ ಸಹಕಾರದಿಂದ ಇನ್ನೂ ಕಾರ್ಯ ನಿರ್ವಹಿಸುತ್ತಿವೆ. ಈ ತೆಲುಗು ಶಾಲೆಗಳು ಸಂಪೂರ್ಣವಾಗಿ ಸ್ವತಂತ್ರದಿಂದ ಕಾರ್ಯ ನಿರ್ವಹಿಸುತ್ತಿಲ್ಲ. ಕನ್ನಡ ಶಾಲೆಗಳ ಕಟ್ಟಡಗಳಲ್ಲಿಯೇ ೧ ರಿಂದ ೪ನೆಯ ತರಗತಿಯವರೆಗೆ ಮಾಧ್ಯಮ ಭಾಷೆಯಾಗಿ ತೆಲುಗು ಭಾಷೆಯನ್ನೇ ಕಲಿಸುತ್ತಿದ್ದಾರೆ. ತೆಲುಗು ಭಾಷಿಕರ ಮಕ್ಕಳು ತೆಲುಗು ಭಾಷೆಯಲ್ಲಿಯೆ ಇಲ್ಲಿ ಕಲಿಯುತ್ತಾರೆ. ಮುಂದೆ ೫ನೆಯ ತರಗತಿಗೆ ಬಂದಾಗ ಇವರಿಗೆ ಸಮಸ್ಯೆ ಎದುರಾಗುವುದು. ಏಕೆಂದರೆ ೫ನೇ ತರಗತಿಯಿಂದ ಈ ವಿದ್ಯಾರ್ಥಿಗಳು ತೆಲುಗು ಮಾಧ್ಯಮ ಬಿಟ್ಟು ಕನ್ನಡ ಮಾಧ್ಯಮಕ್ಕೆ ಸೇರಬೇಕಾಗುತ್ತದೆ. ಮಿರ್‍ಯಾಣದಲ್ಲಿನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯನ್ನು ನೋಡಿದಾಗ ಇಲ್ಲಿ ಇನ್ನು ಒಂದು ವಿಚಿತ್ರ ಅಂಶ ಗಮನಕ್ಕೆ ಬರುತ್ತದೆ. ಈ ಶಾಲೆ ಕನ್ನಡ ಮತ್ತು ತೆಲುಗು ಎರಡು ಮಾಧ್ಯಮದ ಶಾಲೆಯಾಗಿದೆ. ಇಲ್ಲಿನ ೧ರಿಂದ ೪ನೆಯ ತರಗತಿಯ ವಿದ್ಯಾರ್ಥಿಗಳ ಸಂಖ್ಯೆ ೧೩೬. ಇದರಲ್ಲಿ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳ ಸಂಖ್ಯೆ ೮೨ ಮತ್ತು ತೆಲುಗು ಮಾಧ್ಯಮದ ವಿದ್ಯಾರ್ಥಿಗಳ ಸಂಖ್ಯೆ ೫೪. ಈ ಕನ್ನಡ ಮತ್ತು ತೆಲುಗು ಮಾಧ್ಯಮದ ಒಟ್ಟು ೧೩೬ ವಿದ್ಯಾರ್ಥಿಗಳಿಗೆ ಕೇವಲ ಒಬ್ಬರೇ ಮಹಿಳಾ ಶಿಕ್ಷಕಿ ಇರುವರು. ಇನ್ನೂ ವಿಚಿತ್ರವೆಂದರೆ ಕನ್ನಡ ಮಾಧ್ಯಮದ ೮೬ ಮತ್ತು ತೆಲುಗು ಮಾಧ್ಯಮದ ೫೪ ವಿದ್ಯಾರ್ಥಿಗಳನ್ನು ಒಂದೇ ಕೋಣೆಯಲ್ಲಿ ಒಬ್ಬ ಶಿಕ್ಷಕರೇ ಪಾಠ ಹೇಳುವುದು. ಈ ಶಿಕ್ಷಕರು ಯಾವಾಗ ಕನ್ನಡದ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಾರೋ, ಯಾವಾಗ ತೆಲುಗು ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಾರೋ ಅವರಿಗೆ ತಿಳಿದದ್ದು. ೪ನೇ ತರಗತಿ ಮುಗಿಸಿದ ತೆಲುಗರ ಮಕ್ಕಳನ್ನು ನೇರವಾಗಿ ಕನ್ನಡ ಮಾಧ್ಯಮದ ೫ನೆಯ ತರಗತಿಗೆ ಶಿಕ್ಷಕರು ದಾಖಲಿಸುತ್ತಾರೆ. ಏಕೆಂದರೆ ಇಲ್ಲಿ ತೆಲುಗು ಮಾಧ್ಯಮ ೪ನೇ ತರಗತಿಯವರೆಗೆ ಮಾತ್ರ ಇದೆ. ಹೀಗೆ ದಿಢೀರನೆ ತೆಲುಗು ಮಾಧ್ಯಮದಿಂದ ೫ನೆಯ ತರಗತಿಯ ಕನ್ನಡ ಮಾಧ್ಯಮಕ್ಕೆ ದಾಖಲಿಸಿದಾಗ, ವಿದ್ಯಾರ್ಥಿಗಳ ಪಾಡೇನು? ಮೊದಲೇ ತೆಲುಗು ಮಾತೃಭಾಷೆಯಿಂದ ಬಂದ ಮಕ್ಕಳಿಗೆ ಕನ್ನಡದ ವರ್ಣಮಾಲೆಯ ಪರಿಚಯವು ಇರುವುದಿಲ್ಲ. ಅಂದಾಗ ಇವರ ಮುಂದಿನ ಶೈಕ್ಷಣಿಕ ಮಟ್ಟ, ಕಲಿಕೆ, ಯಾವ ಸ್ಥಿತಿಗೆ ತಲುಪಬಹುದು. ಇದಕ್ಕೆಲ್ಲ ಇದುವರೆಗೂ ಪರಿಹಾರ ಕಂಡುಕೊಳ್ಳುವಲ್ಲಿ ಶಿಕ್ಷಣ ಇಲಾಖೆ ವಿಫಲವಾಗಿದೆ. ಇನ್ನು ಮುಂದಾದರೂ ಎಚ್ಚೆತ್ತುಕೊಳ್ಳುತ್ತದೆಯೆ ಎಂಬುದನ್ನು ನೋಡಬೇಕಾಗಿದೆ.

## ಗಡಿಭಾಗದ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು ಮತ್ತು ಅಲ್ಲಿನ ವಿದ್ಯಾರ್ಥಿಗಳ ಸಂಖ್ಯೆ

ಕೋಷ್ಟಕ-೪

| ವಿದ್ಯಾರ್ಥಿ ನಿಲಯಗಳ ವಿವರ | ವಿದ್ಯಾರ್ಥಿ ನಿಲಯಗಳ ಸಂಖ್ಯೆ | | | ಮಂಜುರಾತಿ ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|---|
| | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| ಸರ್ಕಾರಿ ಬಾಲಕರ ವಸತಿನಿಲಯ ಚಿಂಚೋಳಿ | ೧ | ೦ | ೧ | ೧೦೦ | ೦ | ೧೦೦ |
| ಸರ್ಕಾರಿ ಬಾಲಕರ ವಸತಿನಿಲಯ ಕೊಂಚಾವರಂ | ೧ | ೦ | ೧ | ೭೫ | ೦ | ೭೫ |
| ಸರ್ಕಾರಿ ಬಾಲಕಿಯರ ವಸತಿನಿಲಯ ಚಿಂಚೋಳಿ | ೦ | ೧ | ೧ | ೦ | ೫೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಮುಧೋಳ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಕುರಕುಂಟಾ | ೧ | ೦ | ೧ | ೨೫ | ೦ | ೨೫ |
| ಸರ್ಕಾರಿ ಬಾಲಕರ ವಸತಿನಿಲಯ ಕೋಲಕುಂದಾ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ರಂಜೋಳ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕಿಯರ ವಸತಿನಿಲಯ ಸೇಡಂ | ೦ | ೧ | ೧ | ೦ | ೭೫ | ೭೫ |
| ಸರ್ಕಾರಿ ಬಾಲಕರ ವಸತಿನಿಲಯ ಕಂದಕೂರ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಕೊಂಕಲ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಕೆಡೇಚೂರ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಸೈದಾಪುರ | ೧ | ೦ | ೧ | ೭೫ | ೦ | ೭೫ |

| ವಿದ್ಯಾರ್ಥಿ ನಿಲಯಗಳ ವಿವರ | ವಿದ್ಯಾರ್ಥಿ ನಿಲಯಗಳ ಸಂಖ್ಯೆ | | | ಮಂಜುರಾತಿ ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|---|
| | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| ಸರ್ಕಾರಿ ಬಾಲಕರ ವಸತಿನಿಲಯ ಗುರುಮಿಠಕಲ್ | ೧ | ೦ | ೧ | ೭೫ | ೦ | ೭೫ |
| ಸರ್ಕಾರಿ ಬಾಲಕರ ವಸತಿನಿಲಯ ಮಾದ್ವಾರ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಗಾಜರಕೋಟ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಬಳಿಚಕ್ರ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಇಡ್ಲೂರು | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕರ ವಸತಿನಿಲಯ ಅನಿಪೂರ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕಿಯರ ವಸತಿನಿಲಯ ಗುರುಮಿಠಕಲ್ | ೦ | ೧ | ೧ | ೦ | ೫೦ | ೫೦ |
| ಸರ್ಕಾರಿ ಬಾಲಕಿಯರ ವಸತಿನಿಲಯ ಕಂದಕೂರ | ೦ | ೧ | ೧ | ೦ | ೫೦ | ೫೦ |
| ಸರ್ಕಾರಿ ಬಾಲಕಿಯರ ವಸತಿನಿಲಯ ಗಾಜರಕೋಟ | ೦ | ೧ | ೧ | ೦ | ೫೦ | ೫೦ |
| ಸರ್ಕಾರಿ ಬಾಲಕಿಯರ ವಸತಿನಿಲಯ ಸೈದಾಪುರ | ೦ | ೧ | ೧ | ೦ | ೫೦ | ೫೦ |
| ಒಟ್ಟು | ೧೬ | ೬ | ೨೨ | ೯೦೦ | ೩೨೫ | ೧೨೨೫ |

**ಆಧಾರ :** ಸಮಾಜ ಕಲ್ಯಾಣ ಇಲಾಖೆ, ಗುಲಬರ್ಗಾ, ೨೦೦೬

ಭಾಷಿಕ ಮತ್ತು ಶಿಕ್ಷಕರ ಸಮಸ್ಯೆಯಂತೆ ಸಮಾಜ ಕಲ್ಯಾಣ ಇಲಾಖೆ ನಡೆಸುವ ವಿದ್ಯಾರ್ಥಿ ನಿಲಯಗಳಲ್ಲಿನ ಶೈಕ್ಷಣಿಕ ಪೂರಕ ಸೌಲಭ್ಯಗಳು ಎಷ್ಟರಮಟ್ಟಿಗೆ ವಿದ್ಯಾರ್ಥಿಗಳಿಗೆ ಸಕಾಲದಲ್ಲಿ ಮುಟ್ಟುತ್ತಿವೆ ಎನ್ನುವುದನ್ನು ಈ ಮೇಲಿನ ಕೋಷ್ಟಕದಿಂದ ಊಹಿಸಬಹುದು.

## ಗಡಿಭಾಗದಲ್ಲಿನ ಸರ್ಕಾರಿ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಮತ್ತು ಅಲ್ಲಿನ ವಿದ್ಯಾರ್ಥಿಗಳ ಸಂಖ್ಯೆ

ಕೋಷ್ಟಕ-೫

| ವಿದ್ಯಾರ್ಥಿ ನಿಲಯಗಳ ವಿವರ | ವಿದ್ಯಾರ್ಥಿ ನಿಲಯಗಳ ಸಂಖ್ಯೆ | | | ಮಂಜುರಾತಿ ವಿದ್ಯಾರ್ಥಿಗಳ ಸಂಖ್ಯೆ | | |
|---|---|---|---|---|---|---|
| | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರು | ಒಟ್ಟು |
| ಸರ್ಕಾರಿ ಬಾಲಕರ ವಸತಿನಿಲಯ ಚಿಂಚೋಳಿ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಕಾಲೇಜು ವಸತಿನಿಲಯ ಸೇಡಂ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಕಾಲೇಜು ವಸತಿನಿಲಯ ಯಾದಗೀರ | ೧ | ೦ | ೧ | ೧೦೦ | ೦ | ೧೦೦ |
| ಸರ್ಕಾರಿ ಕಾಲೇಜು ವಸತಿನಿಲಯ ಗುರುಮಿಠಕಲ್ | ೧ | ೦ | ೧ | ೫೦ | ೦ | ೫೦ |
| ಸರ್ಕಾರಿ ಬಾಲಕಿಯರ ವಸತಿನಿಲಯ ಯಾದಗೀರ | ೦ | ೧ | ೧ | ೦ | ೫೦ | ೫೦ |
| ಸರ್ಕಾರಿ ಬಾಲಕಿಯರ ವಸತಿನಿಲಯ ಗುರುಮಿಠಕಲ್ | ೦ | ೧ | ೧ | ೦ | ೫೦ | ೫೦ |
| ಒಟ್ಟು | ೪ | ೨ | ೬ | ೨೫೦ | ೧೦೦ | ೩೫೦ |

ಆಧಾರ : ಸಮಾಜ ಕಲ್ಯಾಣ ಇಲಾಖೆ, ಗುಲಬರ್ಗಾ, ೨೦೦೬

ಈ ಗಡಿಭಾಗದಲ್ಲಿನ ಮೆಟ್ರಿಕ್ ಪೂರ್ವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳ ಸಂಖ್ಯೆ ೧೦,೪೮೬ರಷ್ಟಿದೆ(ಕೋಷ್ಟಕ ೫). ಸಮಾಜ ಕಲ್ಯಾಣ ಇಲಾಖೆ ನಡೆಸುವ ವಿದ್ಯಾರ್ಥಿ ನಿಲಯಗಳಲ್ಲಿ ಕೇವಲ ೧,೨೨೫ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯದ ಸೌಲಭ್ಯ ಒದಗಿಸಲಾಗಿದೆ. ಇದರಂತೆ ಮೆಟ್ರಿಕ್ ನಂತರದ ವಿದ್ಯಾರ್ಥಿಗಳ ಸಂಖ್ಯೆ ೨,೬೦೦ರಷ್ಟಿದೆ. ಆದರೆ ಇವರಲ್ಲಿ ಕೇವಲ ೩೫೦ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯದ ಸೌಲಭ್ಯ ಒದಗಿಸಿದೆ. ಅಂದರೆ ಗ್ರಾಮೀಣ ಬಡ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಲ್ಲಿನ ಮೆಟ್ರಿಕ್ ಪೂರ್ವ ೯,೨೬೧ ಮತ್ತು ಮೆಟ್ರಿಕ್ ನಂತರದ ೨,೨೫೦ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಸಮಾಜಕಲ್ಯಾಣ ವಸತಿ ನಿಲಯಗಳಿಂದ ಹೊರಗುಳಿದಿದ್ದಾರೆ.

**ಸಮಾಜ ಕಲ್ಯಾಣ ಇಲಾಖೆ ಪ.ಜಾ./ಪ.ಪಂ. ವಿದ್ಯಾರ್ಥಿನಿಲಯಗಳಲ್ಲಿನ ವಿದ್ಯಾರ್ಥಿಗಳಿಗೆ ಖರ್ಚು ಮಾಡುತ್ತಿರುವ ಆಯವ್ಯಯದ ಅಂಕಿ-ಅಂಶಗಳು**

ಕೋಷ್ಟಕ-೬

| | | | |
|---|---|---|---|
| ೧. ಆಹಾರ ವೆಚ್ಚ ವಾರ್ಷಿಕ | - ರೂ. | ೫,೪೦೦ | ಪ್ರತಿ ವಿದ್ಯಾರ್ಥಿಗೆ |
| ೨. ಇತರೆ ವೆಚ್ಚ ವಾರ್ಷಿಕ | - ರೂ. | ೪೮೦ | ಪ್ರತಿ ವಿದ್ಯಾರ್ಥಿಗೆ |
| ೩. ಕ್ಷೌರದ ವೆಚ್ಚ ವಾರ್ಷಿಕ | - ರೂ. | ೬೦ | ಪ್ರತಿ ವಿದ್ಯಾರ್ಥಿಗೆ |
| ೪. ಪಠ್ಯಪುಸ್ತಕ ವೆಚ್ಚ ವಾರ್ಷಿಕ | - ರೂ. | ೨೫೦ | ಪ್ರತಿ ವಿದ್ಯಾರ್ಥಿಗೆ |
| ೫. ಸಮವಸ್ತ್ರ ವೆಚ್ಚ ವಾರ್ಷಿಕ | - ರೂ. | ೩೫೦ | ಪ್ರತಿ ವಿದ್ಯಾರ್ಥಿಗೆ |
| **ಒಟ್ಟು** | **- ರೂ.** | **೬,೫೪೦** | |

**ಆಧಾರ :** ಸಮಾಜ ಕಲ್ಯಾಣ ಇಲಾಖೆ, ಗುಲಬರ್ಗಾ, ೨೦೦೬

ಒಬ್ಬ ವಿದ್ಯಾರ್ಥಿಗೆ ಇವರು ೫೪೫ ರೂಪಾಯಿಗಳನ್ನು ಪ್ರತಿ ತಿಂಗಳಿಗೆ ಖರ್ಚು ಮಾಡುತ್ತಾರೆ. ೧ ರಿಂದ ೧೦ನೆಯ ತರಗತಿಯ ವಿದ್ಯಾರ್ಥಿಗಳಿಗೆ ಆಹಾರ ವೆಚ್ಚ, ಇತರೆ ವೆಚ್ಚ, ಕ್ಷೌರದ ವೆಚ್ಚ, ಪಠ್ಯಪುಸ್ತಕದ ವೆಚ್ಚ ಮತ್ತು ಸಮವಸ್ತ್ರದ ವೆಚ್ಚ - ಪ್ರತಿ ತಿಂಗಳಿಗೆ ೫೪೫ ಎಂದರೆ ಇಂದಿನ ಸಂದರ್ಭಕ್ಕೆ ಇದು ಸರಿ ಹೊಂದುತ್ತದೆಯೇ? ಒಬ್ಬ ೧೦ನೆಯ ತರಗತಿಯ ವಿದ್ಯಾರ್ಥಿ ಶಾಲೆ ಬಿಟ್ಟು ಕಲ್ಲಿನ ಗಣಿಯ ಕೂಲಿಗೆ ಹೋದರೆ ದಿನಕ್ಕೆ ೬೦ ರೂಪಾಯಿ ಸಿಗುತ್ತದೆ. ಅಂದರೆ ತಿಂಗಳಿಗೆ ೧,೮೦೦ ರೂಪಾಯಿ ಸಂಪಾದಿಸುತ್ತಾನೆ. ನಾವು ಯಾವುದೇ ರೀತಿಯ ಸೌಲಭ್ಯಗಳನ್ನು ನೀಡಿದರು ಅದು ಒಂದು ಕನಿಷ್ಟ ಮಟ್ಟಕ್ಕಾದರು ಇರಬೇಕು. ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿನ ವಿದ್ಯಾರ್ಥಿಗಳಿಗೆ ಊಟ ಇದ್ದರೇ, ಪಠ್ಯಪುಸ್ತಕಗಳಿಲ್ಲ, ಪಠ್ಯಪುಸ್ತಕಗಳಿದ್ದರೇ ಉಡಲು ಬಟ್ಟೆಯಿಲ್ಲ, ೫೪೫ ರೂಪಾಯಿಗಳಲ್ಲಿ ಈ ಎಲ್ಲವನ್ನು ಓದುವ ವಿದ್ಯಾರ್ಥಿಗಳಿಗೆ ನೀಡುವುದಾದರೆ ಇದು ಎಷ್ಟು ಸಮಂಜಸ. ಅಭಿವೃದ್ಧಿ ಕಾಣದ ಈ ಪ್ರದೇಶಗಳಲ್ಲಿ ಶೈಕ್ಷಣಿಕ ಮಟ್ಟ ಕುಸಿಯಲು ಇದು ಒಂದು ಕಾರಣವಾಗಿದೆ. ವಿದ್ಯಾರ್ಥಿಗಳಲ್ಲಿ ಉತ್ಸಾಹ, ಪ್ರೋತ್ಸಾಹ ತುಂಬುವುದು ಗಡಿಭಾಗದಲ್ಲಿ ಇಂದು ಅವಶ್ಯಕವಾಗಿದೆ. ಹಸಿದ ಹೊಟ್ಟೆಯ ಕಾರಣದಿಂದ ಶಿಕ್ಷಣ ದೂರ ಉಳಿಯುವಂತಾಗಬಾರದು. ಆದ್ದರಿಂದ ಶೈಕ್ಷಣಿಕ ರಂಗಕ್ಕೆ ಕೊಡಮಾಡುವ ಆಯ-ವ್ಯಯ ಹೆಚ್ಚಿಸುವದು. ಇಂಥ ಬಡತನವಿರುವ ಗಡಿಪ್ರದೇಶಗಳಿಗೆ ಅವಶ್ಯವಾಗಿದೆ.

**೪.೨.೭. ಕರ್ನಾಟಕ-ಆಂಧ್ರ ಗಡಿಭಾಗದ ಶಾಲೆಗಳಲ್ಲಿನ ಬಿಸಿಯೂಟದ ಯೋಜನೆಯಲ್ಲಿ ಕಂಡುಬರುವ ಅಸಮರ್ಪಕತೆ :**

ಬಿಸಿಯೂಟ ಕಾರ್ಯಕ್ರಮವನ್ನು ಜಾರಿ ಮಾಡಿ ಶಾಲೆಯ ದಾಖಲಾತಿಯಲ್ಲಿ ಮಕ್ಕಳ ಸಂಖ್ಯೆ ಹೆಚ್ಚಿಸಬೇಕೆಂಬ ಮತ್ತು ಇದಕ್ಕೆ ಪೂರಕವೆಂಬಂತೆ ಮಕ್ಕಳಿಗೆ ಪೌಷ್ಠಿಕ ಆಹಾರ ನೀಡಿ ಆ ಮಕ್ಕಳ

ಆರೋಗ್ಯ ಬೆಳವಣಿಗೆ ಸುಧಾರಿಸುವುದು ಸರಕಾರದ ಉದ್ದೇಶ. ಇದರ ಜೊತೆಗೆ ಸಮಾಜದಲ್ಲಿನ ಜಾತಿ, ಧರ್ಮ, ಮೇಲು, ಕೀಳು ಇವುಗಳ ಕಲ್ಪನೆ ಮಕ್ಕಳಲ್ಲಿ ಮೂಡಬಾರದೆಂದು ಎಲ್ಲ ಮಕ್ಕಳನ್ನು ಈ ಬಿಸಿಯೂಟದ ವೇದಿಕೆಯಡಿಯಲ್ಲಿ ತರಲಾಯಿತು. ಸರಕಾರದ ಈ ಬಿಸಿ ಊಟದ ಉದ್ದೇಶಗಳೇನೋ ಸರಿ. ಆದರೆ ಈ ಬಿಸಿ ಊಟದಲ್ಲಿ ನೀಡುತ್ತಿರುವ ಆಹಾರ ಪದಾರ್ಥಗಳು ಎಷ್ಟರಮಟ್ಟಿಗೆ ಪೌಷ್ಠಿಕತೆಯಿಂದ ಕೂಡಿವೆ? ಮತ್ತು ಈ ಕಾರ್ಯಕ್ರಮದ ಮೂಲ ಉದ್ದೇಶ ಶಾಲೆಗಳಲ್ಲಿ ಮಕ್ಕಳ ಹಾಜರಾತಿ ಹೆಚ್ಚಿಸುವುದು ಆದರೆ ಈ ಉದ್ದೇಶಗಳು ಗುರಿ ಮುಟ್ಟುತ್ತಲಿವೆಯೇ ಎಂಬುದನ್ನು ನೋಡಿದಾಗ ಚಿಂಚೋಳಿ ತಾಲೂಕಿನ ಕೊಂಚಾವರಂ ತಾಂಡಾದಲ್ಲಿನ ಶಾಲೆಯಲ್ಲಿ ಮಕ್ಕಳ ದಾಖಲಾತಿ ಮತ್ತು ಹಾಜರಾತಿ ಸಂಖ್ಯೆ ೧೦೦ಕ್ಕೆ ೧೦೦ರಷ್ಟು. ಅದು ಹಾಜರಿ ಪುಸ್ತಕದಲ್ಲಿ. ವಾಸ್ತವದಲ್ಲಿ ಆಗುತ್ತಿರುವುದೇ ಬೇರೆ. ಶಾಲೆಗೆ ದಾಖಲಾದ ಮಕ್ಕಳು ಮಧ್ಯಾಹ್ನದ ಊಟದ ಸಮಯಕ್ಕೆ ಸರಿಯಾಗಿ ಶಾಲೆಗೆ ಬಂದು ಊಟ ಮಾಡಿ ಮತ್ತೇ ಹೊರಟು ಹೋಗುತ್ತಾರೆ. ಶಿಕ್ಷಕರು ಈ ಮಕ್ಕಳನ್ನು ಬಲವಂತವಾಗಿ ಶಾಲೆಯಲ್ಲಿ ಕೂರಿಸುವಂತೆಯೂ ಇಲ್ಲ. ಹಾಗೇನಾದರೂ ಮಾಡಿದರೆ ಅವರ ಪೋಷಕರು ಶಿಕ್ಷಕರನ್ನು ಓಡಾಡಿಸಿಕೊಂಡು ಬಡಿಯುತ್ತಾರೆ. ಅದಕ್ಕಾಗಿ ಶಿಕ್ಷಕರು ಸರ್ಕಾರಕ್ಕೆ ಸುಳ್ಳು ದಾಖಲಾತಿ, ಹಾಜರಾತಿ ತೋರಿಸಿ ಸುಮ್ಮನಾಗುವ ಸ್ಥಿತಿ ಈ ಗಡಿಗ್ರಾಮದಲ್ಲಿದೆ. ಇಂತಹ ಸುಳ್ಳು ದಾಖಲೆಗಳನ್ನು ಪರಿಶೀಲಿಸುವ ಅಧಿಕಾರಿಗಳಿಗೆ ಈ ವಿಷಯ ಗೊತ್ತಿದ್ದರೂ ಶಿಸ್ತುಕ್ರಮ ಕೈಗೊಳ್ಳುವ ಬದಲಾಗಿ ಸುಮ್ಮನಾಗುತ್ತಾರೆ. ಆದ್ದರಿಂದ ಮಕ್ಕಳಿಗೆ ನೀಡುವ ಬಿಸಿಯೂಟದ ಕಾರ್ಯ ಕ್ರಮವನ್ನು ಯಶಸ್ವಿಯಾಗಿ ಗುರಿ ಮುಟ್ಟುವಂತೆ ಮಾಡಬೇಕಾಗಿದೆ.

**೪.೨.೮. ಕರ್ನಾಟಕ-ಆಂಧ್ರ ಗಡಿಭಾಗ ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಗೆ ಕಾರಣಗಳು :**

ಇಲ್ಲಿಯವರೆಗೂ ಚಾರಿತ್ರಿಕ ಮತ್ತು ಕ್ಷೇತ್ರಕಾರ್ಯ ಮಾಹಿತಿಯ ಆಧಾರದ ಮೇಲೆ ಈ ಗಡಿಗ್ರಾಮ ಗಳಲ್ಲಿನ ಶೈಕ್ಷಣಿಕ ಚಟುವಟಿಕೆಗಳನ್ನು ಉದಾಹರಣೆ, ಅಂಕಿ-ಅಂಶಗಳ ಸಹಾಯದಿಂದ ನೋಡಿರುವೆವು. ಈ ಎಲ್ಲ ವಿಶ್ಲೇಷಣೆಯ ಆಧಾರದ ಮೇಲೆ ಒಟ್ಟಾರೆಯಾಗಿ ಈ ಕರ್ನಾಟಕ-ಆಂಧ್ರ ಗಡಿಭಾಗವು ಶೈಕ್ಷಣಿಕವಾಗಿ ಹಿಂದುಳಿಯಲು ಈ ಕಾರಣಗಳನ್ನು ನೀಡಬಹುದಾಗಿದೆ.

೧. ಮುಸ್ಲಿಂ ಆಡಳಿತದ ಪ್ರಭಾವದಿಂದ ಕ್ರಿ.ಶ. ೧೯೪೭ರವರೆಗೆ ಇಲ್ಲಿ ಕನ್ನಡ ಮಾಧ್ಯಮದ ಶಾಲೆಗಳು ಹುಟ್ಟಿಕೊಳ್ಳಲಿಲ್ಲ.

೨. ಕರ್ನಾಟಕ-ಆಂಧ್ರ ಗಡಿಭಾಗದ ದ್ವಿಭಾಷಿಕ ಪರಿಸರದ ಪ್ರಭಾವದಿಂದಾಗಿ ಕಲಿಕೆಯಲ್ಲಿ ಭಾಷಾ ತೊಡಕು ಉಂಟಾಗುತ್ತಿದೆ.

೩. ಆರ್ಥಿಕವಾಗಿ ಅಭಿವೃದ್ಧಿ ಹೊಂದದೆ ಇರುವ ಗಡಿಗ್ರಾಮಗಳ ಪೋಷಕರು ಆರ್ಥಿಕವಾಗಿ ಹಿಂದುಳಿದದ್ದಕ್ಕೆ, ಮಕ್ಕಳನ್ನು ಕೂಲಿ ಕೆಲಸಗಳಿಗೆ ಕಳಿಸುತ್ತಿರುವುದರಿಂದ ಮಕ್ಕಳು ಶಾಲೆಯಿಂದ ದೂರ ಉಳಿದಿದ್ದಾರೆ.

೪. ವಿದ್ಯಾರ್ಥಿಗಳ ಸಂಖ್ಯೆಗೆ, ಶಿಕ್ಷಕರ (೧:೧೦) ಸಂಖ್ಯೆಯ ಅಭಾವವಿರುವುದರಿಂದ ಶಾಲೆಯಿಂದ ಹೊರಗುಳಿದ ಮತ್ತು ಶಾಲೆಯಲ್ಲಿನ ಮಕ್ಕಳನ್ನು ಸರಿಯಾಗಿ ಗಮನಿಸಲಾಗುತ್ತಿಲ್ಲ.

೫. ವಿದ್ಯಾರ್ಥಿಗಳಿಗನುಗುಣವಾಗಿ ಶಾಲೆಯ ಮೂಲಭೂತ ಸೌಕರ್ಯಗಳಾದ ಕೊಠಡಿಗಳು, ಕುಡಿಯುವ ನೀರು, ಶೌಚಾಲಯ, ವಿದ್ಯುತ್, ಆಟದ ಮೈದಾನಗಳ ಕೊರತೆಯಿಂದಾಗಿ ಶಾಲೆಗೆ ಬರುವ ಮಕ್ಕಳ ಸಂಖ್ಯೆ ಕಡಿಮೆಯಾಗಿದೆ.

೬. ಸರಕಾರ ಹಾಕಿಕೊಳ್ಳುವ ಕಾರ್ಯಕ್ರಮಗಳನ್ನು ಸ್ಥಳೀಯ ಅಧಿಕಾರಿಗಳು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳಿಸದೆ ಇರುವುದರಿಂದ ಮಕ್ಕಳು ಕಲಿಕೆಯಿಂದ ದೂರವುಳಿಯುವಂತಾಗಿದೆ.

೭. ವಿದ್ಯಾರ್ಥಿಗಳಿಗನುಗುಣವಾಗಿ ವಿದ್ಯಾರ್ಥಿ ವಸತಿ ನಿಲಯ ಮತ್ತು ಅವುಗಳಲ್ಲಿನ ಸೌಲಭ್ಯಗಳ ಅಭಾವದಿಂದಾಗಿ ಓದಿಗಿಂತ ದುಡಿಮೆಯ ಕಡೆಗೆ ಪಾಲಕರು ಮತ್ತು ಮಕ್ಕಳು ಆಸ್ಥೆವಹಿಸಿರುವುದ ರಿಂದಾಗಿ ಸಾಕ್ಷರತೆಯಲ್ಲಿ ಈ ಭಾಗ ಹಿಂದುಳಿದಿದೆ ಎನ್ನಬಹುದು.

ಇಂತಹ ಕಾರಣಗಳಿಂದಾಗಿಯೇ ಕರ್ನಾಟಕ-ಆಂಧ್ರದ ಗಡಿಯಲ್ಲಿನ ಚಿಂಚೋಳಿ ಗಡಿಗ್ರಾಮಗಳಲ್ಲಿ ಶೇ. ೩೮%, ಸೇಡಂ ಗಡಿಗ್ರಾಮಗಳಲ್ಲಿ ೪೨.೨೩% ಮತ್ತು ಯಾದಗೀರ ಗಡಿಗ್ರಾಮಗಳಲ್ಲಿ ೩೪.೮೪%ರಷ್ಟು ಸಾಕ್ಷರತಾ ಪ್ರಮಾಣ ಕ್ರಿ.ಶ. ೨೦೦೧ರಲ್ಲಿ ದಾಖಲಾಗಿದೆ. ಆದರೆ ಇದೇ ಗಡಿಗೆ ಹೊಂದಿಕೊಂಡಿವೆ. ಆಂಧ್ರದ ಗಡಿಭಾಗದಲ್ಲಿನ ತಾಂಡೂರ ಗಡಿಗ್ರಾಮಗಳಲ್ಲಿ ೫೯.೮%, ಬಷೀರಾಬಾದ್ ಗಡಿಗ್ರಾಮಗಳಲ್ಲಿ ೪೮.೯% ಕೊಡಂಗಲ್ ಗಡಿಗ್ರಾಮಗಳಲ್ಲಿ ೫೩.೨%, ನಾರಾಯಣಪೇಟೆ ಗಡಿಗ್ರಾಮಗಳಲ್ಲಿ ಶೇ. ೫೫% ಸಾಕ್ಷರತೆಯ ಪ್ರಮಾಣವಿದೆ. ಇನ್ನಾದರೂ ಸರ್ಕಾರ ಮತ್ತು ಶಿಕ್ಷಣ ಇಲಾಖೆ ಈ ಗಡಿಗ್ರಾಮಗಳಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ಚುರುಕುಗೊಳಿಸದಿದ್ದರೆ ಇಲ್ಲಿನ ಸಾಕ್ಷರತಾ ಪ್ರಮಾಣ ಇನ್ನು ಕೆಳಮಟ್ಟಕ್ಕಿಳಿ ಯುವ ಸಾಧ್ಯತೆ ಹೆಚ್ಚಾಗುವುದು.

**೪.೨.೯. ಕರ್ನಾಟಕ-ಆಂಧ್ರ ಗಡಿಭಾಗದ ಶೈಕ್ಷಣಿಕಾಭಿವೃದ್ಧಿಗೆ ಸಲಹೆಗಳು :**

ಈ ಗಡಿಭಾಗದಲ್ಲಿನ ಶೈಕ್ಷಣಿಕ ಮಟ್ಟ ಸುಧಾರಿಸಲು ಈ ಕೆಳಗಿನ ಸಲಹೆಗಳನ್ನು ತ್ವರಿತವಾಗಿ ಜಾರಿಗೊಳಿಸಿ ಮತ್ತು ಅವು ಯಶಸ್ವಿಯಾಗುವಂತೆ ನೋಡಿಕೊಳ್ಳಬೇಕಾದ ಅನಿವಾರ್ಯತೆ ಇಲ್ಲಿದೆ.

೧. ಕರ್ನಾಟಕ-ಆಂಧ್ರ ಗಡಿಭಾಗದಲ್ಲಿರುವ ಎಲ್ಲ ಶಾಲೆಗಳಿಗೂ ಅಗತ್ಯವಾಗಿ ಬೇಕಾಗಿರುವ ಮೂಲಭೂತ ಅವಶ್ಯಕತೆಗಳಾದ ಶಾಲಾಕಟ್ಟಡ, ಶೌಚಾಲಯ, ಕುಡಿಯುವ ನೀರು, ಪಾಠ-ಪೀಠೋಪಕರಣಗಳ ಪೂರೈಕೆ, ಉತ್ತಮ ಗುಣಮಟ್ಟದ ಆಹಾರ ಸರಬರಾಜಿಗೆ ಅಗತ್ಯ ವ್ಯವಸ್ಥೆ ಮಾಡುವುದು.

೨. ಗಡಿಭಾಗದಲ್ಲಿನ ಎಲ್ಲ ಜನಸಾಮಾನ್ಯರ(ಆರ್ಥಿಕವಾಗಿ ಹಿಂದುಳಿದ) ಮಕ್ಕಳಿಗೆ ಅನುಕೂಲ ವಾಗುವಂತೆ ಅಗತ್ಯವಾದ ವಸತಿನಿಲಯಗಳು, ವಸತಿಶಾಲೆಗಳು ಮತ್ತು ಅವುಗಳಲ್ಲಿ ಏನಿಲ್ಲವೆಂದರೂ ಯೋಗ್ಯ ಗುಣಮಟ್ಟದ ಸೌಲಭ್ಯಗಳನ್ನು ನೀಡುವಂತೆ ಮಾಡುವುದು.

೩. ಗಡಿಭಾಗದ ಶಾಲೆಗಳಲ್ಲಿರುವ ಖಾಲಿ ಶಿಕ್ಷಕರ ಹುದ್ದೆಗಳನ್ನು ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣ ವಾಗಿ ಪ್ರಸಕ್ತ ಹಣಕಾಸು ವರ್ಷದ ಅವಧಿಯೊಳಗಾಗಿ ಭರ್ತಿ ಮಾಡಿಕೊಳ್ಳುವುದು.

೪. ರಾಜ್ಯದ ಯಾವುದೇ ಭಾಗಗಳಿಂದ ಈ ಗಡಿಶಾಲೆಗಳಿಗೆ ನಿಯುಕ್ತಿ(ಆಯ್ಕೆ)ಯಾದ ಶಿಕ್ಷಕರನ್ನು ಕನಿಷ್ಠ ೧೫ ವರ್ಷಗಳವರೆಗೆ ಇಲ್ಲಿಯೇ ಕಾರ್ಯ ನಿರ್ವಹಿಸುವಂತೆ ಮಾಡುವುದು. ಇಲ್ಲವೇ ಪ್ರಾದೇಶಿಕತೆ (ಶೈಕ್ಷಣಿಕವಾಗಿ, ಭಾಷಿಕವಾಗಿ, ಭೌಗೋಳಿಕವಾಗಿ)ಗೆ ಅನುಗುಣವಾಗಿ ಶಿಕ್ಷಕರ ಆಯ್ಕೆ ಪ್ರಕ್ರಿಯೆ ನಡೆಸುವುದು.

೫. ಗಡಿಭಾಗದಲ್ಲಿನ ಶಿಕ್ಷಣ ಮೇಲ್ವಿಚಾರಣೆ ಮತ್ತು ಸುಧಾರಣೆಯನ್ನು ನೋಡಿಕೊಳ್ಳುವುದಕ್ಕಾಗಿಯೇ ಪ್ರತ್ಯೇಕವಾದ ಒಂದು ಶಿಕ್ಷಣ ವಲಯವನ್ನು ಜಾರಿಗೆ ತಂದು ಅದು ಗಡಿಭಾಗದ ಶಾಲೆಗಳೊಂದಿಗೆ ನಿರಂತರ ಸಂಪರ್ಕದಲ್ಲಿರುವಂತೆ ಮಾಡುವುದು.

೬. ಪ್ರತಿಯೊಂದು ಗಡಿಭಾಗದಲ್ಲಿನ ಶಾಲೆಗಳಲ್ಲಿ ಗ್ರಂಥಾಲಯ ಮತ್ತು ಮಾಹಿತಿ ತಂತ್ರಜ್ಞಾನದ ಸೌಲಭ್ಯಗಳನ್ನು ಒದಗಿಸುವುದು.

೭. ಗಡಿಭಾಗದಲ್ಲಿನ ಕನ್ನಡ ಶಾಲೆಗಳಿಗೆ ಉತ್ತೇಜನ ನೀಡಲು 'ಶಾಶ್ವತ ಅನುದಾನ ರಹಿತ' ಷರತ್ತಿನಿಂದ ಅಲ್ಲಿನ ಶಿಕ್ಷಣ ಸಂಸ್ಥೆಗಳಿಗೆ ವಿನಾಯಿತಿ ನೀಡುವುದು.

೮. ರಾಜ್ಯದ ಹೊರಗಿನ ಶಾಲಾಕಾಲೇಜುಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆದ ವಿದ್ಯಾರ್ಥಿಗಳು ರಾಜ್ಯದಲ್ಲಿ ಹೆಚ್ಚಿನ ಶಿಕ್ಷಣ ಮತ್ತು ಉದ್ಯೋಗ ಪಡೆದುಕೊಳ್ಳಲು ಶೇ. ೧೫ರಷ್ಟು ಅವಕಾಶ ಕಲ್ಪಿಸುವುದು.

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಇವುಗಳನ್ನು ಜಾರಿಗೆ ಮಾಡಿದ್ದೇ ಆದರೆ ಗಡಿಭಾಗದಲ್ಲಿನ ಶೈಕ್ಷಣಿಕ ಮಟ್ಟ ಮತ್ತು ಸಾಕ್ಷರತಾ ಪ್ರಮಾಣ ಖಂಡಿತ ಸುಧಾರಣೆಗೊಳ್ಳುತ್ತದೆ. ಇಂತಹ ಪ್ರಯೋಗಗಳನ್ನು ಶೀಘ್ರದಲ್ಲಿಯೇ ಜಾರಿಗೊಳಿಸಿ ಫಲಿತಾಂಶಗಳನ್ನು ಶೀಘ್ರದಲ್ಲಿಯೇ ಪಡೆಯಬೇಕು. ಶೀಘ್ರದಲ್ಲಿಯೇ ಈ ಫಲಿತಾಂಶಗಳನ್ನು ಕಂಡುಕೊಂಡು ಇವುಗಳಲ್ಲಿನ ನ್ಯೂನತೆಯನ್ನು ಸರಿಪಡಿಸುವುದರಿಂದ ಗಡಿಭಾಗದಲ್ಲಿ ಶೈಕ್ಷಣಿಕತೆಯಲ್ಲಿ ಅಭಿವೃದ್ಧಿಯನ್ನು ಕಂಡುಕೊಳ್ಳಬಹುದು.

**೪.೪. ಆರ್ಥಿಕ ಸ್ಥಿತಿಗತಿ**

ಸಾಮಾನ್ಯವಾಗಿ ಒಂದು ಪ್ರದೇಶವು ಆರ್ಥಿಕವಾಗಿ ಮುಂದುವರೆದಿದೆ ಎಂಬುದು ಅಲ್ಲಿನ ಉತ್ಪಾದನಾ ಸಂಗತಿಗಳು ಮತ್ತು ಆ ಉತ್ಪಾದನಾ ಸಂಗತಿಗಳು ಹೇಗೆ ವಿನಿಯೋಗಿಸಲ್ಪಡುತ್ತವೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ. ಈ ಉತ್ಪಾದನಾ ಆಕರಗಳು ಕೃಷಿ, ಕೈಗಾರಿಕೆ ಮತ್ತು ಸೇವಾವಲಯಗಳ ಮೇಲೆ ಅವಲಂಬಿತವಾಗಿರುತ್ತವೆ. ಇವುಗಳನ್ನು ಪ್ರಾಥಮಿಕ ವಲಯ, ದ್ವಿತೀಯ ವಲಯ ಮತ್ತು ಸೇವಾವಲಯ ಎಂಬುದಾಗಿ ಅರ್ಥಶಾಸ್ತ್ರದ ಪರಿಭಾಷೆಯಲ್ಲಿ ಕರೆಯಬಹುದು. ಪ್ರಾಥಮಿಕ ವಲಯದಲ್ಲಿನ ಕೃಷಿ ಮತ್ತು ಇತರ ಕೃಷಿಸಂಬಂಧಿ ಚಟುವಟಿಕೆಗಳು ಬೇರೆ ಯಾವುದರ ಸಹಾಯವಿಲ್ಲದೆ ಬೆಳೆಯುತ್ತವೆ, ಈ ಪ್ರಾಥಮಿಕ ವಲಯದಲ್ಲಿನ ಕೃಷಿ ಚಟುವಟಿಕೆಗಳ ಮೇಲೆ ದ್ವಿತೀಯ ವಲಯ ಕಾರ್ಯನಿರ್ವಹಿಸುತ್ತದೆ. ಕೃಷಿ ಚಟುವಟಿಕೆಗಳಿಂದ ಅಂದರೆ ಹತ್ತಿ ಬೆಳೆಯಿಂದಾಗಿ ಬಟ್ಟೆಗಿರಣಿಗಳು, ತೊಗರೆ ಬೆಳೆಯಿಂದಾಗಿ ಬೇಳೆ ಕಾರ್ಖಾನೆಗಳು ಹೀಗೆ ದ್ವಿತೀಯ ವಲಯದಲ್ಲಿನ ಉದ್ಯಮ ನೇರವಾಗಿ ಪ್ರಾಥಮಿಕ ವಲಯದಲ್ಲಿನ ಕೃಷಿ ಚಟುವಟಿಕೆಯನ್ನು ಅವಲಂಬಿಸಿರುತ್ತದೆ. ಪ್ರಾಥಮಿಕ ವಲಯದಿಂದ ದ್ವಿತೀಯ ವಲಯ ಕಾರ್ಯ ನಿರ್ವಹಿಸಿದಂತೆಯೇ ಈ ಎರಡು ಉತ್ಪಾದನಾ ವಲಯಗಳ ಸಹಾಯದಿಂದಲೇ ಸೇವಾವಲಯ ಚಟುವಟಿಕೆ ಯಲ್ಲಿ ತೊಡಗುತ್ತದೆ. ಪ್ರಾಥಮಿಕ ವಲಯದಿಂದ ಬಂದ ಹತ್ತಿಯನ್ನು ದ್ವಿತೀಯ ವಲಯದ ಬಟ್ಟೆಗಿರಣಿ,

ಬಟ್ಟೆ ತಯಾರಿಸಿದಾಗ ಈ ಎರಡು ವಲಯಗಳಿಗೆ ಪೂರಕ ಮಾರುಕಟ್ಟೆಯ ವ್ಯವಸ್ಥೆಯನ್ನು ಈ ಸೇವಾವಲಯ ನಿರ್ಮಿಸುತ್ತದೆ. ಪ್ರಾಥಮಿಕ ಮತ್ತು ದ್ವಿತೀಯ ವಲಯಗಳ ಉತ್ಪಾದನೆಗೆ ಬ್ಯಾಂಕಿಂಗ್, ಸಾರಿಗೆ, ಮಾರುಕಟ್ಟೆಗಳ ವ್ಯವಸ್ಥೆಯನ್ನು ಈ ಸೇವಾವಲಯವೇ ಹುಟ್ಟುಹಾಕುತ್ತದೆ. ಹೀಗಾಗಿ ಒಂದು ಸಮಾಜ, ಒಂದು ಪ್ರದೇಶ, ಒಂದು ರಾಷ್ಟ್ರ ಅಭಿವೃದ್ಧಿ ಹೊಂದಬೇಕಾದರೆ ಪ್ರಾಥಮಿಕ, ದ್ವಿತೀಯ ಮತ್ತು ಸೇವಾವಲಯಗಳು ಪರಸ್ಪರ ಪೂರಕವಾಗಿ ಕಾರ್ಯನಿರ್ವಹಿಸುವುದು ಇಲ್ಲಿ ಅಗತ್ಯವಾಗುತ್ತದೆ. ಇವುಗಳಲ್ಲಿನ ಯಾವುದಾದರೊಂದು ಉತ್ಪಾದನಾ ವಲಯ ಸರಿಯಾಗಿ ಕೆಲಸ ಮಾಡದಿದ್ದರೆ ಅಥವಾ ಅವು ಸ್ಥಗಿತಗೊಂಡರೆ ಅಲ್ಲಿನ ಅಭಿವೃದ್ಧಿಯು ತಾನಾಗಿಯೇ ಸ್ಥಗಿತಗೊಳ್ಳುತ್ತದೆ. ಆದ್ದರಿಂದಲೆ ಈ ಮೂರು ವಲಯಗಳು ಒಂದಕ್ಕೊಂದು ಸಂಬಂಧವನ್ನು ಏರ್ಪಡಿಸಿಕೊಂಡು ಅಭಿವೃದ್ಧಿಯ ಕಾರ್ಯದಲ್ಲಿ ಕೆಲಸ ಮಾಡುತ್ತವೆ. ಈ ಮೂರು ವಲಯಗಳು ಸುಗಮವಾಗಿ ನಡೆಯಬೇಕೆಂದರೆ ಇವುಗಳಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳು ಆ ಪರಿಸರದಲ್ಲಿರುವುದು ಅತ್ಯವಶ್ಯಕ.

ಪ್ರೊ.ವಿ.ಕೆ.ಆರ್.ವಿ. ರಾವ್‌ರವರು "ಮೂಲಭೂತ ಸೌಕರ್ಯಗಳನ್ನು ಒಂಬತ್ತು ಪ್ರಕಾರಗಳಲ್ಲಿ ಹೀಗೆ ಹೇಳಿದ್ದಾರೆ. ೧. **ಸಾರಿಗೆ :** ರಸ್ತೆಗಳು, ರೈಲ್ವೆ, ಹಡಗು, ಬಂದರುಗಳು ಮತ್ತು ರೇವು ಪಟ್ಟಣಗಳು, ವಿಮಾನ ನಿಲ್ದಾಣಗಳು, ಸಾರಿಗೆ ಸಲಕರಣೆಗಳು. ೨. **ಸಂಪರ್ಕ :** ಅಂಚೆ, ಟೆಲಿಗ್ರಾಫ್ಸ್, ದೂರವಾಣಿ, ರೇಡಿಯೋ, ಸಿನಿಮಾ, ದೂರದರ್ಶನ. ೩. **ಶಕ್ತಿ :** ಕಲ್ಲಿದ್ದಲು, ವಿದ್ಯುಚ್ಛಕ್ತಿ, ಗಾಳಿಶಕ್ತಿ, ಸೌರಮಾನಶಕ್ತಿ, ಆಯಿಲ್, ಅನಿಲ. ೪. **ಮಧ್ಯವರ್ತಿ ವಸ್ತುಗಳ ಉತ್ಪನ್ನ :** ಖನಿಜ, ಉಕ್ಕು, ಲೋಹ, ಮೂಲ ರಾಸಾಯನಿಕ, ಕೃತಕ ಗೊಬ್ಬರ, ರಾಸಾಯನಿಕ ಔಷಧ, ಯಂತ್ರ ಮತ್ತು ಯಂತ್ರ ಸಾಧನಗಳು. ೫. **ನೈಸರ್ಗಿಕ ಉತ್ಪಾದಕತೆಗಳ ಹೆಚ್ಚುತ್ತಿರುವ ಉತ್ಪಾದಕತೆ :** ಭೂಮಿಯ ಸಾಗುವಳಿ, ನೀರಾವರಿ (ದೊಡ್ಡ, ಮಧ್ಯಮ ಮತ್ತು ಸಣ್ಣ), ಹಿಡುವಳಿ ಕ್ರೋಢೀಕರಣ, ಮೀನುಗಾರಿಕೆಯ ನಾವೆ ಮತ್ತು ಸಲಕರಣೆಗಳು, ಕಾಡು ಬೆಳೆಸುವುದು ಮತ್ತು ವಾಣಿಜ್ಯ ಕಾಡುಗಳ ಅಭಿವೃದ್ಧಿ. ೬. **ವಿಜ್ಞಾನ ಮತ್ತು ತಾಂತ್ರಿಕತೆ :** ಬೋಧನೆ, ಮೂಲ ಮತ್ತು ಅನ್ವಯ ಸಂಶೋಧನೆ, ರಾಷ್ಟ್ರೀಯ ಪ್ರಯೋಗಾಲಯಗಳು. ೭. **ಮಾಹಿತಿ ತಂತ್ರಜ್ಞಾನ :** ಸಮೂಹ ಮಾಧ್ಯಮ, ಗ್ರಂಥಾಲಯ ಮತ್ತು ಮ್ಯೂಸಿಯಂ, ಪ್ರದರ್ಶನಗಳು, ಪುಸ್ತಕಗಳು, ಪತ್ರಿಕೆಗಳು. ೮. **ಹಣಕಾಸು ಮತ್ತು ಬ್ಯಾಂಕಿಂಗ್ :** ಉಳಿತಾಯ ಸಂಸ್ಥೆಗಳು (ಸಾರ್ವಜನಿಕ, ಖಾಸಗಿ ಮತ್ತು ಸಹಕಾರ ವಲಯ), ಜಮೆ ಮತ್ತು ಸಾಲ ನೀಡುವ ಸಂಸ್ಥೆಗಳು (ಸಾರ್ವಜನಿಕ, ಖಾಸಗಿ ಮತ್ತು ಸಹಕಾರ ವಲಯ) ಬಂಡವಾಳ ಮಾರುಕಟ್ಟೆ. ೯. **ಮಾನವ ಸಂಪನ್ಮೂಲ ಅಭಿವೃದ್ಧಿ :** ಆರೋಗ್ಯ, ಕುಡಿಯುವ ನೀರು, ಕಾಯಿಲೆ ನಿವಾರಣೆ, ಸಾರ್ವಜನಿಕರ ಆರೋಗ್ಯ, ಔಷಧ ಸೌಲಭ್ಯಗಳು, ಶಿಕ್ಷಣ, ಸಾಕ್ಷರತೆ, ಶಾಲೆಗಳು, ಕಾಲೇಜುಗಳು, ವಿಶ್ವವಿದ್ಯಾಲಯಗಳು, ತಾಂತ್ರಿಕ ಮತ್ತು ಕೈಗಾರಿಕೆ ಶಾಲೆಗಳು ಮತ್ತು ವೃತ್ತಿಪರ ಶಿಕ್ಷಣ."[೪] ಈ ಎಲ್ಲ ಅಂಶಗಳು ಪ್ರಾಥಮಿಕ, ದ್ವಿತೀಯ ಮತ್ತು ಸೇವಾವಲಯಗಳಲ್ಲಿ ಬರುವುದನ್ನು ನೋಡಬಹುದು.

**೪.೩.೧. ಕೃಷಿಕ ವರ್ಗ :**

ನಮ್ಮ ಅರ್ಥವ್ಯವಸ್ಥೆಯಲ್ಲಿ ಕೃಷಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ. ಈ ಗಡಿಭಾಗ ದಲ್ಲಿನ ಅನೇಕರು ಕೃಷಿಭೂಮಿ (೫ ಎಕರೆಯಿಂದ ೧೦೦ ಎಕರೆ) ಹೊಂದಿದ್ದು, ಹೆಚ್ಚಿನವರು ಸಾಂಪ್ರದಾಯಿಕ

ಕೃಷಿಯನ್ನು ಅನುಸರಿಸುತ್ತಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿನ ಭೂಸುಧಾರಣಾ ಕಾಯ್ದೆ ಈ ಪ್ರದೇಶದಲ್ಲಿ ಯಶಸ್ವಿಯಾದದ್ದು ಆಂಧ್ರಪ್ರದೇಶದ ಪ್ರೇರಣೆಯಿಂದ ಎನ್ನಬಹುದು. ಹೈದರಾಬಾದ್ ನಿಜಾಮನ ಕಾಲದಿಂದಲೂ ದೊಡ್ಡ ಪ್ರಮಾಣದ ಕೃಷಿಭೂಮಿ ಆಂಧ್ರದ ರೆಡ್ಡಿ, ದೇಶಮುಖ, ದೇಶಪಾಂಡೆ, ಜಾಗೀರದಾರ, ಗೌಡರ ಅಧೀನದಲ್ಲಿದ್ದವು. ಇವರ ಹತ್ತಿರ ಸುಮಾರು ಸಾವಿರಾರು ಎಕರೆ ಭೂಮಿ ಇದ್ದು, ಈ ಭೂಮಿಯಲ್ಲಿ ಇತರರು ಜೀತದಾಳುಗಳಾಗಿ ದುಡಿಯುತ್ತಿದ್ದರು. ಇದಕ್ಕೆ ಉದಾಹರಣೆಯೆಂದರೆ ನಾಡೇಪಲ್ಲಿ ದೇವರಾಜ ಅರಸ, ಮದನಾ ದೇಶಮುಖ, ಕಾಕಲವಾರದ ದೊರೆಗಳು. ಇಂತಹ ಭೂಹಿಡುವಳಿ ದಾರರು ಈ ಭಾಗದ ಕೃಷಿಭೂಮಿಯ ಮೇಲೆ ತಮ್ಮ ಸಂಪೂರ್ಣ ಹಿಡಿತ ಇಟ್ಟುಕೊಂಡಿದ್ದರು. ಒಂದೆಡೆ ಕೃಷಿಭೂಮಿಯನ್ನು ಭೂಮಾಲೀಕರು ವಶಪಡಿಸಿಕೊಂಡರೆ, ಇನ್ನೊಂದೆಡೆ ಅಲ್ಪಸ್ವಲ್ಪ ಭೂಮಿಯಲ್ಲಿ ಉಳುಮೆ ಮಾಡಿ ಬದುಕುತ್ತಿದ್ದ ಕುಟುಂಬಗಳು ಕೃಷಿ ಸಲಕರಣೆಗಳ ಕೊರತೆ, ಬರಗಾಲಗಳಂತಹ ಸಮಸ್ಯೆಗಳಿಂದಾಗಿ ಬಡತನದ ಬೇಗೆಗೆ ಸಹಜವಾಗಿ ತುತ್ತಾಗಬೇಕಾಯಿತು. ಈ ಸಂದರ್ಭಕ್ಕಾಗಿ ಕಾಯುತ್ತಿದ್ದ ಶ್ರೀಮಂತರು ಇವರಿಗೆ ಸಹಾಯ ಮಾಡುವಂತೆ ನಟಿಸಿ ಅವರ ಭೂಮಿಗಳನ್ನು ತಮ್ಮದಾಗಿಸಿಕೊಂಡ ಎಷ್ಟೋ ಉದಾಹರಣೆ ಗಳನ್ನು ಇಲ್ಲಿನ ಹಿರಿಯರು ವಿವರಿಸುತ್ತಾರೆ. ಕೆಲವೊಮ್ಮೆ ಮಜ್ಜಿಗೆ, ಅಕ್ಕಿನುಚ್ಚು, ಕೆಂಪುಜೋಳಕ್ಕಾಗಿ ತಮ್ಮ ಕೃಷಿಭೂಮಿಯನ್ನು ಅಡವಿಟ್ಟು, ಮುಂದೆ ಬಿಡಿಸಿಕೊಳ್ಳಲಾಗದೆ, ಶ್ರೀಮಂತರಿಗೆ ಭೂಮಿಯನ್ನು ಬಡವರು ಬಿಟ್ಟುಕೊಡುತ್ತಿದ್ದರು.

ಹೈದರಾಬಾದ್ ನಿಜಾಮರ ರಾಜಾಶ್ರಯದಲ್ಲಿ ಬೆಳೆದ ಊಳಿಗಮಾನ್ಯ ವ್ಯವಸ್ಥೆ ರೆಡ್ಡಿಗಳ, ದೇಶಮುಖರ, ದೇಶಪಾಂಡೆ, ಜಹಾಗೀರದಾರ, ಗೌಡ, ಸಾಹುಕಾರರ ಅಧೀನದಲ್ಲಿ ಕೃಷಿಭೂಮಿ ಒಂದೆಡೆ ಬೃಹತ್ ಪ್ರಮಾಣದಲ್ಲಿ ಸಂಗ್ರಹವಾಗಿತ್ತು. ಇದು ಕೇವಲ ಇಲ್ಲಷ್ಟೇ ಅಲ್ಲದೆ ಇಡೀ ರಾಷ್ಟ್ರದಲ್ಲಿ, ಅಷ್ಟೇ ಏಕೆ ಪಶ್ಚಿಮದ ದೇಶಗಳಲ್ಲೂ ಈ ರೀತಿಯ ಜಿಡ್ಡುಗಟ್ಟಿದ ಅಸಮಾನತೆಯಿಂದ ಕೂಡಿದ ಊಳಿಗಮಾನ್ಯ ವ್ಯವಸ್ಥೆ ತನ್ನ ಕರಾಳ ಬಾಹುವನ್ನು ಚಾಚಿತ್ತು. ಫ್ರೆಂಚ್ ಕ್ರಾಂತಿ, ಅಮೇರಿಕಾದ ಕ್ರಾಂತಿಗಳಂತಹ ಘಟನೆಗಳು ಈ ಊಳಿಗಮಾನ್ಯ ವ್ಯವಸ್ಥೆಗೆ ತಕ್ಕಮಟ್ಟಿಗೆ ಲಂಗುಲಗಾಮು ಹಾಕಿದ ಹಿನ್ನೆಲೆಯಲ್ಲಿ ನಮ್ಮಲ್ಲಿಯೂ ಪ್ರಜಾಪ್ರಭುತ್ವ ಪ್ರತಿನಿಧೀಕರಣ ಅಂಶಗಳು ಹೆಚ್ಚು ವ್ಯಾಪಕತೆಯನ್ನು ಪಡೆದುಕೊಂಡವು. ಈ ಭಾಗದಲ್ಲಿ ರೈತ ಚಳುವಳಿಗಳು ಮೊದಲು ಹುಟ್ಟಿಕೊಂಡಿದ್ದು ಗಡಿಭಾಗಕ್ಕೆ ಹೊಂದಿಕೊಂಡಿರುವ ಆಂಧ್ರಪ್ರದೇಶದಲ್ಲಿ. ನಿಜಾಮನಿಂದ ಅನುಮತಿ ಪಡೆದು ಆಂಧ್ರದಲ್ಲಿ ದೊಡ್ಡ ಪ್ರಮಾಣದ (ಸುಮಾರು ೫ ಎಕರೆ, ೧೦ ಸಾವಿರ ಎಕರೆ) ಕೃಷಿಭೂಮಿಯ ಮೇಲೆ ಒಡೆತನವನ್ನು ಸ್ಥಾಪಿಸಿಕೊಂಡಿದ್ದ ಜಮೀನ್ದಾರರ ಮೇಲೆ ಅನೇಕ ದಶಕಗಳಿಂದ ಒಳಗೊಳಗೆ ಕುದಿಯುತ್ತಿದ್ದ ಬಹುತೇಕ ಕೃಷಿಕರು ಸೂಕ್ತ ಸಂದರ್ಭಕ್ಕಾಗಿ, ಸೂಕ್ತ ನಾಯಕತ್ವಕ್ಕಾಗಿ ಕಾಯುತ್ತಿದ್ದರು. ಇಂತಹ ಜಮೀನ್ದಾರರಿಂದ ಕೃಷಿಭೂಮಿಯನ್ನು ವಶಪಡಿಸಿಕೊಂಡು ಜನಸಾಮಾನ್ಯರಿಗೆ ಹಂಚುವ ಕೆಲಸ, ಮುಂದೆ ಸಮಾಜವಾದಿ ನಾಯಕರ ರಕ್ತಕ್ರಾಂತಿ ಹೋರಾಟದಿಂದ ಬಗೆಹರಿಯಿತು. ಈ ರೀತಿಯ ಆಂಧ್ರದ (ತೆಲಂಗಾಣ) ರೈತ ಹೋರಾಟದ ಪ್ರಭಾವ ನಮ್ಮ ಗಡಿಭಾಗದ ಮೇಲೆ ಕೂಡಾ ಆಯಿತು. ಕ್ರಿ.ಶ. ೧೯೭೪ರ ಭೂಮಸೂದೆ ಕಾಯ್ದೆಯಿಂದಾಗಿ ಉಳುವವನಿಗೆ ಭೂಮಿಯನ್ನು ನೀಡಲಾಯಿತು.

ಉಳುವವನೇ ಭೂಮಿಯ ಒಡೆಯನಾದ. ಈ ಭೂಸುಧಾರಣಾ ಕಾಯ್ದೆ ಇಲ್ಲಿನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳಿಗೆ ಪೂರಕವಾಯಿತು. ಇದರಿಂದ ಭೂಮಿ ಇಲ್ಲದಿರುವವರು ಅದರಲ್ಲಿಯೂ ಕೆಳವರ್ಗದ ಕುಟುಂಬಗಳು ಬೇರೆ ಕಡೆ ದುಡಿಯಲು ವಲಸೆ ಹೋಗುವುದನ್ನು ಬಿಟ್ಟು ಕೃಷಿಯಲ್ಲಿ ತೊಡಗುವಂತಾದರು.

ರೈತ ಚಳುವಳಿಗಳಿಂದಾಗಿ ಹಳ್ಳಿಗಳಲ್ಲಿನ ಜಮೀನ್ದಾರರು, ಗೌಡರು ತಮ್ಮ ಬಳಿ ಉಳಿದ ಅಲ್ಪಸ್ವಲ್ಪ ಕೃಷಿಭೂಮಿಯನ್ನು ಇತರರಿಗೆ ಮಾರಾಟ ಮಾಡಿಯೋ ಇಲ್ಲವೇ ಗುತ್ತಿಗೆ ಆಧಾರದ ಮೇಲೆ ಕೃಷಿಕರಿಗೆ ಬಿಟ್ಟು ಅವರೆಲ್ಲ ನಗರ ಪ್ರದೇಶಗಳಿಗೆ ಸೇರಿಕೊಂಡರು. ಈ ಎಲ್ಲ ಅಂಶಗಳನ್ನು ಗಮನಿಸಿದ ನಿಜಾಂ ಅರಸರು ಕೃಷಿಕರಿಗೆ ಸಂಬಂಧಿಸಿದ ಗ್ರಾಮೀಣ ಋಣಭಾರಕ್ಕೆ ಮತ್ತು ರೈತರು ಯಾವ ಕಾರಣಗಳಿಗಾಗಿ ಸಾಲ ಮಾಡಿಕೊಳ್ಳುತ್ತಾರೆ ಎಂಬುದರ ಮಾಹಿತಿಗಾಗಿ ಸರ್ ಫೆಡ್ರರಿಕ್ ನಿಕೋಲ್‌ಸನ್ ಅವರಿಗೆ ಒಂದು ವರದಿಯನ್ನು ಸಿದ್ಧಪಡಿಸುವಂತೆ ಕ್ರಿ.ಶ. ೧೯೩೭ರಲ್ಲಿ ನೇಮಿಸಿದರು. ನಿಜಾಂ ಸರ್ಕಾರದ ಆದೇಶದಂತೆ ಸರ್ ಫೆಡರಿಕ್ ರೈತರ ಋಣಭಾರತ್ವದ ಕುರಿತ ಅಧ್ಯಯನ ನಡೆಸಿ ಉತ್ತಮ ಬೆಳೆ ಬಂದ ವರ್ಷದಲ್ಲಿ ಇಲ್ಲಿನ ರೈತರು ವಕೀಲರ ಫೀಜು ಮತ್ತು ಕೋರ್ಟಿನ ವೆಚ್ಚಕ್ಕಾಗಿ ಸಾಲ ಮಾಡಿದರೆ, ಕೆಳವರ್ಗದವರು ಕುಡಿತಕ್ಕಾಗಿ ಸಾಲ ಮಾಡುವವರಾಗಿದ್ದರಿಂದ ರೈತರು ಋಣಭಾರತ್ವದಲ್ಲಿ ಸಿಲುಕಿಕೊಳ್ಳುತ್ತಿದ್ದಾರೆ ಎಂಬ ಸ್ಪಷ್ಟ ಚಿತ್ರಣವನ್ನು ನೀಡಿದನು. ಈ ವರದಿಯನ್ನು ಆಧರಿಸಿ ನಿಜಾಂ ಸರ್ಕಾರ ಇಲ್ಲಿನ ರೈತರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು ಮುಂದಾಯಿತು. ಇದರ ಫಲವಾಗಿ ಗಡಿಗ್ರಾಮಗಳಲ್ಲಿನ ಋಣಭಾರತ್ವ ತಕ್ಕಮಟ್ಟಿಗೆ ಹತೋಟಿಗೆ ಬಂದಿತು.

ಇಂದು ಈ ಗಡಿಗ್ರಾಮಗಳಲ್ಲಿ ಒಣಬೇಸಾಯ ಪದ್ಧತಿ(ಮಳೆಯಾಶ್ರಿತ)ಯಲ್ಲಿ ತೊಗರೆ, ಕಡಲೆ, ಉದ್ದು, ಸೂರ್ಯಕಾಂತಿ, ಜೋಳ, ಎಳ್ಳು, ಹೆಸರು ಮುಂತಾದ ಆರ್ಥಿಕ ಬೆಳೆಗಳನ್ನು ಮತ್ತು ನೀರಾವರಿ(ಕೆರೆ, ಹಳ್ಳ, ಕೊಳವೆಬಾವಿ)ಯಲ್ಲಿ ಭತ್ತವನ್ನು ಬೆಳೆಯುತ್ತಾರೆ. ಈ ಬೆಳೆಗಳಿಂದಾಗಿ ಇಲ್ಲೆಲ್ಲ ದೊಡ್ಡ ದೊಡ್ಡ ಬೇಳೆ ಕಾರ್ಖಾನೆಗಳು, ಅಕ್ಕಿಗಿರಣಿಗಳು ಕಾರ್ಯನಿರ್ವಹಿಸುವುದರೊಂದಿಗೆ ಸ್ಥಳೀಯರಿಗೆ ದಿನಗೂಲಿ ಉದ್ಯೋಗವನ್ನು ಸೃಷ್ಟಿಸಿವೆ. ಫಲವತ್ತಾದ ಕಪ್ಪುಭೂಮಿಯನ್ನು ಹೊಂದಿದ ಕೃಷಿಕರು, ನೈಸರ್ಗಿಕ (ಬರಗಾಲ, ಮಳೆಯ ಅಭಾವ) ಮತ್ತು ಮಾನವ ನಿರ್ಮಿತ (ಸಾಂಪ್ರದಾಯಿಕ ಕೃಷಿಪದ್ಧತಿ, ಕೃಷಿಮಾರುಕಟ್ಟೆ, ದಲ್ಲಾಳಿ, ಬೆಂಬಲ ಬೆಲೆ) ಕಾರಣಗಳಿಂದಾಗಿ ಆರ್ಥಿಕವಾಗಿ ಸಬಲರಾಗಿಲ್ಲ. ಕ್ರಿ.ಶ. ೧೯೯೯ರಲ್ಲಿ ಮಳೆಯ ಅಭಾವ ದಿಂದಾಗಿ ಇಲ್ಲಿನ ಅನೇಕ ಕೃಷಿಕರಿಗೆ ಸಾವಿರಾರು ಎಕರೆ ತೊಗರೆ ಬೆಳೆ ಕೈಕೊಟ್ಟಿತು. ಇದಕ್ಕೆ ಸರ್ಕಾರ ಆರ್ಥಿಕ ಸಹಾಯ ಮಾಡಲು ಮುಂದಾಗಿ ಎಕರೆಗೆ ೩೫೦ ರೂಪಾಯಿಗಳನ್ನು ನೀಡಿತು. ಆದರೆ ಒಬ್ಬ ರೈತ ಒಂದು ಎಕರೆಯಲ್ಲಿ ಸುಮಾರು ಕನಿಷ್ಟವೆಂದರೂ ೩ ಕ್ವಿಂಟಾಲ್ ತೊಗರೆಯನ್ನು ಬೆಳೆಯುತ್ತಾರೆ. ಅದಕ್ಕಾಗಿ ರೈತ ೩-೪ ಸಾವಿರ ರೂಪಾಯಿಗಳನ್ನು ಖರ್ಚು ಮಾಡಿರುತ್ತಾರೆ. ಹೀಗಿದ್ದು ಸರ್ಕಾರ ನೀಡಿದ ೩೫೦ ರೂಪಾಯಿ ಯಾವ ಲೆಕ್ಕಕ್ಕೂ ಸರಿಹೋಗದೆ, ಬೆಳೆ ವೈಫಲ್ಯದಿಂದಾಗಿ ಮತ್ತು ಹಳ್ಳಿಯ ಸಾಹುಕಾರರಿಂದ ಕೃಷಿಗಾಗಿ ತೆಗೆದುಕೊಂಡ ಸಾಲದ ಬಾಧೆಯಿಂದ ಕಂಗೆಟ್ಟ ಸಾವಿರಾರು ರೈತರು ನೇಣಿಗೆ ಶರಣು ಹೋಗಿ ಆತ್ಮಹತ್ಯೆ ಮಾಡಿಕೊಂಡರು. ಆತ್ಮಹತ್ಯೆ ಮಾಡಿಕೊಂಡ ಕುಟುಂಬಗಳಿಗೆ ಸರ್ಕಾರ ಒಂದಿಷ್ಟು ಹಣ ನೀಡಿ ಸಾಂತ್ವನ ಹೇಳಿತಾದರೂ ರೈತರ ಆತ್ಮಹತ್ಯೆಗಳಿಗೆ ಪರಿಹಾರಗಳನ್ನು ಹುಡುಕುವಲ್ಲಿ ಸರ್ಕಾರ ವಿಫಲವಾಯಿತು.

## ಗಡಿಗ್ರಾಮಗಳಲ್ಲಿನ ಮುಖ್ಯ ಬೆಳೆಗಳು ಮತ್ತು ಅವುಗಳ ವಿಸ್ತೀರ್ಣ (ಹೆಕ್ಟೇರುಗಳಲ್ಲಿ)

ಕೋಷ್ಟಕ-೭

| ಗಡಿ ತಾಲೂಕುಗಳು | ಭತ್ತ | ಜೋಳ | ಸಜ್ಜೆ | ಗೋಧಿ | ಒಟ್ಟು ಏಕದಳ ಧಾನ್ಯಗಳು | ಕಡಲೆ | ತೊಗರಿ | ಒಟ್ಟು ದ್ವಿದಳ ಧಾನ್ಯಗಳು | ಶೇಂಗಾ |
|---|---|---|---|---|---|---|---|---|---|
| ಚಿಂಚೋಳಿ | ೧೭೨ | ೧೦,೫೫೫ | ೭೮೯ | ೨೯೮ | ೧೧,೯೧೪ | ೫,೧೩೨ | ೯,೯೫೭ | ೨೪,೧೮೪ | ೧೯೭ |
| ಸೇಡಂ | ೨೦೭ | ೮,೪೪೯ | ೭೫ | ೧೪೩ | ೯,೧೭೧ | ೨,೧೩೩ | ೭೩,೧೬೬ | ೧೧,೦೭೨ | ೩೨೮.೩೩ |
| ಯಾದಗೀರ | ೧,೬೧೯ | ೧೩,೨೨೩ | ೮೮೩ | ೩೬.೬೦ | ೧೬,೬೦೫ | ೧೮೭೩.೩ | ೪೧೮೦ | ೧೦೨೩೪.೬ | ೫೦೩೪ |
| ಒಟ್ಟು ೧೦೦ (ಹೆಕ್ಟೇರುಗಳಲ್ಲಿ) | ೧೯೯೮ | ೩೨೨೨೭ | ೧೭೪೭ | ೪೭೭.೬ | ೩೭೬೯೦ | ೯೧೩೮.೩ | ೨೧೪೫೩.೬ | ೪೫೪೯೦.೬ | ೫೫೫೯.೩೩ |

ಆಧಾರ : ಕೃಷಿ ಇಲಾಖೆ, ಗುಲಬರ್ಗಾ, ೨೦೦೬

೨೦೦೬ರಲ್ಲಿ ಈ ೩ ತಾಲ್ಲೂಕುಗಳಲ್ಲಿನ ಗಡಿಗ್ರಾಮಗಳಲ್ಲಿ ಭತ್ತ ೧,೯೯೮ ಹೆಕ್ಟೇರುಗಳಲ್ಲಿ, ಜೋಳ ೩೨,೨೨೭ ಹೆಕ್ಟೇರುಗಳಲ್ಲಿ, ಸಜ್ಜೆ ೧,೭೪೭ ಹೆಕ್ಟೇರುಗಳಲ್ಲಿ, ಗೋಧಿ ೪೭೭.೬ ಹೆಕ್ಟೇರುಗಳಲ್ಲಿ, ಕಡಲೆ ೯೧೩೮.೩ ಹೆಕ್ಟೇರುಗಳಲ್ಲಿ, ತೊಗರಿ ೨೧೪೫೩.೬ ಹೆಕ್ಟೇರುಗಳಲ್ಲಿ ಮತ್ತು ಶೇಂಗಾ ೫೫೫೯.೩೩ ಹೆಕ್ಟೇರುಗಳಲ್ಲಿ ಬೆಳೆಯಲಾಗುತ್ತದೆ. ಇಲ್ಲಿನ ಕೃಷಿ ಪೂರ್ಣ ಪ್ರಮಾಣದಲ್ಲಿ ಮಳೆಯಾಶ್ರಿತ ನೀರಿನಿಂದ ನಡೆಯುತ್ತದೆ. ಅಲ್ಲದೆ ಬಾವಿಗಳು, ಕೆರೆಗಳು, ಕೊಳವೆಬಾವಿ ಹಾಗೂ ನೈಸರ್ಗಿಕ ನದಿ, ಹಳ್ಳಕೊಳ್ಳಗಳು ಅಲ್ಪ ಪ್ರಮಾಣದ ನೀರಾವರಿಗೆ ಮೂಲವಾಗಿವೆ.

### ೪.೩.೨. ನೀರಾವರಿ ಬಳಕೆ :

ಈ ಭಾಗದ ಕೃಷಿ, ಬಹುತೇಕ ನೀರಾವರಿ ಸೌಲಭ್ಯ ಕಾಣದೆ ಬಳಲುತ್ತಿದೆ. ನೀರಾವರಿಗೆ ನೀರು ಮೂಲವಾಗಿದ್ದು, ಇದ್ದಂತಹ ಜಲಮೂಲಗಳನ್ನು ಮತ್ತು ನೀರನ್ನು ಸಮರ್ಪಕವಾಗಿ ಇಲ್ಲಿ ಬಳಸಿಕೊಳ್ಳಲಾಗುತ್ತಿಲ್ಲ. ಚಿಂಚೋಳಿ, ಸೇಡಂ ಮತ್ತು ಯಾದಗೀರ ತಾಲ್ಲೂಕುಗಳಲ್ಲಿ ನದಿ, ಉಪನದಿ, ಹಳ್ಳ-ಕೊಳ್ಳ, ಕೆರೆಗಳು ನೀರಿನ ಮೂಲಗಳಾಗಿದ್ದರೂ ಅವುಗಳ ಉಪಯೋಗವನ್ನು ಸಮರ್ಪಕವಾಗಿ ಬಳಸಿಕೊಳ್ಳದೆ ಕೃಷಿಯೋಗ್ಯ ಭೂಮಿಯನ್ನು ಸರಕಾರಗಳು ಬರಡಾಗಿಸುತ್ತಿವೆ.

**ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ನೀರಾವರಿ ಸೌಲಭ್ಯ**

ಕೋಷ್ಟಕ-೮

| ತಾಲೂಕುಗಳು | ನೀರಾವರಿಯಾದ ನಿವ್ವಳ ಪ್ರದೇಶ ಹೆಕ್ಟೇರುಗಳಲ್ಲಿ | | | |
|---|---|---|---|---|
| | ಕಾಲುವೆಗಳಿಂದ | ಕೆರೆಗಳಿಂದ | ಬಾವಿಗಳಿಂದ | ಎಲ್ಲಾ ಮೂಲಗಳಿಂದ |
| ಚಿಂಚೋಳಿ ತಾಲೂಕಿನ ಗಡಿಗ್ರಾಮಗಳಲ್ಲಿ | ೩೧೭ | ೧೮೯.೬ | ೨೩೮.೬ | ೯೦೦.೬ |
| ಸೇಡಂ ತಾಲೂಕಿನ ಗಡಿಗ್ರಾಮಗಳಲ್ಲಿ | — | ೬೮.೬ | ೩೨೮.೬ | ೪೦೦.೬ |
| ಯಾದಗೀರ ತಾಲೂಕಿನ ಗಡಿಗ್ರಾಮಗಳಲ್ಲಿ | ೮೬೪ | ೧೨೪೭.೬ | ೧೫೦೯.೬ | ೩೮೨೧.೨ |
| ಒಟ್ಟು ಕರ್ನಾಟಕ-ಆಂಧ್ರದ ೧೦೦ ಗಡಿಗ್ರಾಮಗಳಲ್ಲಿ | ೧೧೮೧ | ೧೫೦೨.೮ | ೨೦೭೬.೮ | ೫೧೨೨.೪ |

ಆಧಾರ : ನೀರಾವರಿ ಇಲಾಖೆ, ಗುಲಬರ್ಗಾ, ೨೦೦೫

೨೦೦೬ರಲ್ಲಿ ಈ ಒಟ್ಟು ೧೦೦ ಗಡಿಗ್ರಾಮಗಳಲ್ಲಿ ಕಾಲುವೆಗಳಿಂದ ೧೧೮೧ ಹೆಕ್ಟೇರು, ಕೆರೆಗಳಿಂದ ೧೫೦೨.೮ ಹೆಕ್ಟೇರು, ಬಾವಿಗಳಿಂದ ೨೦೭೬.೮ ಹೆಕ್ಟೇರು ಮತ್ತು ಇತರ ಎಲ್ಲಾ ಮೂಲಗಳಿಂದ ೫೧೨೨.೪ ಹೆಕ್ಟೇರುಗಳಿಗೆ ನೀರುಣಿಸಲಾಗುತ್ತಿದೆ.

ಇಷ್ಟಲ್ಲದೆ ಈ ಪ್ರದೇಶದಲ್ಲಿ ನಾಲ್ಕು ದೊಡ್ಡ ದೊಡ್ಡ ಯೋಜನೆಗಳನ್ನು ಜಾರಿಗೊಳಿಸಿದರು. ಆದರೆ ಅವು ನಿರೀಕ್ಷೆ ಇಟ್ಟುಕೊಂಡಷ್ಟು ಗುರಿ ಮುಟ್ಟಲಿಲ್ಲ. ಇದಕ್ಕೆ ಕಾರಣಗಳೇನು ಎಂಬುದನ್ನು ಇಲ್ಲಿ ನೋಡಬಹುದು.

## ಕರ್ನಾಟಕ-ಆಂಧ್ರ ಗಡಿಭಾಗದಲ್ಲಿರುವ ನಾಲ್ಕು ನೀರಾವರಿ ಯೋಜನೆಗಳು

ಕೋಷ್ಟಕ-೯

| ಯೋಜನೆ | ಬಳಕೆ (ಟಿ.ಎಂ.ಸಿಗಳಲ್ಲಿ) | | | ಹಣಕಾಸು (ಲಕ್ಷ ರೂಗಳಲ್ಲಿ) | | | ಸಾಮರ್ಥ್ಯ (ಹೆಕ್ಟೇರುಗಳಲ್ಲಿ) | | |
|---|---|---|---|---|---|---|---|---|---|
| | ಯೋಜಿತ | ೩/೨೦೧೧ರ ವರೆಗೆ ಬಳಕೆ | ಬಾಕಿ | ಅನುಮೋದಿತ ಅಂದಾಜು ವೆಚ್ಚ | ಚಾಲ್ತಿ ವೆಚ್ಚ | ೩/೨೦೧೧ರ ವರೆಗೆ ಖರ್ಚು ಬಾಕಿ | ಯೋಜಿತ | ೩/೨೦೦೭ರ ವರೆಗೆ ಸೃಜಿಸಲಾದ | ಬಾಕಿ |
| ಚಂದ್ರಪಳ್ಳಿ | ೧೯ | ೧೯ | ೦ | ೧೮೫ | ೧೮೫ | ೧೮೫ | ೫೨೨೩ | ೫೨೨೩ | ೦ |
| ಹತ್ತಿಕುಣಿ | ೩೫ | ೩೫ | ೦ | ೮೪ | ೮೪ | ೮೪ | ೨೧೪೫ | ೨೧೪೫ | ೦ |
| ಭೀಮಾ ಏತ | ೬ | ೦ | ೬ | ೯೪೧೭ | ೧೮೭೫೮ | ೬೨೪೨೬ | ೨೪೨೫೧ | ೦ | ೨೪೨೫೧ |
| ಭೀಮಾ ಪ್ಲೋ | ೯ | ೦ | ೯ | .... | ೧೮೫೧೮ | ೪೯.೪೫ | ೪೨೧೭೦ | ೦ | ೪೨೧೭೦ |

ಆಧಾರ : ಗುಲಬರ್ಗಾ ಜಿಲ್ಲಾ ಗೆಜೆಟಿಯರ್, ೧೯೯೭

ಕ್ರಿ.ಶ. ೨೦೦೬ರ ಈ ಮೇಲಿನ ಅಂಕಿಅಂಶಗಳು ಗಡಿಪ್ರದೇಶದಲ್ಲಿನ ನೀರಾವರಿ ಯೋಜನೆಗಳ ಸ್ಥಿತಿಗತಿಗಳನ್ನು ತೋರಿಸಿದರೆ, ಇನ್ನೂ ಈ ಗಡಿಭಾಗದಲ್ಲಿ ಅನೇಕ ಕೆರೆ, ಹಳ್ಳಕೊಳ್ಳಗಳು ಇದ್ದು ಅವುಗಳನ್ನು ಸಮರ್ಪಕವಾಗಿ ಉಪಯೋಗಿಸಿಕೊಳ್ಳುತ್ತಿಲ್ಲ. ಕೆರೆಗಳು ಹೂಳು ತುಂಬಿ ಎಷ್ಟೋ ದಶಕಗಳಾಗಿವೆ. ಅಲ್ಲಲ್ಲಿ ದೊಡ್ಡ ಯೋಜನೆಗಳಿಗೆ ಕಾಲುವೆಗಳನ್ನು ನಿರ್ಮಿಸಿದರು, ಈ ಕಾಲುವೆಗಳಲ್ಲಿ ಇವತ್ತಿಗೂ ನೀರು ಹರಿದಿಲ್ಲ. ಹರಿದಿದ್ದೆಲ್ಲ ಕಾಮಗಾರಿ ಗುತ್ತಿಗೆದಾರರ ಮನೆಗಳಿಗೆ. ಇನ್ನು ಇವುಗಳ ದಾಖಲೆಗಳಲ್ಲಿ ಕಾಮಗಾರಿ ಮುಗಿದು ಹಣ ಎತ್ತಲಾಗಿರುತ್ತದೆ. ಆದರೆ ಖುದ್ದು ಈ ಕಾಮಗಾರಿಗಳನ್ನು ನೋಡಿದರೆ ಕೆಲಸ ಮಾಡಿದ ಅವಶೇಷಗಳೇ ಕಂಡುಬರುವುದಿಲ್ಲ. ಪುಟಪಾಕ, ಮುಧೋಳ, ಕೊಲಕುಂದಾ, ಕಡಚರ್ಲಾ, ಮೊತಕಪಲ್ಲಿ ಮುಂತಾದ ಗಡಿಗ್ರಾಮಗಳಲ್ಲಿ ದೊಡ್ಡ ದೊಡ್ಡ ಕೆರೆಗಳಿವೆ. ಇವುಗಳನ್ನು ಅಭಿವೃದ್ಧಿಪಡಿಸಿ ಕೃಷಿಗೆ ನೀರನ್ನು ಒದಗಿಸ ಬೇಕಾಗಿದೆ. ಇದ್ದಂತಹ ನೀರಾವರಿ ಮೂಲಗಳನ್ನು ಸಮರ್ಪಕವಾಗಿ ಬಳಸಿಕೊಳ್ಳದೆ ಇರುವುದರಿಂದ ರೈತರು ಮಳೆಯನ್ನು ನಂಬಿ, ಒಣಬೇಸಾಯ ಪದ್ಧತಿಯನ್ನು ಅನುಸರಿಸಿ, ಮಳೆಯೊಂದಿಗೆ ಜೂಜಾಟದಲ್ಲಿ ತೊಡಗಿದ್ದಾರೆ. ಕೃಷಿಯನ್ನು ಅವಲಂಬಿಸಿರುವ ಕೃಷಿಕಾರ್ಮಿಕರು ಮಳೆ ಬಾರದೆ, ಬರಗಾಲ ಸಂಭವಿಸುವ ಮುನ್ಸೂಚನೆ ಕಂಡುಬಂದ ಕೂಡಲೆ ಹತ್ತಿರದ ಬಷಿರಾಬಾದ್, ಹೈದರಾಬಾದ್, ಕೊಡಂಗಲ್, ತಾಂಡೂರು, ನಾರಾಯಣಪೇಟೆ, ಮೆಹಬೂಬನಗರ ಪ್ರದೇಶಗಳಿಗೆ ಹೊಟ್ಟೆಪಾಡಿಗಾಗಿ ಗುಳೆ ಹೋಗುತ್ತಾರೆ. ಕೃಷಿಕಾರ್ಮಿಕರ ಈ ಕೊರತೆಯಿಂದಾಗಿ ಕೃಷಿಕರು ತಮ್ಮ ಕೃಷಿಯೋಗ್ಯ ಭೂಮಿಗಳನ್ನು ಆರ್ಥಿಕ ಚಟುವಟಿಕೆ (ಕಲ್ಲಿನ ಗಣಿ, ಸಿಮೆಂಟ್ ಕಾರ್ಖಾನೆಗಳಿಗೆ ಮಾರಾಟ ಮಾಡುವುದು)ಗಳಿಗೆ ವರ್ಗಾಯಿಸುತ್ತಿರುವುದು ಮೀರ್ಯಾಣ, ಬಟಗೇರಾ, ಮದಕಲ್, ಕುರುಕುಂಟಾ, ಕೋಡ್ಲಾಗಳಲ್ಲಿ ಕಂಡುಬರುತ್ತಿದೆ. ದೊಡ್ಡ ನಗರಗಳಿಗೆ ಗುಳೆ ಹೋಗುವ ಕೃಷಿಕರು ನಗರವಾಸಿಗಳಾಗಿ, ಕಟ್ಟಡ ಕೆಲಸ, ಕಾರ್ಖಾನೆ, ಹೊಟೇಲ್ ಕೆಲಸಗಳಲ್ಲಿ ತೊಡಗಿ ಕೊಂಡು ತಮ್ಮ ಮೂಲ ಅವಶ್ಯಕತೆಗಳನ್ನು ಅಲ್ಲಿ ಪೂರೈಸಿಕೊಳ್ಳುತ್ತಿದ್ದಾರೆ.

### ೪.೩.೩. ಕೃಷಿ ಮಾರುಕಟ್ಟೆ :

ಕಷ್ಟಪಟ್ಟು ಒಳ್ಳೆಯ ಬೆಳೆಯನ್ನು ಬೆಳೆದ ಕೃಷಿಕನಿಗೆ ಇಲ್ಲಿನ ಕೃಷಿಮಾರುಕಟ್ಟೆ ದೊಡ್ಡ ಆಘಾತ ನೀಡುತ್ತಿದೆ. ಕೃಷಿಮಾರುಕಟ್ಟೆ ಮತ್ತು ಕೃಷಿನೀತಿಗಳು ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿದ್ದು, ರೈತ

ತಾನು ಬೆಳೆದ ಬೆಳೆಗೆ ಯೋಗ್ಯರೀತಿಯಲ್ಲಿ ಬೆಲೆ ಸಿಗದೆ, ಬೆಳೆ ಪ್ರಾರಂಭದಿಂದ ಬೆಳೆ ಬೆಳೆಯುವವರೆಗೆ ವಿನಿಯೋಗಿಸಿದ ಹಣವೂ ಅವನ ಕೈಸೇರದ ರೈತ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ಇಂತಹ ರೈತರ ಆತ್ಮಹತ್ಯೆಯ ಪ್ರಕರಣಗಳ ಅಂಕಿ-ಅಂಶ ಈ ಭಾಗದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಒಳ್ಳೆ ಮಳೆಯಾಗಿ ಬಂಪರು ಬೆಳೆ ಬಂದಾಗ ಮಾರುಕಟ್ಟೆಯಲ್ಲಿನ ಕೃತಕತೆಯಿಂದಾಗಿ, ಮಾರುಕಟ್ಟೆ ದಲ್ಲಾಳಿಗಳ ಮಧ್ಯಸ್ಥಿಕೆಯಿಂದ ತನಗೆ ಬರಬೇಕಾದ ಲಾಭಾಂಶದ ಭಾಗ ಅವನ ಕೈ ಸೇರುತ್ತಿಲ್ಲ. ಕರ್ನಾಟಕ ಕೃಷಿಮಾರುಕಟ್ಟೆ ಮತ್ತು ಆಂಧ್ರದ ಕೃಷಿಮಾರುಕಟ್ಟೆಯನ್ನು ಇಲ್ಲಿನ ರೈತ ಅವಲೋಕಿಸಿದಾಗ ಅವನಿಗೆ ಕರ್ನಾಟಕದ ಕೃಷಿಮಾರುಕಟ್ಟೆ ಗಿಂತ ಪಕ್ಕದ ಆಂಧ್ರದ ಕೃಷಿಮಾರುಕಟ್ಟೆ ಆಕರ್ಷಿತಗೊಳಿಸುತ್ತದೆ. ಕರ್ನಾಟಕದ ಮಾರುಕಟ್ಟೆಯಲ್ಲಿ ದಲ್ಲಾಳಿ ಸಮಸ್ಯೆ, ದುಬಾರಿ ಸಾರಿಗೆ ಸಮಸ್ಯೆ, ಅಂಗಡಿ ಮಾಲಿಕರ ಕಮಿಷನ್ ಸಮಸ್ಯೆ ಮತ್ತು ಮಾರುಕಟ್ಟೆಯಲ್ಲಿನ ಕೂಲಿಕಾರರ ೨%ರಷ್ಟರ ಧಾನ್ಯ ಸ್ವಚ್ಛಗೊಳಿಸುವ ಶುಲ್ಕಗಳಂತಹ ಸಮಸ್ಯೆಗಳಿಂದಾಗಿ ರೈತನಿಗೆ ಬರಬೇಕಾದ ಲಾಭಾಂಶದ ಪ್ರಮಾಣ ಸೋರಿಕೆಯಾಗುತ್ತಿದೆ. ಕೋಲಕುಂದಾ, ಮೋತಕಪಲ್ಲಿ, ಗುರುಮಠಕಲ್ಲಿನ ಗಡಿಗ್ರಾಮದ ರೈತರು ೧೦೦ ಕಿ.ಮೀ. ದೂರದ ಗುಲಬರ್ಗಾ ಕೃಷಿ ಮಾರುಕಟ್ಟೆಗೆ ತಮ್ಮ ಬೆಳೆಯನ್ನು ಕಳಿಸಲು ಸುಮಾರು ೩೦ ರಿಂದ ೪೦ ರೂಪಾಯಿ ಪ್ರತಿ ಕ್ವಿಂಟಲ್‌ಗೆ ಸಾರಿಗೆ ಶುಲ್ಕವನ್ನು ನೀಡಬೇಕಾಗುತ್ತದೆ. ಕೃಷಿ ಮಾರುಕಟ್ಟೆಗೆ ರೈತನ ಬೆಳೆ ಬಂದಾಗ ಅಂಗಡಿ ಮಾಲಿಕ ೧೦-೧೫ ಕಿ.ಲೋ. ನಮೂನೆ(ಶ್ಯಾಂಪಲ್)ಗಾಗಿ ಕಾಳುಗಳನ್ನು ತೆಗೆದುಕೊಳ್ಳುತ್ತಾನೆ. ಅಲ್ಲದೆ ಅಲ್ಲಿನ ಕೃಷಿಕೂಲಿಕಾರರಿಗೆ ಧಾನ್ಯದ ಸ್ವಚ್ಛತೆಗಾಗಿ ಒಟ್ಟು ಮಾರಿದ ಬೆಲೆಯ ಶೇ. ೨ರಷ್ಟು ದುಡ್ಡು ಸಂದಾಯ ಮಾಡಬೇಕಾಗುತ್ತದೆ. ಇಷ್ಟಿದ್ದು ರೈತರಿಗೆ ಮಧ್ಯ ಹಣ ಬೇಕಾದಾಗ ಸುಲಭವಾಗಿ ಸಾಲ ನೀಡಲು ಇಲ್ಲಿನ ಅಂಗಡಿ ಮಾಲಿಕರು ಹಿಂದೇಟು ಹಾಕುತ್ತಾರೆ. ಈ ಎಲ್ಲ ಸಮಸ್ಯೆಗಳು ಆಂಧ್ರದ ತಾಂಡೂರು, ಕೊಡಂಗಲ್, ನಾರಾಯಣಪೇಟೆಗಳ ಕೃಷಿಮಾರುಕಟ್ಟೆಯಲ್ಲಿ ಎದುರಾಗುವುದಿಲ್ಲ.

ಆಂಧ್ರದ ಅಂಗಡಿ ಮಾಲಿಕರು ನೆರವಾಗಿ ಈ ಗಡಿಗ್ರಾಮಗಳಿಗೆ ಬಂದು ಬೆಳೆಗಳಿಗೆ ಕರ್ನಾಟಕ ಕೃಷಿಮಾರುಕಟ್ಟೆಯ ಬೆಲೆ ನೀಡಿ, ಅಲ್ಲಿಯೇ ತೂಕ ಮಾಡಿ ನೇರವಾಗಿ ಬೆಳೆಯನ್ನು ತೆಗೆದುಕೊಂಡು ಹೋಗುತ್ತಾರೆ. ಈ ಆಂಧ್ರದ ಮಾಲಿಕರಿಗೆ ದುಬಾರಿ ಸಾರಿಗೆ ವೆಚ್ಚ ಬೀಳುವುದಿಲ್ಲ. ಏಕೆಂದರೆ ತಾಂಡೂರು ೪೦ ಕಿ.ಮೀ. ಕೊಡಂಗಲ್ ೩೦ ಕಿ.ಮೀ. ನಾರಾಯಣಪೇಟೆ ೩೦ ಕಿ.ಮೀ. ಅಲ್ಲದೇ ಈ ಆಂಧ್ರದ ಅಂಗಡಿ ಮಾಲಿಕರು ನೇರವಾಗಿ ಇಲ್ಲಿನ ಹಳ್ಳಿಗೆ ಬಂದು ಬೆಳೆ ಖರೀದಿಸುವುದರಿಂದ ದಲ್ಲಾಳಿ ಸಮಸ್ಯೆ, ಕೂಲಿಕಾರ ಶೇ. ೨ರ ಧಾನ್ಯ ಸ್ವಚ್ಛತೆಯ ಶುಲ್ಕ ಇಲ್ಲಿನ ರೈತರ ಮೇಲೆ ಬೀಳುವುದಿಲ್ಲ. ಮತ್ತು ರೈತರಿಗೆ ಅವಶ್ಯಕವಾದ ಹಣವನ್ನು ಬೆಳೆ ಬರುವುದಕ್ಕಿಂತ ಮುಂಚೆ ಆಂಧ್ರದ ಮಾಲಿಕರು ಸಾಲ ರೂಪದಲ್ಲಿ ನೀಡುತ್ತಾರೆ. ಈ ಎಲ್ಲ ಕಾರಣಗಳಿಂದಾಗಿ ಇಲ್ಲಿನ ರೈತರು ಸಂಪೂರ್ಣವಾಗಿ ಆಂಧ್ರದ ಮಾರುಕಟ್ಟೆ ಜೊತೆ ಸಂಪರ್ಕವಿಟ್ಟುಕೊಂಡಿದ್ದಾರೆ. ಕರ್ನಾಟಕ ಸರ್ಕಾರ ಈ ಬಗ್ಗೆ ತನ್ನ ಅಸಡ್ಡತೆಯನ್ನು ಹೀಗೆ ಮುಂದುವರೆಸಿದರೆ ಒಂದು ದಿನ ಈ ಭಾಗದ ಉಗ್ರಾಣಗಳಲ್ಲಿ ಸಂಗ್ರಹವಾಗಬೇಕಿದ್ದ ಎಲ್ಲ ಧಾನ್ಯ ಆಂಧ್ರದ ಉಗ್ರಾಣಗಳಲ್ಲಿ ಸಂಗ್ರಹವಾಗಿರುತ್ತವೆ.

೪.೩.೪. **ಉತ್ಪಾದನಾ ಘಟಕಗಳು :**

ಕೃಷಿ ಚಟುವಟಿಕೆಗಳನ್ನು ಹೊರತುಪಡಿಸಿ ಇಲ್ಲಿನ ಜನರು ತಮ್ಮ ಆರ್ಥಿಕತೆಯ ಮೂಲವನ್ನು ಸ್ಟೋನ್ ಪಾಲಿಷಿಂಗ್, ಸ್ಟೋನ್ ಕಟಿಂಗ್ ಕೈಗಾರಿಕೆಗಳಿಂದ, ಬೀಡಿ ಕಾರ್ಖಾನೆಗಳಿಂದ, ಕೈಮಗ್ಗಗಳಿಂದ, ತೊಗರಬೇಳೆ ಕಾರ್ಖಾನೆಗಳಿಂದ ಮತ್ತು ದೊಡ್ಡ ದೊಡ್ಡ ಸಿಮೆಂಟ್ ಕಾರ್ಖಾನೆಗಳಿಂದ ಪೂರೈಸಿ ಕೊಳ್ಳುತ್ತಿದ್ದಾರೆ. ಸುಮಾರು ೯ ಬೀಡಿ ಕಟ್ಟುವ ಕಾರ್ಖಾನೆಗಳು, ೧೦ ಜಿನ್ನಿಂಗ್ ಮತ್ತು ಪ್ರೆಸ್ಸಿಂಗ್ ಫ್ಯಾಕ್ಟರಿ, ೧೩ ತೊಗರಬೇಳೆ ಕಾರ್ಖಾನೆಗಳು, ೧೮ ಸ್ಟೋನ್ ಡ್ರಸ್ಸಿಂಗ್ ಫ್ಯಾಕ್ಟರಿ, ೨೦ ಕಲ್ಲಿನ ಕ್ವಾರಿಗಳು, ೧೨ ಆಯಿಲ್ ಮಿಲ್ಸ್, ೪ ಬೃಹತ್ ಪ್ರಮಾಣದ ಸಿಮೆಂಟ್ ಕಂಪನಿಗಳು, ೧೮ ಸಣ್ಣ ಪ್ರಮಾಣದ ಸಿಮೆಂಟ್ ಕಂಪನಿಗಳು, ೫ ಕೈಮಗ್ಗ ಕೇಂದ್ರಗಳು ಈ ಭಾಗದಲ್ಲಿ ಅಸ್ತಿತ್ವದಲ್ಲಿವೆ. ಇವು ಉದ್ಯೋಗವನ್ನು ಮತ್ತು ಆರ್ಥಿಕ ಭದ್ರತೆಯನ್ನು ಸ್ಥಳೀಯರಿಗೆ ಕಲ್ಪಿಸಿವೆ.

ಇವು ಹೈದರಾಬಾದ್ ನಿಜಾಂನ ಆಳ್ವಿಕೆಯ ಕಾಲದಿಂದಲೂ ಕೆಲಸ ನಿರ್ವಹಿಸುತ್ತಿದ್ದವೆಂಬುದು ಇಲ್ಲಿ ಗಮನಿಸಬೇಕಾದದ್ದು. ಸಣ್ಣ, ಮಧ್ಯಮ ಮತ್ತು ದೊಡ್ಡ ಉದ್ದಿಮೆಗಳಿಗೆ ಪರವಾನಿಗೆ ಕೊಟ್ಟು ಅವು ಆರ್ಥಿಕ ಮುಗ್ಗಟ್ಟು ಎದುರಿಸಿದಾಗ ಸರ್ಕಾರದಿಂದ ಆರ್ಥಿಕ ಸಹಾಯ-ಸಹಕಾರಗಳನ್ನು ನಿಜಾಮ ಸರಕಾರ ನೀಡುತ್ತಿತ್ತು. ಆದ್ದರಿಂದಲೇ ನಿಜಾಮನ ಆಡಳಿತದ ಉಪಕೇಂದ್ರಗಳಲ್ಲೊಂದಾದ ಯಾದಗೀರ ಪಟ್ಟಣ ಮತ್ತು ಈ ತಾಲ್ಲೂಕಿನ ಗಡಿಗ್ರಾಮಗಳಲ್ಲಿ ಬೀಡಿ ಕಟ್ಟುವ ಉದ್ಯಮ ಬಹಳ ಹಿಂದಿನಿಂದಲೂ ಚಾಲ್ತಿಯಲ್ಲಿತ್ತು. ಕ್ರಿ.ಶ. ೧೯೬೪-೬೫ರಲ್ಲಿ ಯಾದಗೀರಿ ತಾಲ್ಲೂಕಿನಲ್ಲಿ ಒಟ್ಟು ೯ ಬೀಡಿ ಕಾರ್ಖಾನೆ ಗಳಿದ್ದವು. ಇವುಗಳಲ್ಲಿ ಸುಮಾರು ೪೦೦ ಕಾರ್ಮಿಕರು ಕೆಲಸ ಮಾಡುತ್ತಿದ್ದರು. ಇವುಗಳ ವಾರ್ಷಿಕ ಉತ್ಪಾದನೆ ಸುಮಾರು ೩೦,೦೦೦ ಪೌಂಡುಗಳಷ್ಟಿತ್ತು. ಹೀಗೆ ಇಲ್ಲಿ ತಯಾರಾದ ಬೀಡಿಗಳು ಬೀದರ್, ರಾಯಚೂರು, ಗುಲಬರ್ಗಾ, ಕೊಡಂಗಲ್, ತಾಂಡೂರ, ನಾರಾಯಣಪೇಟೆ, ಮೆಹಬೂಬನಗರ ಜಿಲ್ಲೆ ಗಳಲ್ಲಿನ ಮಾರುಕಟ್ಟೆಯಲ್ಲಿ ಅಪಾರ ಬೇಡಿಕೆ ಪಡೆದಿದ್ದವು. ಈ ಚದುರಿದ ಬೀಡಿ ಕಾರ್ಖಾನೆಗಳನ್ನು ಒಟ್ಟು ಮಾಡಿ ಬೀಡಿ ಕಾರ್ಮಿಕರ ಸಹಕಾರ ಸಂಘವನ್ನು ೬೧೦ ರೂಪಾಯಿ ಷೇರು ಬಂಡವಾಳ ಹಾಗೂ ೪೧ ಕಾರ್ಮಿಕ ಸದಸ್ಯರೊಂದಿಗೆ ನಿಜಾಮ ಅರಸರ ಕಾಲದಲ್ಲಿ ಅಸ್ತಿತ್ವಕ್ಕೆ ತರಲಾಗಿತ್ತು.

ಸುಮಾರು ಕ್ರಿ.ಶ. ೧೯೬೬ರಲ್ಲಿ ಇಡೀ ಗುಲಬರ್ಗಾ ಜಿಲ್ಲೆಯಲ್ಲಿ ಒಟ್ಟು ೯ ಬೀಡಿ ಕಾರ್ಖಾನೆಗಳಿದ್ದು, ಅವುಗಳಲ್ಲಿ ೮ ಯಾದಗೀರ ತಾಲ್ಲೂಕಿನಲ್ಲಿದ್ದುದ್ದು ಇಲ್ಲಿನ ವಿಶೇಷ. ಈ ೯ ಕಾರ್ಖಾನೆಗಳಲ್ಲಿ ೬೬ ಕಾರ್ಮಿಕರು ಫ್ಯಾಕ್ಟರಿಯಲ್ಲಿ ಮತ್ತು ೫೬೦ ಕಾರ್ಮಿಕರು ತಮ್ಮ ಮನೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಈ ಕಾರ್ಮಿಕರೆಲ್ಲರಲ್ಲಿ ಬಹುತೇಕ ಬಹುಪಾಲು ಮುಸ್ಲಿಂರಾಗಿದ್ದರು.

ಕ್ರಿ.ಶ. ೧೯೯೫-೯೬ರಲ್ಲಿ ಯಾದಗೀರನಲ್ಲಿ ನೋಂದಣಿಯಾಗಿದ್ದ ಬೀಡಿ ಕಾರ್ಖಾನೆಗಳು ಮತ್ತು ಕಾರ್ಮಿಕರ ಸಂಖ್ಯೆ

ಕೋಷ್ಟಕ-೧೦

| ಕ್ರ.ಸಂ. | ಬೀಡಿ ಕಾರ್ಖಾನೆಗಳ ಹೆಸರು | ಕಾರ್ಮಿಕರ ಸಂಖ್ಯೆ | | |
|---|---|---|---|---|
| | | ಪುರುಷ | ಮಹಿಳೆಯರು | ಒಟ್ಟು |
| ೧. | ಗೋಲ್ಡನ್ ಬೀಡಿ ವರ್ಕ್ಸ್, ಯಾದಗೀರಿ | ೨೫ | ೨೦೦ | ೨೨೫ |
| ೨. | ಭಾರತ ಬೀಡಿ ವರ್ಕ್ಸ್, ಯಾದಗೀರಿ | ೨೫ | ೧೮೦ | ೨೦೫ |
| ೩. | ಇಸ್ಪೇಟ ಎಕ್ಕಾ ಬೀಡಿ ವರ್ಕ್ಸ್, ಯಾದಗೀರಿ | ೧೦ | ೮೦ | ೯೦ |
| ೪. | ಸಾಂಗ್ಲಿ ಬೀಡಿಗಳು, ಯಾದಗೀರಿ | ೧೮ | ೦೫ | ೨೩ |
| ೫. | ಜಮೀಲ್ ಬೀಡಿಗಳು, ಯಾದಗೀರಿ | ೨೪ | ೦೩ | ೨೭ |
| ೬. | ನಂಬರ್ ೨ ಬೀಡಿಗಳು, ಯಾದಗೀರಿ | ೦೪ | — | ೦೪ |
| ೭. | ಮೈಕೋ ಬೀಡಿಗಳು, ಯಾದಗೀರಿ | ೦೬ | ೧೧ | ೧೭ |
| ೮. | ವಕೀಲ ಬೀಡಿಗಳು, ಯಾದಗೀರಿ | — | ೧೯ | ೧೯ |
| ೯. | ನಂಬರ್ ೧ ಬೀಡಿಗಳು, ಯಾದಗೀರಿ | — | ೨೨ | ೨೨ |
| | ಒಟ್ಟು | ೧೧೨ | ೫೨೦ | ೬೩೨ |

**ಆಧಾರ :** ಜಿಲ್ಲಾ ಕಾರ್ಮಿಕಾಧಿಕಾರಿಗಳು, ಗುಲಬರ್ಗಾ

ಆದರೆ ಸದ್ಯದ ಸಂದರ್ಭದಲ್ಲಿ ಈ ಉದ್ದಿಮೆಗಳಲ್ಲಿ ಬಹಳಷ್ಟು ಮುಚ್ಚಲ್ಪಟ್ಟಿವೆ. ಅಲ್ಲಿನ ಕೆಲಸಗಾರರು ಬೇರೆ ಬೇರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಂಕಷ್ಟ ಅನುಭವಿಸುತ್ತಿದ್ದಾರೆ.

ಈ ಗಡಿಗ್ರಾಮಗಳಲ್ಲಿ ಉತ್ಕೃಷ್ಟ ಮಟ್ಟದ ಸಿಮೆಂಟಿಗೆ ಬೇಕಾಗುವ ಸುಣ್ಣದ ಕಲ್ಲು, ಫರಸಿ ಉದ್ಯಮಕ್ಕೆ ಬೇಕಾದ ಕಲ್ಲಿನ ಗಣಿಗಳು ಮತ್ತು ಇಡೀ ಏಷ್ಯಾ ಖಂಡಕ್ಕೆ ಬೇಕಾಗುವಷ್ಟು ತೊಗರಬೇಳೆಯನ್ನು ಬೆಳೆಯಲಾಗುತ್ತದೆ. ಸರ್ಕಾರಗಳು ಮತ್ತು ಖಾಸಗಿಯವರು ಈ ಕಚ್ಚಾ ವಸ್ತುಗಳನ್ನು ಉಪಯೋಗಿಸಿಕೊಂಡು ಸಿಮೆಂಟು ಕಾರ್ಖಾನೆಗಳು, ಕಲ್ಲಿನ ಗಣಿಗಳು, ಬೇಳೆ ಕಾರ್ಖಾನೆಗಳನ್ನು ಸ್ಥಾಪಿಸಬೇಕು. ಖಾಸಗಿಯವರಿಗೆ ಇಲ್ಲಿ ಉದ್ಯಮಗಳನ್ನು ಪ್ರಾರಂಭಿಸಲು ಉತ್ತೇಜನಗಳನ್ನು ನೀಡಬೇಕು. ಈ ಕೈಗಾರಿಕೆಗಳಿಗೆ ಬೇಕಾದ ವಿದ್ಯುತ್, ನೀರು, ರಸ್ತೆ, ಮಾರುಕಟ್ಟೆಗಳನ್ನು ಒದಗಿಸಿದ್ದೇ ಆದಲ್ಲಿ ಬಂಡವಾಳಶಾಹಿಗಳು ಇಲ್ಲಿ ಬಂಡವಾಳ ಗಳನ್ನು ತೊಡಗಿಸುತ್ತಾರೆ. ಅವುಗಳಿಗೆ ಆರ್ಥಿಕ ಸಹಾಯ ಮತ್ತು ತೆರಿಗೆಯಲ್ಲಿ ರಿಯಾಯಿತಿ ನೀಡಿ, ಆಕರ್ಷಿಸಿದರೆ ದೊಡ್ಡ ದೊಡ್ಡ ಉದ್ದಿಮೆಗಳು ಸ್ಥಾಪನೆಗೊಂಡು ಗಡಿಭಾಗದ ಜನರಿಗೆ ಉದ್ಯೋಗ

ದೊರೆಯುವುದರ ಮೂಲಕ ಇವರ ಜೀವನಮಟ್ಟ ಸುಧಾರಿಸುತ್ತದೆ. ಇದಕ್ಕೆ ಗಮನಹರಿಸುವಂತಾಗಬೇಕು. ಇಲ್ಲಿನ ಜನರಿಗೆ ಬೇಕಾಗಿರುವುದು ಮುಖ್ಯವಾಗಿ ಉದ್ಯೋಗ. ಇಲ್ಲಿ ಮಾನವಶಕ್ತಿ ಅಪಾರವಾಗಿದ್ದು, ಅದಕ್ಕೆ ದುಡಿಯಲು ಅವಕಾಶ ಮಾಡಿಕೊಡಬೇಕಾಗಿದೆ. ದುಡಿಯಲು ಪ್ರಾರಂಭಿಸಿದರೆ ಇಲ್ಲಿ ಜನ ತಕ್ಕಮಟ್ಟಿನ ಆರ್ಥಿಕತೆಯನ್ನು ಪೂರೈಸಿಕೊಳ್ಳುತ್ತ ತಮ್ಮ ಆರೋಗ್ಯ, ಶಿಕ್ಷಣ ಮತ್ತಿತರ ಅಂಶಗಳಿಗೆ ಆದ್ಯತೆ ಕೊಡುತ್ತಾರೆ. ಸದ್ಯ ಈಗ ದುಡಿಯಲು ಕೆಲಸಗಳಿಲ್ಲದೆ ಗಡಿಗ್ರಾಮಗಳಲ್ಲಿನ ಜನರು ಕೆಲಸಕ್ಕಾಗಿ ದೊಡ್ಡ ದೊಡ್ಡ ಪಟ್ಟಣ ನಗರ ಪ್ರದೇಶಗಳಿಗೆ ಗುಳೆ ಹೋಗುತ್ತಿದ್ದಾರೆ. ಆದ್ದರಿಂದ ಇವರಿಗೆ ವರ್ಷವಿಡಿ ದುಡಿಯಲು ಸಿಮೆಂಟ್ ಕಾರ್ಖಾನೆ, ಗಣಿ ಉದ್ಯಮ, ಬೀಡಿ ಉದ್ಯಮ, ಬೇಳೆ ಕಾರ್ಖಾನೆಗಳನ್ನು ಇಲ್ಲಿ ಸ್ಥಾಪಿಸುವುದು ಬಹಳ ಮುಖ್ಯವಾಗಿದೆ. ಕೇವಲ ಬೆಂಗಳೂರಿನ ಸುತ್ತಮುತ್ತ ಸ್ಥಾಪನೆಗೊಳ್ಳುವ ದೊಡ್ಡ ದೊಡ್ಡ ಉದ್ಯಮಗಳು ಇಂತಹ ಹಿಂದುಳಿದ ಗಡಿಪ್ರದೇಶಗಳಲ್ಲಿ ಸ್ಥಾಪನೆಗೊಳ್ಳುವುದು ಇಲ್ಲಿನ ಬಹುಮುಖ್ಯ ಅವಶ್ಯಕತೆಯಾಗಿದೆ.

**೪.೩.೫. ಕರ್ನಾಟಕ ಆಂಧ್ರ ಗಡಿಭಾಗದ ಆರ್ಥಿಕಾಭಿವೃದ್ಧಿಗೆ ಸಲಹೆಗಳು :**

ಈ ಮುಂಚೆ ಹೇಳಿರುವಂತೆ, ಈ ಗಡಿಗ್ರಾಮಗಳ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು ಕೃಷಿಗೆ ಬೇಕಾಗುವ ನೀರು, ಕೈಗಾರಿಕೆಗೆ ಬೇಕಾಗುವ ಖನಿಜಗಳು, ಅರಣ್ಯ ಸಂಪನ್ಮೂಲಗಳು, ಬಂಡವಾಳ ಮತ್ತು ಯಂತ್ರಗಳ ಪೂರೈಕೆ, ಸೇವಾ ಮತ್ತು ನಿರ್ವಹಣೆ ಇವುಗಳೆರಡರ ಅಗತ್ಯ ಕೌಶಲ್ಯಗಳು ಸೇರಿದಂತೆ ಈ ಪ್ರದೇಶದ ನೈಸರ್ಗಿಕ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸಬೇಕಾಗಿದೆ. ಸಿಮೆಂಟ್ ತಯಾರಿಕೆಗೆ ಮತ್ತು ಕಲ್ಲಿನ ಉದ್ಯಮಕ್ಕೆ ಬೇಕಾಗುವ ಸಂಪನ್ಮೂಲಗಳು ಹೇರಳವಾಗಿ ಇಲ್ಲಿನ ಭೂಗರ್ಭದಲ್ಲಿ ಅಡಗಿಕೊಂಡಿವೆ. ಜಲಮೂಲಗಳ ಹರಿವು ವಿವಿಧ ಪ್ರದೇಶಗಳ, ಜಿಲ್ಲೆಗಳ ಅಥವಾ ರಾಜ್ಯದ ಭೌಗೋಳಿಕ ಎಲ್ಲೆಗಳನ್ನು ಮೀರಿ ಬೆಳೆದಿರುವಷ್ಟರ ಮಟ್ಟಿಗೆ ಚಲನಶೀಲವಾಗಿರುತ್ತದೆ. ಜಲಸಂಪನ್ಮೂಲ ಎಲ್ಲ ಕಡೆ ಸಮಾನವಾಗಿ ವಿತರಣೆಯಾಗಿರುವುದಿಲ್ಲ. ಅದರಂತೆ ಈ ಪ್ರದೇಶದಲ್ಲಿಯು ನೀರು ಸಮರ್ಪಕವಾಗಿ ತನ್ನ ಹರಿವನ್ನು ಪಡೆದುಕೊಂಡಿಲ್ಲ. ಆದ್ದರಿಂದ ಇಂತಹ ಪ್ರದೇಶಗಳಲ್ಲಿ ಈ ಸಂಪನ್ಮೂಲ ನ್ಯಾಯೋಚಿತವಾಗಿ, ಸಮಾನ ಬಳಕೆ ಮತ್ತು ಅಭಿವೃದ್ಧಿ ಹಾಗೂ ನಿರ್ವಹಣೆಯ ಮೂಲಕ ಸಾಧ್ಯವಾದಷ್ಟು ಪ್ರದೇಶವಾರು ಸಮತೋಲನ ವನ್ನು ಕಾಯ್ದುಕೊಳ್ಳಲು ವಸ್ತುನಿಷ್ಠ ಮಾನದಂಡವನ್ನು ಆಧರಿಸಿ ಒಂದು ವ್ಯವಸ್ಥೆ ರೂಪಿಸಲು ತೀವ್ರತರ ಪ್ರಯತ್ನ ಮಾಡಬೇಕು. ಇಲ್ಲದಿದ್ದರೇ ಇಂತಹ ಅಸಮತೋಲನಗಳು ಪ್ರಾದೇಶಿಕ ಅಭಿವೃದ್ಧಿಗೆ ಅಡೆತಡೆ ಗಳಾಗುತ್ತವೆ. ಈ ಗಡಿಭಾಗದಲ್ಲಿನ ಜನತೆಯ ಅಭಿವೃದ್ಧಿಯನ್ನು ಹೆಚ್ಚಿಸುವ ದೃಷ್ಟಿಯಿಂದ ಸಂಪನ್ಮೂಲಗಳು ಸಮೃದ್ಧವಾಗಿರುವ ಪ್ರದೇಶಗಳಿಂದ ಈ ಹಿಂದುಳಿದ ಪ್ರದೇಶಗಳಿಗೆ ವರ್ಗಾಯಿಸಬೇಕಾಗಿದೆ. ಸರ್ಕಾರದ ಅಭಿವೃದ್ಧಿ ಯೋಜನೆ ಮತ್ತು ನೀತಿ, ಖಾಸಗಿ ಬಂಡವಾಳ ಹೂಡಿಕೆ, ಈ ಎರಡನ್ನು ಪರಿಷ್ಕರಿಸಿ ನ್ಯಾಯೋಚಿತ ಮತ್ತು ಸಮಾನ ರೀತಿಯಲ್ಲಿ ಅಭಿವೃದ್ಧಿ ಸಾಧಿಸುವೆಡೆಗೆ ಮುಂದಾದಾಗ ಮಾತ್ರ ಆರ್ಥಿಕವಾಗಿ ಈ ಪ್ರದೇಶ ಅಭಿವೃದ್ಧಿಯೆಡೆಗೆ ಹೆಜ್ಜೆ ಹಾಕುತ್ತದೆ. ಆದ್ದರಿಂದ ಈ ಮುಂದಿನ ಅಂಶಗಳಿಂದ ಇಲ್ಲಿನ ಪ್ರದೇಶದ, ಇಲ್ಲಿನ ಜನರ ಅಭಿವೃದ್ಧಿಯನ್ನು ಬಲಪಡಿಸಬಹುದು. ಇದಕ್ಕೆ ಈ ಸಲಹೆಗಳನ್ನು ಗಮನಿಸಿ ಜಾರಿಗೆ ತರಬೇಕು.

೧. ಗ್ರಾಮದಲ್ಲಿನ ನಿರಕ್ಷರಸ್ಥ ಕೃಷಿಕರಿಗೆ ಖಾಸಗಿ ಸಾಹುಕಾರ, ದಲಾಲರು ಮುಖ್ಯವಾಗಿ ಸಾಲ ನೀಡುತ್ತಿದ್ದು, ಇವರು ಒದಗಿಸುವ ಸಾಲ ಶೇ. ೭೫ರಷ್ಟಿದೆ. ಆದರೆ ಇಲ್ಲಿನ ಸಹಕಾರ ಸಂಘಗಳು ಕೇವಲ ೨೫% ಸಾಲವನ್ನು ರೈತರಿಗೆ ನೀಡುತ್ತಿದ್ದು, ಅದು ರೈತರು ಹತ್ತಾರು ಬಾರಿ ಸುತ್ತಿ ಸುತ್ತಿ ಸುಸ್ತಾದಾಗ. ಹಳ್ಳಿಯ ಸಾಹುಕಾರ ನೀಡುವ ಶೇ.೧೮-೨೪ರ ವಾರ್ಷಿಕ ಬಡ್ಡಿದರವನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳುವಂತಹ ಸ್ಥಿತಿ ರೈತರದ್ದಾಗಿದೆ. ಈ ಖಾಸಗಿ ಲೇವಾದೇವಿ ಸಾಹುಕಾರರೇ ಇಂದಿಗೂ ಗ್ರಾಮೀಣ ಅರ್ಥವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದಾರೆ ಎಂಬುದು ಶೋಚನೀಯ. ಆದ್ದರಿಂದ ಮೊದಲು ಕೃಷಿಕರಿಗೆ ಕಡಿಮೆ ಬಡ್ಡಿ ಇಲ್ಲವೇ ಬಡ್ಡಿರಹಿತ ಸಾಲವನ್ನು ಶೀಘ್ರ ಅತೀ ಶೀಘ್ರದಲ್ಲಿ ಸರಕಾರ ಬ್ಯಾಂಕುಗಳಿಂದ ದೊರೆಯುವಂತಾಗಬೇಕಾಗಿದೆ.

೨. ಇಡೀ ರಾಜ್ಯದಲ್ಲಿಯೇ ಬರಗಾಲ, ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿಯೊಂದಿಗೆ ನಿರಂತರ ಒಂದಿಲ್ಲದೊಂದು ಸಮಸ್ಯೆಗಳಿಂದಲೇ ಮುಂದುವರೆಯುತ್ತಿರುವ ಈ ಪ್ರದೇಶದ ಅಭಿವೃದ್ಧಿಗೆ, ಇಲ್ಲಿನ ರೈತರ ಅಭಿವೃದ್ಧಿಗೆ ಹಲವು ಯೋಜನೆಗಳನ್ನು ಸರ್ಕಾರ ಹಾಕಿಕೊಂಡರೂ ಅವು ಸಮರ್ಪಕವಾಗಿ ಗುರಿ ಮುಟ್ಟುತ್ತಿಲ್ಲ. ಇಂತಹ ಪರಿಸ್ಥಿತಿಯಲ್ಲಿಯೇ ಮಳೆಯಾಗದೆ ಕೃಷಿ ಚಟುವಟಿಕೆಗಳಿಗೆ ತಡೆಯಾದಾಗ ತಮ್ಮ ಹೊಟ್ಟೆಪಾಡಿಗಾಗಿ ದೊಡ್ಡ ದೊಡ್ಡ ನಗರಗಳಿಗೆ ಗುಳೆ ಹೋಗಿ, ತಮ್ಮ ಸಂಸ್ಕೃತಿ, ತಮ್ಮತನ ಎಂಬುದನ್ನು ಮರೆತು ಹೋಟೆಲ್‌ಗಳಲ್ಲಿಯೋ, ಕಟ್ಟಡ ಕಾಮಗಾರಿ ಕೆಲಸಗಳಲ್ಲಿಯೋ ಇಲ್ಲವೇ ಬೇರೆ ಬೇರೆ ಕಡೆ ಚಿಕ್ಕ ಚಿಕ್ಕ ಕೆಲಸ ಮಾಡಿ ಜೀವನ ಸಾಗಿಸುವ ಅನಿವಾರ್ಯತೆ ಇಲ್ಲಿನ ಜನರಿಗೆ ಬಂದೊದಗಿದೆ.

೩. ಮೇಲಿಂದ ಮೇಲೆ ಉಂಟಾಗುತ್ತಿರುವ ಬರಗಾಲ ಸಮಸ್ಯೆ, ಕೆರೆ, ಬಾವಿ, ಹಳ್ಳಕೊಳ್ಳಗಳಲ್ಲಿನ ನೀರಿನ ಕೊರತೆ, ಅಂತರ್ಜಲ ಕುಸಿತ ಈ ಎಲ್ಲ ಸಮಸ್ಯೆಗಳು ಇಲ್ಲಿನ ಜನರನ್ನು ಸತತವಾಗಿ ಕಾಡುತ್ತಿವೆ. ಆದ್ದರಿಂದ ಮುಖ್ಯವಾಗಿ ಮಳೆಯಾದಾಗ ಮಳೆ ನೀರು ಸಂಗ್ರಹ ರಚನೆಗಳನ್ನು ನಿರ್ಮಿಸುವ ಮೂಲಕ ನೀರನ್ನು ಹಿಡಿದಿಡುವ ಅಗತ್ಯವಿದೆ. ಇಲ್ಲದಿದ್ದರೇ ಮಳೆಯ ಪ್ರಯೋಜನವನ್ನು ಕೇವಲ ಮುಂಗಾರು ಬೆಳೆಗೆ ಮಾತ್ರ ಬಳಸಿಕೊಂಡು ನಂತರದ ಕೃಷಿಗೆ ನೀರಿಲ್ಲದೆ ಕೃಷಿಭೂಮಿ ಬರಡಾಗುತ್ತಿದೆ. ಇದನ್ನು ತಡೆಯಬೇಕಾಗಿರುವುದರಿಂದ ಸಣ್ಣ ನೀರಾವರಿ ಯೋಜನೆಗಳಲ್ಲಿ ಕೆರೆಗಳನ್ನು, ಏತನೀರಾವರಿಯನ್ನು, ಆಣೆಕಟ್ಟುಗಳನ್ನು, ಪಿಕ್‌ಆಪ್ ಡ್ಯಾಂಗಳನ್ನು ನಿರ್ಮಿಸಿ ಅಲ್ಲಲ್ಲಿ ನೀರನ್ನು ಸಂಗ್ರಹಿಸುವುದು ಇಲ್ಲಿ ಅತೀ ಮುಖ್ಯವಾಗಿದೆ. ಇದಕ್ಕಾಗಿ ಜನರು ರೈತ ಹೋರಾಟಗಳಿಗೆ ಮುಂದಾಗಿ ಉತ್ತಮ ನೀರಿನ ಸಂಗ್ರಹಕ್ಕಾಗಿ ನೀರು ಬಳಕೆದಾರರ ಸಂಘಗಳನ್ನು ಕಟ್ಟಿಕೊಂಡು ತಮ್ಮ ಬೇಡಿಕೆಗಳನ್ನು ತೀವ್ರಗತಿಗಳಲ್ಲಿ ಈಡೇರುವಂತೆ ಸರ್ಕಾರಗಳ ಮೇಲೆ ಒತ್ತಡ ಹೇರಬೇಕಿದೆ.

೪. ಇಲ್ಲಿನ ರೈತರು ತಾವು ಬೆಳೆದ ಬೆಳೆಗೆ ಸ್ವತಃ ಅವರೇ ಬೆಲೆ ನಿರ್ಧರಿಸುವಂತಾಗಬೇಕು. ಈ ನಿಟ್ಟಿನಲ್ಲಿ ಅರ್ಥಶಾಸ್ತ್ರಜ್ಞರು ಇವರ ನೆರವಿಗೆ ಬರಬೇಕಾಗಿದೆ. ಅಲ್ಲದೆ ರೈತರ ಸುತ್ತ ಗಿರಕಿ ಹೊಡೆಯುವ ಜಾಗತೀಕರಣ, ಕೃಷಿಮಾರುಕಟ್ಟೆ, ದಲ್ಲಾಳಿಗಳಿಂದ ರೈತರನ್ನು ರಕ್ಷಿಸಬೇಕಿದೆ. ಇದಕ್ಕಾಗಿ ಸರ್ಕಾರಗಳು ಪ್ರತಿ ಬೆಳೆಗಳಿಗೆ ಯೋಗ್ಯರೀತಿಯ ಬೆಂಬಲ ಬೆಲೆಗಳನ್ನು ಘೋಷಿಸಬೇಕು ಮತ್ತು ನೇರವಾಗಿ ಸರ್ಕಾರಗಳೇ

ರೈತರ ಬೆಳೆಗಳನ್ನು ಖರೀದಿಸುವಂತಾಗಬೇಕು. ಇದರ ಜೊತೆಗೆ ರೈತರಿಗೆ ಆರ್ಥಿಕ ಹಣಕಾಸಿನ ಸಹಾಯವನ್ನು ಕಡಿಮೆ ಬಡ್ಡಿದರಗಳಲ್ಲಿ ನೀಡುವುದು ಮತ್ತು ಬೆಳೆ ನಾಶವಾದಾಗ ಅವರಿಗೆ ಆರ್ಥಿಕ ಸಹಾಯಹಸ್ತ ನೀಡುವುದರಿಂದ ರೈತರ ಮನೋಬಲ ಹೆಚ್ಚಾಗಿ ರೈತರು ನೇಣು ಬಿಗಿದುಕೊಂಡು, ಕ್ರಿಮಿನಾಶಕ ಸೇವಿಸಿ, ನದಿ ಬಾವಿಗಳಿಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುವುದನ್ನು ಬಿಟ್ಟುಬಿಡುತ್ತಾರೆ.

೫. ಇಲ್ಲಿನ ಸಾಮಾನ್ಯ ಜನರಿಗೆ ಕೃಷಿ ಚಟುವಟಿಕೆಗಳು ನಿಂತಾಗ ಕೃಷಿಕರಿಗೆ ಮತ್ತು ಸಹ ಕೆಲಸಗಾರರಿಗೆ ಇಲ್ಲಿ ಬದುಕಲು ಬೇರೆ ಪರ್ಯಾಯ ಮಾರ್ಗಗಳಿಲ್ಲವೇ ಎಂದು ನೋಡುವುದಾದರೆ, ಇಲ್ಲಿನ ಭೂಗರ್ಭ ಸಿಮೆಂಟು, ಹಾಸುಗಲ್ಲುಗಳಿಗೆ ಬೇಕಾದ ಕಚ್ಚಾವಸ್ತುಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಆದರೆ ಇವುಗಳನ್ನು ಬಳಸಿಕೊಳ್ಳಲಾಗುತ್ತಿಲ್ಲ. ಒಂದು ವೇಳೆ ಈ ಕಚ್ಚಾ ಖನಿಜಗಳನ್ನು ಇಲ್ಲಿಯೇ ಬಳಸಿಕೊಳ್ಳಲು ದೊಡ್ಡ ದೊಡ್ಡ ಉದ್ಯಮಗಳನ್ನು ಸ್ಥಾಪಿಸಿದರೆ ಇಲ್ಲಿನ ಎಲ್ಲ ಜನರಿಗೂ ವರ್ಷವಿಡಿ ಉದ್ಯೋಗ ದೊರಕುವಂತಾಗುತ್ತದೆ. ಹೀಗಾದಾಗ ಇಲ್ಲಿನ ರೈತರು ಕೆಲಸಕ್ಕಾಗಿ ಗೂಳೆ, ವಲಸೆ ಹೋಗು ವುದನ್ನು ನಿಲ್ಲಿಸುತ್ತಾರೆ. ಇದಕ್ಕೆ ಸೂಕ್ತ ಉಪಾಯವೆಂದರೆ ಈ ಪ್ರದೇಶಗಳಲ್ಲಿ ಕೈಗಾರಿಕಾ ವಲಯಗಳನ್ನು ಸ್ಥಾಪಿಸುವುದು.

೬. ಸಣ್ಣ ಮತ್ತು ಬೃಹತ್ ಪ್ರಮಾಣ ಕೈಗಾರಿಕೆಗಳಿಗೆ ಬೇಕಾದ ಕಚ್ಚಾ ಖನಿಜಗಳು ಈ ಗಡಿಭಾಗದಲ್ಲಿ ವಿಫಲವಾಗಿವೆ. ಆದ್ದರಿಂದ ಕೇವಲ ದೊಡ್ಡ ನಗರ, ಪಟ್ಟಣ ಪ್ರದೇಶಗಳಲ್ಲಿ ಸ್ಥಾಪನೆಗೊಳ್ಳುವ ಕೈಗಾರಿಕೆಗಳನ್ನು ಈ ಪ್ರದೇಶಗಳಲ್ಲಿ ಸ್ಥಾಪನೆಗೊಳ್ಳುವಂತೆ ಮಾಡಲು ಸರ್ಕಾರಗಳು ಗಡಿಪ್ರದೇಶಗಳ ನ್ನೊಳಗೊಂಡಂತೆ ಕೈಗಾರಿಕಾ ಕಾಯ್ದೆ ಮಾಡಿ ಅವುಗಳನ್ನು ಜಾರಿಗೆ ತರಬೇಕು. ಇಲ್ಲಿ ಸಣ್ಣ ಮತ್ತು ಬೃಹತ್ ಪ್ರಮಾಣದ ಕೈಗಾರಿಕೆಗಳ ಸ್ಥಾಪನೆಗೆ ಉದ್ಯಮಿಗಳು ಮುಂದೆ ಬಂದಾಗ ಅವುಗಳಿಗೆ ವಿದ್ಯುತ್, ನೀರು, ರಸ್ತೆಗಳನ್ನು ಪೂರೈಸುತ್ತಾ, ಸರ್ಕಾರಕ್ಕೆ ಸಲ್ಲಿಸುವ ತೆರಿಗೆಗಳಲ್ಲಿ ರಿಯಾಯಿತಿಗಳನ್ನು ಕೊಡಬೇಕು. ಹೀಗಾದಾಗ ಮಾತ್ರ ಇಲ್ಲಿನ ಮೂಲ ಕಚ್ಚಾ ಖನಿಜಗಳನ್ನು ಬಳಸಿಕೊಂಡು ಉದ್ಯಮಿಗಳು ಕೈಗಾರಿಕೆಗಳನ್ನು ಸ್ಥಾಪಿಸುತ್ತಾರೆ. ಈ ಕೈಗಾರಿಕೆಗಳು ಸ್ಥಾಪನೆಗೊಂಡು ಕೆಲಸ ಪ್ರಾರಂಭಿಸಿದರೆ ಸ್ಥಳೀಯರಿಗೆ ಬೇಕಾದ ಉದ್ಯೋಗಗಳು ಸೃಷ್ಟಿಯಾಗಿ ವರ್ಷವಿಡೀ ಕೆಲಸವಿಲ್ಲದೆ ದುಡಿಮೆಯಿಂದ ದೂರ ಉಳಿದವರೆಲ್ಲ ದುಡಿಯುವಂತಾಗುತ್ತದೆ.

೭. ಇಲ್ಲಿನ ಜನರ ಆರ್ಥಿಕ ಸ್ಥಿತಿಗತಿಗಳು ಸುಧಾರಿಸುವಲ್ಲಿ ಆದಾಯ, ಉತ್ಪತ್ತಿ, ಉದ್ಯೋಗ, ಬಂಡವಾಳ ಹೂಡಿಕೆ ಮುಂತಾದವುಗಳು ಪ್ರಮುಖ ಪಾತ್ರವಹಿಸುತ್ತವೆ. ಆದ್ದರಿಂದ ಇವುಗಳನ್ನು ಆದಷ್ಟು ಬೇಗ ಬೇಗ ಪ್ರಕ್ರಿಯೆಗೆ ತರುವಂತಾಗಬೇಕು. ಅಲ್ಲದೆ ಆದಾಯವನ್ನು ಹೆಚ್ಚಿಸುವುದಷ್ಟೇ ಅಭಿವೃದ್ಧಿಯ ಉದ್ದೇಶವಾಗಬಾರದು. ಆದಾಯವೆಂಬುದು ಉತ್ತಮ ಶಿಕ್ಷಣ, ಉತ್ತಮ ಆರೋಗ್ಯ, ರಾಜಕೀಯ ಸ್ವಾತಂತ್ರ್ಯ, ಸಾಂಸ್ಕೃತಿಕ ಮನ್ನಣೆ, ವ್ಯಕ್ತಿಗತ ಸುರಕ್ಷೆ, ಸಮುದಾಯದಲ್ಲಿ ಭಾಗವಹಿಸುವಿಕೆ, ಪಾರಂಪರಿಕ ಭದ್ರತೆ ಮತ್ತು ಇತರ ಮಾನವ ಸುಖಮಯ ಜೀವನಕ್ಕೆ ಬೇಕಾದ ಅಂಶಗಳನ್ನು ಒಳಗೊಂಡಿರಬೇಕು. ಹೀಗಾದಾಗ ಮಾತ್ರ ಒಂದು ಜಿಲ್ಲೆಯ, ಒಂದು ರಾಜ್ಯದ, ಒಂದು ರಾಷ್ಟ್ರದ ಮತ್ತು ಒಂದು ಹಿಂದುಳಿದ ಪ್ರದೇಶದ ಅಭಿವೃದ್ಧಿಯಾಗಲು ಸಾಧ್ಯವಾಗುತ್ತದೆ.

**ಟಿಪ್ಪಣಿಗಳು**

೧. ಸೇಡಿಂಬ ದುರ್ಗದ ಶಾಸನಗಳು, ಮುಡಬಿ ಗುಂಡೇರಾವ್, ಸಂಗಮೇಶ್ವರ ಪ್ರಕಾಶನ, ಸೇಡಂ, ೨೦೦೨, ಪು. ೬.

೨. ಅದೇ.,

೩. ಕಲಬುರ್ಗಿ ಜಿಲ್ಲಾದರ್ಶನ, ಪ್ರ.ಸಂ. ಪ್ರೊ. ಬಸವರಾಜ ಸಬರದ, ಲೇಖಿನ ನೀಲಮ್ಮ ಪತಂಗಿ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫, ಪು. ೧೧.

೪. ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರ ಸಮಿತಿ ಅಂತಿಮ ವರದಿ, ಪ್ರ.ಸಂ. ಡಾ.ಡಿ.ಎಂ. ನಂಜುಂಡಪ್ಪ, ೨೦೦೩, ಪು. ೩೨.

• • •

ಅಧ್ಯಾಯ ಐದು

# ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಕನ್ನಡಿಗರ ನಿಲುವು

೫.೧. ಕನ್ನಡ ಮತ್ತು ತೆಲುಗರ ಪರಿಕಲ್ಪನೆ

೫.೨. ಕರ್ನಾಟಕ, ಕನ್ನಡ, ಕನ್ನಡಿಗ ಎಂಬುದರ ಪರಿಕಲ್ಪನೆ

೫.೩. ಗಡಿಭಾಗದಲ್ಲಿರುವ ಕನ್ನಡಿಗರ ಮೇಲಿರುವ ಒತ್ತಡಗಳು

೫.೪. ಪ್ರತ್ಯೇಕತೆ, ಪ್ರತ್ಯೇಕ ರಾಜ್ಯದ ಬೇಡಿಕೆ

೫.೫. ಕರ್ನಾಟಕ ಆಂಧ್ರ ಗಡಿಭಾಗದಲ್ಲಿರುವ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು

೫.೧. ಕನ್ನಡ ಮತ್ತು ತೆಲುಗರ ಪರಿಕಲ್ಪನೆ

೫.೧.೧. ಕರ್ನಾಟಕ ಮತ್ತು ಆಂಧ್ರದ ಪ್ರಾಚೀನತೆ :

ಕರ್ನಾಟಕ ಮತ್ತು ಆಂಧ್ರ ರಾಜ್ಯಗಳು ದಕ್ಷಿಣ ಭಾರತದ ಅಕ್ಕಪಕ್ಕದ ರಾಜ್ಯಗಳು. ಬೀದರ್, ಗುಲಬರ್ಗಾ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು ಮತ್ತು ಕೋಲಾರ ಈ ಏಳು ಕರ್ನಾಟಕದ ಜಿಲ್ಲೆಗಳು ಆಂಧ್ರದ ಗಡಿಗೆ ಹೊಂದಿಕೊಂಡಿವೆ. ಕರ್ನಾಟಕದಲ್ಲಿ ಕನ್ನಡ ರಾಜ್ಯಭಾಷೆಯಾದರೆ, ಆಂಧ್ರದಲ್ಲಿ ತೆಲುಗು ರಾಜ್ಯಭಾಷೆಯಾಗಿದೆ. ಈ ಅಕ್ಕಪಕ್ಕದ ರಾಜ್ಯಗಳ ಭಾಷೆಗಳು ಪರಸ್ಪರ ಒಂದಕ್ಕೊಂದು ಹತ್ತಿರವಾಗಿವೆ. ಒಂದೇ ಭಾಷಾವರ್ಗಗಳಿಗೆ ಸೇರಿದ ಈ ಭಾಷೆಗಳು ಉಚ್ಚಾರಣೆ ಮತ್ತು ಬರಹಕ್ಕೆ ಕೂಡ ಹತ್ತಿರದ ಸಂಬಂಧವಿರಿಸಿಕೊಂಡಿರುವುದರ ಜೊತೆಗೆ ಈ ಎರಡು ಭಾಷೆಗಳು ಸಂಸ್ಕೃತದಂತೆ ದೇವಭಾಷೆಗಳಾಗದೆ ಜನಭಾಷೆಗಳಾಗಿವೆ. ಅಂತಲೇ ಇವತ್ತಿಗೂ ಸಮೃದ್ಧವಾಗಿ ಬೆಳೆದುಕೊಂಡು ಬಂದಿವೆ. ಭಾಷೆಗಳು ತಮ್ಮ ಮಡಿವಂತಿಕೆಯನ್ನು ಸಡಿಲಗೊಳಿಸದಿದ್ದರೆ ಅವು ದಿನದಿಂದ ದಿನಕ್ಕೆ ಅಳಿವಿನತ್ತ ಚಲಿಸುತ್ತವೆ. ಒಂದು ಪ್ರದೇಶದಲ್ಲಿನ ಭಾಷಿಕ ಪ್ರಭೇದಗಳು ಇನ್ನುಳಿದ ಭಾಷಾವರ್ಗದೊಂದಿಗೆ ಬಹುಬೇಗ ವ್ಯವಹರಿಸುತ್ತವೆ. ಇಲ್ಲಿ ಭಾಷಾಪ್ರಬೇಧಗಳು ಎಂದರೆ ಒಂದೇ ಜಾತಿಯ ಗುಂಪಿಗೆ ಸೇರಿದ ಭಾಷೆಗಳು ಮತ್ತು ಈ ಒಂದೇ ಮೂಲ ಭಾಷಿಕ ಗುಂಪಿನಿಂದ ಸ್ವತಂತ್ರಗೊಂಡವುಗಳು. ಹೀಗೆ ಮೂಲ ಗುಂಪಿನಿಂದ ಹೊರಬಂದ ಅನೇಕ ಭಾಷೆಗಳು ಪರಸ್ಪರ ತಮ್ಮ ಮೂಲ ಮಾತೃಗುಣಗಳನ್ನು ಬಿಟ್ಟುಕೊಡಲಿಲ್ಲ. ತಮ್ಮಲ್ಲಿನ ಆಂತರಿಕ ಸಂಬಂಧಗಳನ್ನು ಹತ್ತಿರದ ಸಾಮೀಪ್ಯವನ್ನು ಉಳಿಸಿಕೊಂಡಿದ್ದವು. ಹೀಗೆಯೇ ಇಲ್ಲಿನ ಕನ್ನಡ ಮತ್ತು ತೆಲುಗು ಭಾಷೆಗಳು ಒಂದೇ ತಾಯಿಯಿಂದ ಹುಟ್ಟಿದ ಸೋದರ ಭಾಷೆಗಳು. ಇವು ಬರೆಯುವ ಭಾಷೆಯಿಂದ ಹಿಡಿದು ಓದುವ ಪಠ್ಯ ಮತ್ತು ಮಾತನಾಡುವ ಶೈಲಿಗಳಲ್ಲಿ ಹೆಚ್ಚು ಹೆಚ್ಚು ಸಾಮೀಪ್ಯವನ್ನು ಇರಿಸಿಕೊಂಡಿವೆ. ಅಷ್ಟೇ ಅಲ್ಲದೆ ಕನ್ನಡ ಮತ್ತು ತೆಲುಗು ಭಾಷೆಗಳ ಹುಟ್ಟು, ಅವುಗಳು ಬೆಳೆದುಕೊಂಡು ಬಂದ ಬಗೆ, ಅವುಗಳಿಗೆ ಸಿಕ್ಕ ರಾಜಾಶ್ರಯ ಒಟ್ಟಾರೆ ಈ ಎಲ್ಲ ಅಂಶಗಳ ಚರಿತ್ರೆಯೂ ಹೆಚ್ಚು ಕಡಿಮೆ ಒಂದಕ್ಕೊಂದು ಪೂರಕವಾಗಿವೆ.

ಕನ್ನಡ ನಾಡಿನ ಮತ್ತು ಕನ್ನಡದ ಪ್ರಾಚೀನತೆಯ ಚರಿತ್ರೆಯನ್ನು ನೋಡುವಾಗ

೧. ಮಹಾಭಾರತದ ಸಭಾಪರ್ವ ಮತ್ತು ಭೀಷ್ಮಪರ್ವಗಳಲ್ಲಿ

ಆಥಾಪರೇ ಜನಪದಾಃ ದಕ್ಷಿಣಾ ಭರತರ್ಷಭ |
ದ್ರಾವಿಡಾಃ ಕೇರಲಾಃ ಪ್ರಾಂಚ್ಯ ಮೂಷಿಕ ವನವಾಸಿಕಾಃ ||
ಕರ್ನಾಟಕ ಮಹಿಷಕಾ ವಿಕಲ್ಪ ಮೂಷಕಸ್ತಥಾ |
ಝುಲ್ಲಿಕಾ ಕುಂತಲಾಶ್ಚೈವ ಸೌಹೃದಾ ನಭ ಕಾನನಾಃ ||

೨. ಕ್ರಿ.ಪೂ. ೩ನೇ ಶತಮಾನದ ಶ್ರವಣಬೆಳಗೊಳದ ಶಿಲಾಶಾಸನಗಳಲ್ಲಿ 'ಕಳ್ವಪ್ಪಿ' ಎಂದು ಕಂಡುಬಂದಿದೆ.

೩. ಕ್ರಿ.ಶ. ಸುಮಾರು ೨ನೇ ಶತಮಾನದಲ್ಲಿ ರಚಿತವಾದ ತಮಿಳಿನ ಕೃತಿ 'ಶಿಲಪ್ಪದಿಗಾರಂ' ಎಂಬುದರಲ್ಲಿ 'ಕರುನಾಟರ್' ಎಂಬ ಶಬ್ದ ಎರಡು ಕಡೆ ದೊರೆಯುವುದು.

೪. ಶೂದ್ರ ಕವಿಯ ಮೃಚ್ಛಕಟಿಕ ನಾಟಕದಲ್ಲಿ 'ಕರ್ನಾಟರ್' ಎಂಬ ಶಬ್ದ ಎರಡು ಸಾರಿ ಈ ನಾಟಕದ ಆರನೇ ಅಂಕದಲ್ಲಿ ವೀರಕ ಮತ್ತು ಚಂದನಕ ಇವರ ಸಂಭಾಷಣೆಯಲ್ಲಿ ಈ ಮಾತು ಬರುತ್ತದೆ.

೫. ಮಾರ್ಕಂಡೇಯ ಪುರಾಣದಲ್ಲಿ ದಕ್ಷಿಣ ದೇಶಗಳನ್ನು ಹೇಳುವಾಗ ಕುಂತಲ, ವನವಾಸಿ, ಮಹಾರಾಷ್ಟ್ರ, ಮಹಿಷಕ, ಕರ್ಣಾಟ ಎಂಬ ಹೆಸರುಗಳು ಬರುತ್ತವೆ.

೬. ವರಾಹಮಿಹಿರನ 'ಬೃಹತ್ ಸಂಹಿತೆ'ಯಲ್ಲಿಯೂ ಕರ್ನಾಟಕದ ಪ್ರಸ್ತಾಪ ಬರುವುದು.

೭. ಕ್ರಿ.ಶ. ೧೫೦ರಲ್ಲಿ ಗ್ರೀಕ್ ದೇಶದಿಂದ ಇಲ್ಲಿಗೆ ಬಂದ ವಿದೇಶಿ ಯಾತ್ರಿಕ ಟಾಲೋಮಿಯಾ ಎಂಬುವನು ತನ್ನ ಗ್ರಂಥದಲ್ಲಿ ಬಾದಿಯಾಮಾಯಿ(ಬಾದಾಮಿ), ಇಂಡೆ(ಇಂಡಿ), ಕಲ್ಲಿಗೇರಿಸ್ (ಕಲ್ಲಿಗೇರಿ), ಮೊದೊಗೌಲ(ಮುದಗಲ್), ಪೆಟಿರ್‌ಗಾಲ(ಪಟ್ಟದಕಲ್ಲು), ಬನವಾಸ್ಯೆ(ಬನವಾಸಿ) ಎಂಬ ಕರ್ನಾಟಕದ ಅನೇಕ ಪ್ರಸಿದ್ಧ ಸ್ಥಳಗಳ ಹೆಸರುಗಳನ್ನು ಉಲ್ಲೇಖಿಸಿದ್ದಾನೆ.

ಇದರಂತೆಯೆ ಆಂಧ್ರದ ಮತ್ತು ತೆಲುಗು ಭಾಷೆಯ ಪ್ರಾಚೀನತೆಯ ಮತ್ತು ಚರಿತ್ರೆಯನ್ನು ಈ ರೀತಿ ನೋಡಬಹುದು.

೧. 'ಐತರೇಯ ಬ್ರಾಹ್ಮ'ದಲ್ಲಿ ಆಂಧ್ರರ ಉಲ್ಲೇಖ.

೨. 'ಆಂಧ್ರಕಸ್' ಎಂಬ ಬೇಡರ ವಂಶದ ಅರಿವು ಪ್ರಾಚೀನ ಸಂಸ್ಕೃತ ಲೇಖಕರಿಗಿದ್ದಿದ್ದು.

೩. ವಾಲ್ಮೀಕಿಯ ರಾಮಾಯಣದಲ್ಲಿ ಈ ದಕ್ಷಿಣಾವರ್ತನ ಭೂಭಾಗವನ್ನು 'ಆಂಧ್ರದೇಶ', 'ಆಂಧ್ರಪಥ', 'ಆಂಧ್ರಮಂಡಲ'ವೆಂದು ಗುರುತಿಸಿದ್ದು.

೪. ಕ್ರಿ.ಪೂ. ೪೦೦ರಲ್ಲಿ ಮೆಗಸ್ತನೀಸ್‌ನು ಮೌರ್ಯರ ಅನಂತರ ಆಂಧ್ರರ ಚತುರಂಗ ಬಲವೇ ಎಣಿಸತಕ್ಕದೆಂದು ಹೇಳಿರುವುದು.

೫. ಕ್ರಿ.ಶ. ೧ನೇ ಶತಮಾನದಲ್ಲಿನ ಹಾಲರಾಜನ 'ಗಾಥಾಸಪ್ತಶತಿ'ಯಲ್ಲಿನ ಅತ್ತ, ಅದ್ದಾಯೇ, ಕರಣಿ, ಕೈ, ಪಿಲೂಅ, ಮೋಡಿ, ರೂಂಪ ಇವು ತೆಲುಗು ಶಬ್ದಗಳಾಗಿರುವ ಸಾಧ್ಯತೆಗಳಾಗಿರುವುದು.

೬. ಭರತನ ನಾಟ್ಯಶಾಸ್ತ್ರದಲ್ಲಿ (೨ನೇ ಶತಮಾನ) 'ಆಂಧ್ರ' ಎಂಬ ಒಂದು ನಾಡಿನ, ಒಂದು ಭಾಷೆಯ ಸೂಚನೆಯನ್ನು ಅಲ್ಲಲ್ಲಿ ಕಂಡುಬರುತ್ತವುದು.

೭. ತೆಲುಗು ಭಾಷೆಯ ಅತೀ ಪ್ರಾಚೀನ 'ಎರ್ರಗುಡಿ ಪಾಡು' (ಕ್ರಿ.ಶ. ೬ನೇ ಶತಮಾನ) ಶಾಸನ ಮತ್ತು ೧೧ನೇ ಶತಮಾನದ ನನ್ನಭಟ್ಟನ ನಂದಂಪೂಡಿ ಶಾಸನದಲ್ಲಿ 'ಆಂಧ್ರಭಾಷೆ' ಎಂಬ ಪದ ಕಂಡುಬರುವುದು.

೮. ದಖ್ಖಿನ್ನಿನ ಪೂರ್ವ ದಿಕ್ಕಿನಲ್ಲಿ ಶಕ್ತರಾದ ಆಂಧ್ರರು ಆಳಿದರೆಂದು ಮೆಗಸ್ತನೀಸ್ ತನ್ನ ಇಂಡಿಕಾದಲ್ಲಿ ನಮೂದಿಸಿದ್ದು.

ಈ ಮೇಲಿನ ಎಲ್ಲ ದಾಖಲೆಗಳನ್ನು ಪರಿಗಣಿಸುವುದಾದಲ್ಲಿ ಕರ್ನಾಟಕ ಮತ್ತು ಆಂಧ್ರ ಎಂಬುವುದು ಒಂದು ಜನಾಂಗವಾಗಿರದೆ ಒಂದು ಭೌಗೋಳಿಕ ನೆಲೆಯಲ್ಲಿ ನೆಲೆನಿಂತ ಜನಸಮೂಹ ಎಂಬ ನಿಲುವಿಗೆ ಬರಬಹುದು. ಒಂದು ಭೌಗೋಳಿಕ ನೆಲೆಯಲ್ಲಿ ನೆಲೆನಿಂತ ಜನಸಮೂಹ ಎನ್ನುವಾಗ ಹಲವು ಬೇರೆ ಬೇರೆ ಜನಸಮುದಾಯಗಳು ಎಂದು ಇಲ್ಲಿ ಪರಿಗಣಿಸಬೇಕಾಗುತ್ತದೆ. ಈ ಮಾತು ಕರ್ನಾಟಕಕ್ಕೆ ಹೊಂದಿಕೊಳ್ಳಬಹುದಾದರೂ ಆಂಧ್ರಕ್ಕೆ ಮೀಸಲಿರಿಸಿ ನೋಡಿದಾಗ ಆಂಧ್ರದಲ್ಲಿ ನೆಲೆಸಿದ ಜನಾಂಗದ ಬಗ್ಗೆ ಚರಿತ್ರೆ, ವೇದ, ಪುರಾಣ, ಬೌದ್ಧ, ಗ್ರೀಕ್ ಸಾಹಿತ್ಯ ಕೃತಿಗಳಲ್ಲಿ ಆಂಧ್ರವೆಂಬುದು ಒಂದು ಭೌಗೋಳಿಕ ನೆಲೆ ಎಂಬುದು ಸ್ಪಷ್ಟವಾಗುತ್ತದೆ. ಐತರೇಯ ಬ್ರಾಹ್ಮಣವು ವಿಂಧ್ಯೆಗೆ ಆಗ್ನೇಯದಲ್ಲಿ ವಾಸ ಮಾಡುತ್ತಿದ್ದ ಆಂಧ್ರರನ್ನು ಪುಂಡ, ಪುಳಿಂದ, ಶಬರ ಮತ್ತು ಮೂತಿಬರೆಂಬ ಬುಡಕಟ್ಟು ಜನಾಂಗಕ್ಕೆ ಸೇರಿದವರೆಂಬ ಮಾಹಿತಿ ನೀಡುತ್ತದೆ. ಐತಿಹಾಸಿಕವಾಗಿ ಆಂಧ್ರರು ಈ ಪ್ರದೇಶದಿಂದ ದಕ್ಷಿಣಕ್ಕೆ ಹೋಗಿ ಮಹಾನದಿಯ ಉಪನದಿಯಾದ ತೆಲವಾಹದ ತೀರ ಪ್ರಾಂತ್ಯದಲ್ಲಿ ನೆಲೆಸಿದರು. ಇಂತಹ ಉಲ್ಲೇಖ ಬೌದ್ಧ ಸಾಹಿತ್ಯದಲ್ಲಿ ಸಿಗುತ್ತದೆ. ಅನಂತರದ 'ಸುತ್ತನಿಪಟ'ದಲ್ಲಿ ಆಂಧ್ರರ ವಾಸಸ್ಥಾನ ಗೋದಾವರಿ ತೀರ ಪ್ರಾಂತ್ಯದ 'ಆಂಧ್ರರಟ್ಟ'ವೆಂದು ಹೇಳಲಾಗಿದೆ. ತರುವಾಯ ಪುರಾಣಗಳಲ್ಲಿ ಆಂಧ್ರರು ದಕ್ಷಿಣಾಪಥದಲ್ಲಿ ವಾಸ ಮಾಡಿ ಸುಮಾರು ನಾಲ್ಕು ಶತಮಾನಗಳ ಕಾಲ ೩೦ ಜನ ರಾಜರು ಆಳ್ವಿಕೆ ನಡೆಸಿದರೆಂದು ಗೊತ್ತಾಗುತ್ತದೆ. ಇದರಿಂದ ಪುಂಡ, ಪುಳಿಂದ, ಶಬರ ಮತ್ತು ಮೂತಿಬರೆಂಬ ಬುಡಕಟ್ಟು ಜನಾಂಗಗಳು ಆಂಧ್ರದ ಮೂಲಿಗರೆಂದು, ಇವರು ಗೋದಾವರಿ ಪ್ರದೇಶದಲ್ಲಿ ವಾಸವಿದ್ದು, ತದನಂತರ ರಾಜ್ಯ ಕಟ್ಟಿ ಸುಮಾರು ೩೦ ಜನ ಆಳ್ವಿಕೆ ನಡೆಸಿದರೆಂದು ಖಚಿತವಾಗುತ್ತದೆ.

**೫.೧.೨. ಕರ್ನಾಟಕ-ಆಂಧ್ರ ಗಡಿಪ್ರದೇಶಗಳನ್ನಾಳಿದ ಅರಸು ಮನೆತನಗಳು :**

ಕರ್ನಾಟಕ-ಆಂಧ್ರದ ಚಾರಿತ್ರಿಕ ಸಂಗತಿಗಳನ್ನು ಗಮನಿಸುವುದಾದರೆ ಈ ಭೌಗೋಳಿಕ ಪ್ರದೇಶ ಮೊಟ್ಟಮೊದಲ ಶಾತವಾಹನರ ಕಾಲಕ್ಕೆ ಒಂದೇ ಭೌಗೋಳಿಕ ವ್ಯಾಪ್ತಿಯಲ್ಲಿ ಕೇಂದ್ರೀಕರಿಸಿದ್ದವು. ಈ ವಂಶದ ಮೂಲಪುರುಷರು ಆಂಧ್ರ ಜಾತಿಗೆ ಸೇರಿದ್ದರಿಂದ ಇವರನ್ನು ಆಂಧ್ರರೆಂದು ಪುರಾಣಗಳಲ್ಲಿ ಕರೆಯಲಾಗಿದೆ. ಗೌತಮಿಪುತ್ರ ಶಾತಕರ್ಣಿಯು ಋಷಿಕ (ಕೃಷ್ಣಾನದಿ) ದಂಡೆಯ ಮೇಲಿರುವ ಋಷಿಕ ನಗರ, ಅಷ್ಮಕ (ಭೋದನಾ ಪ್ರಾಂತ), ಮುಳಕ (ಗೋದಾವರಿ ನದಿದಂಡೆ ಮೇಲಿರುವ ಪೈಠಣ) ಮತ್ತು ವಿದರ್ಭಗಳನ್ನು ತನ್ನ ಆಡಳಿತಕ್ಕೊಳಪಡಿಸಿಕೊಂಡಿದ್ದನು. ಇಲ್ಲಿನ ಋಷಿಕ ಪ್ರದೇಶವೆಂದರೆ ಇಂದಿನ ಕರ್ನಾಟಕದ ಬಳ್ಳಾರಿ, ರಾಯಚೂರು, ಗುಲಬರ್ಗಾ ಜಿಲ್ಲೆಗಳ ಪ್ರದೇಶಗಳು, ಈ ಕರ್ನಾಟಕ ಪ್ರದೇಶಗಳನ್ನು

ಅಂದು 'ಶಾತವಾಹನೀಹಾರ' 'ಶಾತವಾಹನ ರಾಷ್ಟ್ರ' ಎಂದು ಕರೆಯಲಾಗುತ್ತಿತ್ತು. ಇಲ್ಲಿಂದ ಮುಂದುವರೆದ ಕರ್ನಾಟಕ-ಆಂಧ್ರದ ಸಂಬಂಧಗಳು ಹಾಗೆಯೇ ಮುಂದುವರೆಯುತ್ತ, ಸ್ವತಂತ್ರ ಕನ್ನಡ ನಾಡಿನ ಚರಿತ್ರೆಯನ್ನು ಪ್ರಾರಂಭಿಸಿದ ಕದಂಬರ ಕಾಲಕ್ಕೆ, ಕದಂಬರ ರವಿವರ್ಮನ ವಿಜಯಯಾತ್ರೆ ಹಾಗೂ ಬೇಡಿಕೆಹಾಳದ ತಾಮ್ರಪಟದಲ್ಲಿ ಉಲ್ಲೇಖಗೊಂಡಂತೆ ಕದಂಬರ ರಾಜ್ಯ ಪಶ್ಚಿಮ ಸಮುದ್ರದಿಂದ ಶ್ರೀಶೈಲ ಪರ್ವತದವರೆಗೂ ಉತ್ತರದ ಮಲಪ್ರಭಾ ನದಿಯಿಂದ ದಕ್ಷಿಣದ ಹಾಸನ, ತುಮಕೂರು ಜಿಲ್ಲೆಗಳ ಉತ್ತರದ ಭಾಗದವರೆಗೆ ವಿಸ್ತರಿಸಿತ್ತು ಎಂಬುದರಲ್ಲಿ ಶ್ರೀಶೈಲ ಪರ್ವತದವರೆಗೂ ಕನ್ನಡ ನಾಡು ವಿಸ್ತರಿಸಿತ್ತೆಂದರೆ ಇಂದಿನ ಆಂಧ್ರದ ಮೆಹಬೂಬನಗರ, ರಂಗಾರೆಡ್ಡಿ ಮತ್ತಿತರ ಅಕ್ಕಪಕ್ಕದ ಜಿಲ್ಲೆಗಳೂ ಕನ್ನಡ ನಾಡಿನ ಆಳ್ವಿಕೆಗೆ ಒಳಪಟ್ಟಿದ್ದವು ಎಂಬುದು ಗೊತ್ತಾಗುತ್ತದೆ. ತದನಂತರ ಬಾದಾಮಿ ಚಾಲುಕ್ಯರ ಇಮ್ಮಡಿ ಪುಲಕೇಶಿಯ ಕಾಲಕ್ಕೆ ಇಡೀ ದಕ್ಷಿಣದ ಭೂಭಾಗ(ಮಹಾರಾಷ್ಟ್ರ, ಆಂಧ್ರ, ಕೇರಳ, ತಮಿಳುನಾಡು)ವೆಲ್ಲ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿದ್ದವು. ಚಾಲುಕ್ಯರ ನಂತರದಲ್ಲಿ ರಾಷ್ಟ್ರಕೂಟರ ಕಾಲಕ್ಕೆ ದಕ್ಷಿಣದ ಒಟ್ಟು ಭೂಭಾಗದಲ್ಲಿನ ಕನ್ನಡ ನಾಡು ಕಾವೇರಿಯಿಂದ ಗೋದಾವರಿ ನದಿಯವರೆಗೆ ಇಳಿಮುಖವಾಯಿತು. ಆಗಲೇ ಮಹಾರಾಷ್ಟ್ರ, ತಮಿಳುನಾಡುಗಳಿಂದ ಬೇರ್ಪಟ್ಟ ಆಂಧ್ರದ ಕೆಲವು ಭಾಗಗಳು ಕನ್ನಡ ನಾಡಿನಲ್ಲಿ ಉಳಿದುಕೊಂಡವು. ಕಲ್ಯಾಣಿ ಚಾಲುಕ್ಯರನ್ನು ಬದಿಗೊತ್ತಿ ಮತ್ತೊಮ್ಮೆ ಆಂಧ್ರಿಗರು ವಣ್ಣನ ನೇತೃತ್ವದಲ್ಲಿ ಕಾಕತೀಯ ರಾಜ್ಯವನ್ನು ದಕ್ಷಿಣದಲ್ಲಿ ಸ್ಥಾಪಿಸಿದರು. ಇವರ ಆಡಳಿತದಲ್ಲಿ ವಾರಂಗಲ್, ತೆಲಂಗಾಣ, ಕರಿಂನಗರ ಮತ್ತು ಕರ್ನಾಟಕದ ಗುಲಬರ್ಗಾ, ರಾಯಚೂರು ಪ್ರದೇಶಗಳು ಸೇರಿಕೊಂಡಿದ್ದವು. ಸುಮಾರು ೬೩ ವರ್ಷಗಳ ಸುದೀರ್ಘ ಆಳ್ವಿಕೆಯಲ್ಲಿ ತೆಲುಗು ಮಾತನಾಡುವ ಜನರನ್ನು ಮೊಟ್ಟಮೊದಲ ಬಾರಿಗೆ ಆಂಧ್ರದ ಅರಸರು ಒಟ್ಟುಗೂಡಿಸಿದರು.

ಇದಾದ ನಂತರ ಹೈದರಾಬಾದ್ ನಿಜಾಮರ ಆಳ್ವಿಕೆಯಲ್ಲಿ ಮತ್ತೆ ಕರ್ನಾಟಕದ ಮತ್ತು ಆಂಧ್ರದ ಪ್ರದೇಶಗಳು ಒಂದು ಆಡಳಿತ ವ್ಯವಸ್ಥೆಯೊಳಗೆ ಸೇರಲ್ಪಟ್ಟವು. ಕರ್ನಾಟಕ-ಆಂಧ್ರದ ಚಾರಿತ್ರಿಕ ಸಂಬಂಧಗಳು ಶಾತವಾಹನರ ಕಾಲದಿಂದಲೇ ಬೆಸೆದುಕೊಂಡಿದ್ದವು. ಆಂಧ್ರವನ್ನಾಳಿದ ಚಾಲುಕ್ಯರು ವೆಂಗಿ ದೇಶಸ್ಥರಲ್ಲದಿದ್ದರೂ, ಅವರು ದಕ್ಷಿಣಾತ್ಯರೇ ಎಂದು ತೆಲುಗು ವಿದ್ವಾಂಸರಾದ ಶ್ರೀ ಕೋಮರಾಜು ವೆಂಕಟ ಲಕ್ಷ್ಮಣರಾವ, ನೆಲಮೂರಿ ವೆಂಕಟರಮಣಯ್ಯನವರು ಅಭಿಪ್ರಾಯಪಡುತ್ತಾರೆ. ಹೀಗೆ ರಾಜಕೀಯ ಏರಿಳಿತಗಳಲ್ಲಿ ಈ ಪ್ರದೇಶಗಳು ಒಮ್ಮೆ ಆಂಧ್ರದ ಹಿಡಿತದಲ್ಲಿ ಮತ್ತೊಮ್ಮೆ ಕನ್ನಡಿಗರ ಹಿಡಿತದಲ್ಲಿ ಉಳಿದುಕೊಳ್ಳುತ್ತಿದ್ದವು.

ಬಾದಾಮಿ ಚಾಲುಕ್ಯರು ತಮ್ಮ ವಿಸ್ತಾರವಾದ ಭೂಪ್ರದೇಶಗಳನ್ನು ಪ್ರಾಂತೀಯ ಆಡಳಿತಗಾರರ ಸಹಾಯದಿಂದ ಆಳುತ್ತಿದ್ದರು. ಇಮ್ಮಡಿ ಪುಲಕೇಶಿಯ ಕಾಲದಲ್ಲಿ ಕನ್ನಡ, ತೆಲುಗು ಬಳಕೆಯಿದ್ದ ಪ್ರಾಂತ್ಯಗಳು ಒಂದಾಗಿದ್ದವು. ಪುಲಕೇಶಿಯ ತಮ್ಮನಾದ ಕುಬ್ಜವಿಷ್ಣುವರ್ಧನ ಆಂಧ್ರದ ವೆಂಗಿಪ್ರದೇಶವನ್ನು ಅಣ್ಣನ ಹೆಸರಿನಲ್ಲಿ ಆಳುತ್ತಿದ್ದನು. ಅಷ್ಟೇ ಅಲ್ಲದೆ ಇವನು ಪೂರ್ವಚಾಲುಕ್ಯರಿಗೆ ಮೂಲಪುರುಷನಾದನು. ಇವನು ಆಳುತ್ತಿದ್ದ ಕೃಷ್ಣಾ, ಗೋದಾವರಿ ನದಿಗಳ ಮಧ್ಯದಲ್ಲಿನ ಭೂಭಾಗವೇ ವೆಂಗಿದೇಶ. ಇವರು

ಅಪ್ಪಟ ಕನ್ನಡಿಗರಾಗಿದ್ದು, ಆಂಧ್ರದ ವೆಂಗಿಮಂಡಲದಲ್ಲಿ ವೆಂಗಿಚಾಲುಕ್ಯರೆಂದು ಆಡಳಿತ ನಡೆಸುತ್ತ ಕನ್ನಡಿಗರನ್ನು, ತೆಲುಗರನ್ನು ಹಾಗೂ ಕನ್ನಡ, ತೆಲುಗು ಭಾಷೆಗಳನ್ನು ಪೋಷಿಸಿಕೊಂಡು ಬಂದಿದ್ದರು.

ಇಷ್ಟಲ್ಲದೇ ಅತೀಮುಖ್ಯವಾಗಿ ವೆಂಗಿಚಾಲುಕ್ಯರು ಶಾಸನಗಳನ್ನು ಕನ್ನಡದಲ್ಲಿ ಬರೆಸಿದ್ದು, ಇಂದಿನ ಮೆಹಬೂಬ್‌ನಗರ ಜಿಲ್ಲೆಯ 'ಕುವರಘಟ್ಟ'ದ ಶಾಸನವು ಚಾಲುಕ್ಯ ವಿನಯಾದಿತ್ಯನ ಮಗ ವೀರಗೃಹನ ಸಾಹಸಗಳನ್ನು ವರ್ಣಿಸುತ್ತದೆ. (ಮೆಹಬೂಬನಗರ ಜಿಲ್ಲೆ ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟ ಭೌಗೋಳಿಕ ಪ್ರದೇಶ.) ಅಂದರೆ ಕ್ರಿ.ಶ. ೮-೧೦ನೇ ಶತಮಾನದಲ್ಲಿ ಕನ್ನಡಿಗರು ಇಲ್ಲಿ ವಾಸವಾಗಿದ್ದರು ಎಂಬುದು ಖಚಿತವಾಗುತ್ತದೆ. ಹೇಗೆಂದರೆ ಶಾಸನದ ಭಾಷೆಯನ್ನು ಅಲ್ಲಿನ ಸ್ಥಳೀಯ ಭಾಷೆಯಲ್ಲಿಯೇ ಬರೆಯಿಸುತ್ತಿದ್ದು, ಸ್ಥಳೀಯರು ಇದರಲ್ಲಿನ ವಿಷಯವನ್ನು ಸರಳವಾಗಿ ತಿಳಿದುಕೊಳ್ಳಲ್ಲಿ ಎಂಬುದು ಇದರ ಉದ್ದೇಶ. ಹೀಗಾಗಿ ಸ್ಥಳೀಯರ ಭಾಷೆ ಕನ್ನಡವಾಗಿರುವುದರಿಂದಲೇ ಇಲ್ಲಿ ಕನ್ನಡ ಭಾಷೆಯ ಶಾಸನವನ್ನು ಬರೆಸಿರ ಬಹುದು.

**೫.೧.೩. ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ದ್ವಿಭಾಷಿಕ ಪರಿಸರ :**

ಚಾರಿತ್ರಿಕ ಹಿನ್ನೆಲೆಯಿಂದೊಡಗೂಡಿದ ಈ ಪ್ರದೇಶ ಇಂದಿಗೂ ಹಾಗೆಯೇ ಮುಂದುವರೆದುಕೊಂಡು ಬಂದಿದೆ. ಇಂದು ಗಡಿರೇಖೆಗಳಿಂದ ಇಲ್ಲಿನ ಕನ್ನಡಿಗರನ್ನು, ತೆಲುಗರನ್ನು ಆಡಳಿತಾತ್ಮಕವಾಗಿ ಬೇರ್ಪಡಿಸಿದರೂ ಸಾಂಸ್ಕೃತಿಕವಾಗಿ, ಭಾಷಿಕವಾಗಿ, ಸಾಮಾಜಿಕವಾಗಿ ಒಬ್ಬರೊಳಗೊಬ್ಬರು ಬಂಧುತ್ವವನ್ನು ಇರಿಸಿಕೊಂಡಿದ್ದಾರೆ. ಆದ್ದರಿಂದಲೇ ಈ ಭಾಗ ಭಾಷಿಕವಾಗಿ ದ್ವಿ-ಭಾಷಿಕ ಪರಿಸರದಲ್ಲಿ ಕಂಡು ಬರುತ್ತದೆ. ಈ ದ್ವಿ-ಭಾಷಿಕ ಪರಿಸರದಲ್ಲಿ ಯಾವ ಭಾಷೆ, ಯಾವ ಭಾಷೆಯ ಮೇಲೆ ಪ್ರಭಾವ ಬೀರಿದೆ ಎಂಬುದನ್ನು ಗುರುತಿಸಲಾಗದ ಸ್ಥಿತಿಯ ನಡುವೆಯೂ ನಿಖರವಾಗಿ ಅಲ್ಲದಿದ್ದರೂ ಒಂದು ಭಾಷಿಕ ಅಂದಾಜಿನ ಪ್ರಕಾರ ಯಾವ ಭಾಷೆ ಯಾವ ಭಾಷೆಯ ಮೇಲೆ ಪ್ರಭಾವ ಬೀರಿದೆ ಎಂದು ಗುರುತಿಸಬಹುದು.

## ಹೈದ್ರಾಬಾದ್‌ನಲ್ಲಿ 'ಕನ್ನಡ -ತೆಲಗು ಬಾಂಧವ್ಯ' ಚಿಂತನೆ

ಗುಲ್ಬರ್ಗ, ಜೂ 7- ಗುಲ್ಬರ್ಗ ವಿಶ್ವವಿದ್ಯಾಲಯದ ಪ್ರಸಾರಾಂಗ ಮತ್ತು ಹೈದ್ರಾಬಾದ್‌ನ ಕರ್ನಾಟಕ ಸಾಹಿತ್ಯ ಮಂದಿರದ ಸಂಯುಕ್ತಾಶ್ರಯದಲ್ಲಿ ಹೊರನಾಡು ಕನ್ನಡಿಗರಿಗಾಗಿ 12 ರಂದು 'ಕನ್ನಡ -ತೆಲುಗು ಸಾಹಿತ್ಯ-ಸಂಸ್ಕೃತಿ ಬಾಂಧವ್ಯ' ಕುರಿತು ವಿಶೇಷ ವಿಚಾರ ಸಂಕಿರಣ ಹಮ್ಮಿಕೊಳ್ಳಲಾಗಿದೆ.

ಹೈದ್ರಾಬಾದ್‌ನ ಕಾಚಿಗುಡಾ-ಲಿಂಗಂಪಲ್ಲಿಯಲ್ಲಿರುವ ಕರ್ನಾಟಕ ಸಾಹಿತ್ಯ ಮಂದಿರದಲ್ಲಿ ಭಾನುವಾರ ಬೆಳಗ್ಗೆ 11ಕ್ಕೆ ನಡೆಯಲಿರುವ ಈ ಕಾರ್ಯಕ್ರಮವನ್ನು ಸಿಕ್ಕಿಂನ ರಾಜ್ಯಪಾಲ ಶ್ರೀ ವಿ.ರಾಮರಾವ ಉದ್ಘಾಟಿಸುವರು. [illegible] ವಿಶ್ವವಿದ್ಯಾಲಯದ ಉಪಕುಲಪತಿ ಮಹ್ಮದ್ ಸುಲೇಮಾನ ಸಿದ್ದಿಕಿ ಮುಖ್ಯ ಅತಿಥಿಗಳಾಗಿರುವರು. ವಿಧಾನ ಪರಿಷತ್ ಸದಸ್ಯ, ಹಂಪಿ ಕನ್ನಡ ವಿವಿ ವಿಶ್ರಾಂತ ಕುಲಪತಿ ಡಾ. ಚಂದ್ರಶೇಖರ ಕಂಬಾರ ಅವರು 25 ಕೃತಿಗಳನ್ನು ಬಿಡುಗಡೆ ಮಾಡುವರು. ಗುಲ್ಬರ್ಗ ವಿವಿ ಉಪಕುಲಪತಿ ಪ್ರೊ.ವಿ.ಬಿ.ಕುಟಿನೋ ಅಧ್ಯಕ್ಷತೆ ವಹಿಸುವರು. ಡಾ. ಎಂ.ಎಸ್.ಪಾಟೀಲ್ ಕೃತಿಗಳ ಕುರಿತು ಮಾತನಾಡುವರು. ಸಾಹಿತ್ಯ ಮಂದಿರದ ಕಾರ್ಯದರ್ಶಿ ವಿಠ್ಠಲ ಜೋಶಿ ಸ್ವಾಗತಿಸುವರು.

**12ಕ್ಕೆ ಮೊದಲ ಗೋಷ್ಠಿ :** ಸಂಡೂರು ಪಿಜಿ ಕೇಂದ್ರದ ಕನ್ನಡ ವಿಭಾಗದ ಮುಖ್ಯಸ್ಥೆ ಡಾ. ಮಲ್ಲಿಕಾ ಘಂಟಿ, ಹೈದ್ರಾಬಾದ್‌ನ ನೃಪತುಂಗ ಕಾಲೇಜಿನ ಕನ್ನಡ ಪ್ರಾಧ್ಯಾಪಕ ಕೃಷ್ಣಾರಾವ ಗೋಣವಾರ, ಡಾ. ಮಮತಾ ಸಾಗರ ಹೈದ್ರಾಬಾದ್ ಮತ್ತು ಧಾರವಾಡದ ಕರ್ನಾಟಕ ವಿವಿ ನಿವೃತ್ತ ಕನ್ನಡ ಪ್ರಾಧ್ಯಾಪಕ ಡಾ. ಬುದ್ದಣ್ಣ ಹಿಂಗಮಿರೆ ವಿವಿಧ ವಿಷಯಗಳ ಬಗ್ಗೆ ಪ್ರಬಂಧ ಮಂಡಿಸುವರು. ಪ್ರಹ್ಲಾದ ಜೋಶಿ ಹೈದ್ರಾಬಾದ್, ಡಾ. ಜಗನ್ನಾಥ ಹೆಬ್ಬಾಳೆ ಬೀದರ್, ಡಾ.ಸೋಮನಾಥ ಯಾಳವಾರ ಹುಮನಾಬಾದ್, ಎಚ್.ಎಸ್.ಪಾಟೀಲ್ ಕೊಪ್ಪಳ ಚರ್ಚೆಯಲ್ಲಿ ಪಾಲ್ಗೊಳ್ಳುವರು.

**2.30ಕ್ಕೆ ಎರಡನೇ ಗೋಷ್ಠಿ :** ಗುಲ್ಬರ್ಗ ವಿವಿ ಕನ್ನಡ ಪ್ರಾಧ್ಯಾಪಕರಾದ ಡಾ. ಶಾಂತಿನಾಥ ದಿಬ್ಬದ ಹಾಗೂ ಡಾ.ವಿ.ಜಿ.ಪೂಜಾರ, ಕರ್ನಾಟಕ ವಿವಿಯ ಪ್ರೊ. ಮಧು ವೆಂಕಾರೆಡ್ಡಿ ಪ್ರಬಂಧ ಮಂಡಿಸುವರು.

ಡಾ.ಮೃತ್ಯುಂಜಯ ಹೊರಕೇರಿ ರಾಯಚೂರು, ಡಾ.ಎಚ್.ಟಿ.ಪೋತೆ, ಡಾ. ಕಮಲಮ್ಮಾ ಹೈದ್ರಾಬಾದ್, ಶಿವರಾಜ ಪಾಟೀಲ್ ಗುಲ್ಬರ್ಗ ಚರ್ಚೆಯಲ್ಲಿ ಪಾಲ್ಗೊಳ್ಳುವರು.

**4.15ಕ್ಕೆ ಬಹುಭಾಷಾ ಕವಿಗೋಷ್ಠಿ :** ಡಾ.ಚಂದ್ರಶೇಖರ ಕಂಬಾರ ಅಧ್ಯಕ್ಷತೆ ವಹಿಸುವರು. ಡಾ. ಕಾಶಿನಾಥ ಅಂಬಲಗೆ, ಡಾ.ಸ್ವಾಮಿರಾವ ಕುಲಕರ್ಣಿ, ಡಾ.ಟಿ.ಎಂ.ಭಾಸ್ಕರ, ಸುವರ್ಣ ವಿಜಯರಾವ, ಪ್ರೊ. ಹೇಮಂತ ಕೊಲ್ಹಾಪುರೆ, ಪ್ರಭಾ ಪಟಮಾರಿ, ಜಿ.ಕೆ.ವಿಜಯಕುಮಾರ, ಡಾ.ಲಿಂಗಣ್ಣ ಗೋನಾಲ, ನಿರ್ಮಲಾ ಬಿರಾದಾರ, ಎಂ.ಉಪೇಂದ್ರ, ಕವಿತಾ ಕುಲಕರ್ಣಿ, ನೇಹಪಾಲಸಿಂಗ್ ವರ್ಮಾ, ಮೀರಾ ಜೋಶಿ, ಡಾ. ರಾಮಚಾರ್ ಅಶ್ರಿತ್, ಅರವಿಂದ ಸಂಗು ಮತ್ತು ಕೆ.ಬಿ.ಬ್ಯಾಳಿ ಕವಿಗೋಷ್ಠಿಯಲ್ಲಿ ಪಾಲ್ಗೊಳ್ಳುವರು.

ಸಂಜೆ 5.30ಕ್ಕೆ ಸಮಾರೋಪ ಸಮಾರಂಭದಲ್ಲಿ ಖ್ಯಾತ ಲೇಖಿಕ ಡಾ. ಕೆ.ವಿ.ತಿರುಮಲೇಶ ಮುಖ್ಯ ಅತಿಥಿಗಳಾಗಿರುವರು. ಬೀದರ್ ಹಿರಿಯ ಪತ್ರಕರ್ತ ಶಿವಶರಣಪ್ಪ ವಾಲಿ, ಚಿಟಗುಪ್ಪಾದ ಬಸವನಾಥ ದೇಶಮುಖ ಅತಿಥಿಗಳಾಗಿರುವರು. ಸಾಹಿತ್ಯ ಮಂದಿರದ ಅಧ್ಯಕ್ಷ ಎಸ್.ಪಿ. ಕುಮಾರ ಅಧ್ಯಕ್ಷತೆ ವಹಿಸುವರು. ಜಾನಪದ ಅಕಾಡೆಮಿ ಸದಸ್ಯ ಶಂಭುಲಿಂಗ ವಾಲದೊಡ್ಡಿ ಬೀದರ್ ಅವರು ಜಾನಪದ ಗೀತೆಗಳು ಪ್ರಸ್ತುತಪಡಿಸುವರು ಎಂದು ಗುಲ್ಬರ್ಗ ವಿವಿ ಪ್ರಸಾರಾಂಗದ ನಿರ್ದೇಶಕ ಡಾ.ಬಸವರಾಜ ಸಬರದ ತಿಳಿಸಿದ್ದಾರೆ.

**ವರದಿ : ವಿಜಯ ಕರ್ನಾಟಕ, ೦೭.೦೬.೨೦೦೫, ಪು. ೪**

ಈ ದ್ವಿ-ಭಾಷಿಕ ಪರಿಸರದಲ್ಲಿನ ಭಾಷೆಗಳಿಗೆ ಅವುಗಳದ್ದೇ ಭಾಷಿಕ ಚರಿತ್ರೆ, ಬಳಕೆಯ ರೂಪರೇಷೆ ಇದ್ದಾಗ್ಯೂ ಈ ಮಿತಿಯನ್ನು ದಾಟಿ ಪಕ್ಕದ ಭಾಷೆಯನ್ನು ಯಾಕೆ ತನ್ನಲ್ಲಿ ಒಗ್ಗೂಡಿಸಿಕೊಳ್ಳುತ್ತವೆ ಎಂಬ ಪ್ರಶ್ನೆಗೆ ಸಮಾಧಾನದ ಉತ್ತರಗಳು ಮಾತ್ರ ನಮಗೆ ಸಿಗುತ್ತವೆ. ದ್ವಿ-ಭಾಷಿಕಕ್ಕೆ ಸಂಬಂಧಿಸಿದಂತೆ ತನ್ನ ಮಾತೃಭಾಷೆಯ ಮೇಲೆ ತೋರುವಂಥ ಪ್ರಭುತ್ವವನ್ನು ಎರಡನೆಯ ಭಾಷೆಯ ಮೇಲೂ ತೋರಬಲ್ಲ ವ್ಯಕ್ತಿಯೇ ದ್ವಿ-ಭಾಷಿಕನೆನಿಸಿಕೊಳ್ಳುತ್ತಾನೆ ಎಂದು ಬ್ಲೂಮ್ ಫೀಲ್ಡ್ (೧೯೩೩) ಹೇಳಿರುವರು. ಇವರ ಹೇಳಿಕೆ ಒಂದು ತುದಿಯಲ್ಲಾದರೆ "ಎರಡನೆಯ ಭಾಷೆಯಲ್ಲಿ ಓದುವ, ಬರೆಯುವ, ಮಾತನಾಡುವ ಹಾಗೂ ಅರ್ಥಮಾಡಿಕೊಳ್ಳಬಲ್ಲ ಈ ನಾಲ್ಕು ತೆರನಾದ ಸಾಮರ್ಥ್ಯಗಳಲ್ಲಿ ಯಾವುದೊಂದರಲ್ಲಿ ಆದರೂ ಪರಿಣತರಾಗಿದ್ದರೆ ಅವರನ್ನು ದ್ವಿಭಾಷಿಕನೆಂದೂ ಕರೆಯಬಹುದು" ಎಂದು ಇನ್ನೊಂದು ತುದಿಯಲ್ಲಿ ಮಾಕನ್ ಮಾರ(೧೯೬೭)ರಲ್ಲಿ ಹೇಳಿದ. ಇವರಿಬ್ಬರ ನಡುವೆ "ಒಂದು ಭಾಷೆಯ ಜೊತೆ ಜೊತೆಗೆ ಇನ್ನೊಂದು ಭಾಷೆಯನ್ನು ಬಳಸುವ ರೂಢಿಯೇ ದ್ವಿ-ಭಾಷಿಕ" ಎಂದು ವೆಯನ್‌ರಿಚ್(೧೯೫೩)ರಲ್ಲಿ ದ್ವಿಭಾಷಿಕದ ಕುರಿತಾಗಿ ಮಾತನಾಡಿದ. ಈ ರೀತಿಯ ವ್ಯಾಖ್ಯಾನಗಳು ಈ ಗಡಿಪ್ರದೇಶಕ್ಕೆ ಅನ್ವಯವಾಗುತ್ತವೆ. ಇಲ್ಲಿನ ಜನರಿರುವ ಪ್ರದೇಶವನ್ನು ಅವರು ಬಳಸುವ ದ್ವಿಭಾಷಿಕತೆಯಿಂದ ಇದು ಕನ್ನಡ-ತೆಲುಗು ದ್ವಿಭಾಷಿಕ ಪರಿಸರ ಎಂದೆನಿಸಿಕೊಳ್ಳುತ್ತದೆ.

**೫.೧.೪. ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಸಾಂಸ್ಕೃತಿಕ ಪರಿಸರ :**

ಈ ಮೇಲಿನ ಚಾರಿತ್ರಿಕ ಮತ್ತು ಭಾಷಿಕ ಅಂಶಗಳನ್ನು ಗಮನಿಸುವುದಾದರೆ ಕರ್ನಾಟಕ-ಆಂಧ್ರದ ಗಡಿಯಲ್ಲಿ ಸುಮಾರು ೭ ಕರ್ನಾಟಕದ ಜಿಲ್ಲೆಗಳು ಬರುತ್ತವೆ. ಇಲ್ಲಿನ ಒಟ್ಟಾರೆ ಸಾಂಸ್ಕೃತಿಕ, ಭಾಷಿಕ, ಸಾಮಾಜಿಕ ಅಂಶಗಳು ಕನ್ನಡಿಗರ ಮತ್ತು ತೆಲುಗರ ಮಧ್ಯೆ ಒಂದು ಸೌಹಾರ್ದ ಕೊಡು-ಕೊಳ್ಳುವಿಕೆ ನಡೆಸಿಕೊಂಡು ಬರುತ್ತಿವೆ. ಇಂತಹ ಪರಿಸರದಲ್ಲಿಯೇ ಈ ಅಧ್ಯಯನದ ವ್ಯಾಪ್ತಿಯಲ್ಲಿನ ಕರ್ನಾಟಕದ ಚಿಂಚೋಳಿ, ಸೇಡಂ, ಯಾದಗೀರ ಮತ್ತು ಆಂಧ್ರದ ತಾಂಡೂರು, ಕೊಡಂಗಲ್, ನಾರಾಯಣಪೇಟ, ಮೆಹಬೂಬನಗರಗಳಲ್ಲಿನ ಕನ್ನಡಿಗರ ಮತ್ತು ತೆಲುಗರ ನಡುವೆ ಈ ಸೌಹಾರ್ದತೆಯು ಬೆಳೆದುಕೊಂಡು ಬಂದಿದೆ. ಇಲ್ಲಿನ ಗಡಿಗ್ರಾಮಗಳಲ್ಲಿನ ಜನರು ನಮ್ಮದು ಕರ್ನಾಟಕ, ನಮ್ಮದು ಆಂಧ್ರಪ್ರದೇಶ ಎಂಬ ಪ್ರಶ್ನೆಗೆ ಒಳಗಾಗುವುದಿಲ್ಲ. ಅಂತಲೆ ಕನ್ನಡಿಗರ ಮಗಳನ್ನು ತೆಲುಗರ ಗಂಡಿಗೆ, ತೆಲುಗರ ಹೆಣ್ಣನ್ನು ಕನ್ನಡಿಗರ ಗಂಡಿಗೆ ಕೊಟ್ಟು, ವಿವಾಹ ಸಂಬಂಧಗಳನ್ನು ಬೆಳೆಸುತ್ತಿರುವರು. ಇಲ್ಲಿನ ಧಾರ್ಮಿಕ ತಾಣಗಳಿಗೆ ತೆಲುಗರು, ಅಲ್ಲಿನ ಧಾರ್ಮಿಕ ತಾಣಗಳಿಗೆ ಕನ್ನಡಿಗರು ನಡೆದುಕೊಳ್ಳುವುದುಂಟು. ಇಲ್ಲಿ ಇವರಿಗೆ ಸಾಮಾಜಿಕ ಸಂಬಂಧಗಳು ಹಾಗೂ ಧಾರ್ಮಿಕ ತಾಣಗಳು ಮುಖ್ಯವಾಗುತ್ತವೆಯೇ ಹೊರತು ಕರ್ನಾಟಕದ ಮತ್ತು ಆಂಧ್ರದ ಗಡಿರೇಖೆಗಳು ಮುಖ್ಯವಾಗುವುದಿಲ್ಲ. ಅಂತಲೆ ಕಾಸರಗೋಡಿನಂತಹ, ಬೆಳಗಾವಿಯಂತಹ ಗಡಿತಂಟೆಗಳು, ಜಗಳಗಳು ಇಲ್ಲಿನ ಕನ್ನಡಿಗರ ಮತ್ತು ತೆಲುಗರ ಮಧ್ಯೆ ಕಂಡುಬರುವುದಿಲ್ಲ. ಇವರ ಈ ಸೌಹಾರ್ದ ಜೀವನವನ್ನು ಗೌರವಿಸುತ್ತ ಇವರ ಮೂಲಭೂತ ಅವಶ್ಯಕತೆಗಳನ್ನು ಇವರಿಗೆ ಒದಗಿಸಿದರೆ ಖಂಡಿತವಾಗಿಯು ಈ ಗಡಿಯಲ್ಲಿ ಕೊನೆಯವರೆಗೂ ಯಾವುದೇ ಗಡಿತಂಟೆ, ನದಿನೀರಿನ ತಂಟೆ,

ಕೋಮುಗಲಭೆಗಳು ಎಂದೆಂದಿಗೂ ಬರುವುದಿಲ್ಲ. ಇವರ ಈ ಭಾವನಾತ್ಮಕ ಸಂಬಂಧಗಳನ್ನು ನಾವು ಪರಿಗಣಿಸಿದಾಗಲೆ ಇವರಿಗೆ ಭೌತಿಕನ್ಯಾಯ ಕೊಡಲು ಸಾಧ್ಯವಾಗುತ್ತದೆ.

**೫.೨. ಕರ್ನಾಟಕ, ಕನ್ನಡಿಗ, ಕನ್ನಡ ಎಂಬುದರ ಪರಿಕಲ್ಪನೆ**

ಪ್ರಸ್ತುತ ಈ ಸಂದರ್ಭದಲ್ಲಿ ಕರ್ನಾಟಕ, ಕನ್ನಡಿಗ, ಕನ್ನಡ ಎಂಬುದರ ಕುರಿತಾಗಿ ಮಾತನಾಡುವ ಅನಿವಾರ್ಯತೆ ತೀವ್ರತೆಯನ್ನು ಪಡೆದುಕೊಳ್ಳುತ್ತಲಿದೆ. ಈ ಹಿಂದೆ ಅಖಂಡ ಕರ್ನಾಟಕ ಕಟ್ಟಲು ನಮ್ಮ ಹಿರಿಯರು ಪಟ್ಟಂತಹ ಪಾಡು ನಮ್ಮೆದುರಿರುವಾಗ ಅವರು ಯಾತಕ್ಕಾಗಿ, ಯಾವ ಕಾರಣಗಳಿಗಾಗಿ, ಯಾವ ತತ್ವ, ಸಿದ್ಧಾಂತ, ಸಾಂಸ್ಕೃತಿಕತೆಯ ಉಳಿವಿಗಾಗಿ ಶ್ರಮಿಸಿದರು ಎಂಬುದನ್ನು ಇದುವರೆಗೂ ನಾವು ನೋಡಿದ್ದೇವೆ. ಒಂದು ಕಡೆ ಬ್ರಿಟಿಷರ ವಿರುದ್ಧ ಸ್ವಾತಂತ್ರ ಪಡೆಯುವುದು, ಇನ್ನೊಂದು ಕಡೆ ಪ್ರಾಂತೀಯ ಸಂಸ್ಥಾನಗಳ ವಿರುದ್ಧ ಬಂಡೇಳುವುದು, ಇನ್ನೊಂದೆಡೆ ಸಮಗ್ರ ರಾಜ್ಯದ ಏಕೀಕರಣ ಹೋರಾಟ. ಹೀಗೆ ಒಂದರ ನಂತರ ಒಂದರಂತೆ ನಮ್ಮ ಹಿರಿಯರು ಹೋರಾಡಿ ನಮಗೆ ಇಂದು ಸ್ವತಂತ್ರ, ಸುವರ್ಣ ಕರ್ನಾಟಕದಲ್ಲಿ ಉಸಿರಾಡುವಂತೆ ಮಾಡಿದ್ದಾರೆ. ತದನಂತರ ಹಿರಿಯರು ದೊರಕಿಸಿಕೊಟ್ಟ ಕನ್ನಡ ನಾಡಿನ ಸಮಗ್ರತೆ ಮತ್ತು ಮೇಲಿಂದ ಮೇಲೆ ನಡೆಯುವ ಅನ್ಯಭಾಷೆಗಳ ದಬ್ಬಾಳಿಕೆ, ಗಡಿಭಾಗದ ಮೇಲಿನ ಅನ್ಯರಾಜ್ಯದ ಅತಿಕ್ರಮಣ ಹಾಗೂ ರಾಜ್ಯದ ಒಳಗಿನ ಕನ್ನಡಿಗರ ನಿರ್ಲಜ್ಜತೆಯ ವಿರುದ್ಧ ಬುದ್ಧಿಜೀವಿಗಳು, ಕನ್ನಡ ಹೋರಾಟಗಾರರು, ಕನ್ನಡ ಪರ ಸಂಘ-ಸಂಸ್ಥೆಗಳು, ಮೇಲಿಂದ ಮೇಲೆ ಬೀದಿಗಿಳಿದು ಹೋರಾಡಿ ರಕ್ಷಣೆ ನೀಡುತ್ತಿದ್ದಾರೆ. ಇದು ಸ್ವಾಗತಾರ್ಹ ಕೂಡಾ. ಆದರೆ ಇಂದು ಪರಿಸ್ಥಿತಿ ಬದಲಾಗಿದ್ದು ಸಮಗ್ರ ಏಕೀಕೃತ ಕರ್ನಾಟಕ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿದೆ. ಇದಕ್ಕೆ ಅನ್ಯಭಾಷೆಗಳು, ಗಡಿರಾಜ್ಯಗಳು ಅಥವಾ ಇನ್ನಾವುದೇ ಹೊರಗಿನ ಶಕ್ತಿಗಳು ಕಾರಣವಾಗಿರದೆ ಇದಕ್ಕೆ ನಾವು ಕನ್ನಡಿಗರೆ ಕಾರಣರಾಗಿದ್ದೇವೆ. ಬದಲಾದ ಪರಿಸ್ಥಿತಿಯಲ್ಲಿಯೂ ಇವರೆಗೂ ನಾವು ಐವತ್ತು ವರ್ಷಗಳ ಹಿಂದೆ ನಮ್ಮ ಹಿರಿಯರು ತಳೆದಿದ್ದ ಕರ್ನಾಟಕ-ಕನ್ನಡಿಗ-ಕನ್ನಡ ಎಂಬುವುದರ ಮೇಲಿನ ನಿಲುವುಗಳನ್ನು ನಾವು ಇವತ್ತಿಗೂ ಹಾಗೇ ಮುಂದುವರೆಸಿಕೊಂಡು ಬರುತ್ತಿದ್ದೇವೆ. ಇಲ್ಲಿ ನಾನು ಈ ಹಿಂದೆ ಅಂದರೆ ಹಿಂದಿನ ಎಲ್ಲ ಕನ್ನಡಪರ ತತ್ವ, ಸಿದ್ಧಾಂತ, ಸಂಸ್ಕೃತಿಗಳನ್ನು ವಿರೋಧಿಸುತ್ತಿಲ್ಲ. ಅವರೆಲ್ಲರ ಶ್ರಮದಿಂದಲೇ ನಾವು 'ಕನ್ನಡಿಗರು' ಎಂಬ ಅಸ್ಮಿತೆಯನ್ನು ಇಟ್ಟುಕೊಂಡಿದ್ದೇವೆ. ಆದರೆ ನಾನು ಇಲ್ಲಿ ಪ್ರಶ್ನಿಸುತ್ತಿರುವುದು ಏಕೀಕರಣದ ಸಂದರ್ಭದಲ್ಲಿ ಕಂಡುಕೊಂಡಂತಹ ಸವಾಲುಗಳು, ಇಂದು ಕೂಡಾ ಹಾಗೆ ಆ ಸವಾಲುಗಳನ್ನೇ ಕಂಡು ಕೊಳ್ಳುವುದು ಸೂಕ್ತವೇ? ಅಂದಿನ ಸ್ಥಿತಿ ಇವತ್ತು ಹಾಗೆಯೇ ಇದೆಯೆ ಎಂದು ನೋಡುವುದಾದರೆ, ಖಂಡಿತ ಇವತ್ತು ಏಕೀಕರಣದ ಸಂದರ್ಭದಲ್ಲಿನ ಸವಾಲುಗಳು ಪ್ರಸ್ತುತವಾಗಿ ಬದಲಾಗಿವೆ. ಅವತ್ತಿನ ಗಡಿಸಮಸ್ಯೆ, ನದಿನೀರಿನ ವಿವಾದಗಳು ೫೦ ವರ್ಷಗಳ ನಂತರವೂ ತೀರಿಲ್ಲವಾದರೂ 'ಕರ್ನಾಟಕ, ಕನ್ನಡಿಗ, ಕನ್ನಡ' ಎಂಬುದನ್ನು ತೆಗೆದುಕೊಂಡಾಗ ಅಂದಿನ ಸವಾಲುಗಳು ಇಂದು ಮುಖ್ಯವಾಗುತ್ತಿಲ್ಲ. ಅಂತಲೇ ಇಂದು 'ಕರ್ನಾಟಕ, ಕನ್ನಡಿಗ, ಕನ್ನಡ' ಎಂಬ ಪರಿಕಲ್ಪನೆಯನ್ನು ಕಟ್ಟಿಕೊಳ್ಳುವಲ್ಲಿ ನಾವು ೫ ದಶಕಗಳ ನಂತರವು ವಿಫಲರಾಗುತ್ತಿದ್ದೇವೆ ಎಂದರೆ ಕಾಲ, ಸಂದರ್ಭಗಳಿಗೆ ಈ ನಿಲುವುಗಳು ಬದಲಾಗುತ್ತವೆ

ಎಂದಂತಾಗುತ್ತದೆ. ಎಲ್ಲ ಕಾಲಕ್ಕೂ ಇವುಗಳಿಗೆ ಸಂಬಂಧಿಸಿದಂತೆ ಒಂದೇ ವ್ಯಾಖ್ಯಾನವನ್ನು ನೀಡಲು ಸಾಧ್ಯವಿಲ್ಲ. ಆ ನಿಲುವು ಚಲನಶೀಲವಾಗುತ್ತಿರುತ್ತದೆ ಎಂಬುದನ್ನು ನಾವು ಇಲ್ಲಿ ಕಂಡುಕೊಳ್ಳಬಹುದು. ಪ್ರಸ್ತುತ ಸಂದರ್ಭದಲ್ಲಿ ಈ ಮೊದಲಿನ ನಿಲುವುಗಳು ತಮ್ಮ ಪ್ರಸ್ತುತತೆಯನ್ನು ಕಳೆದುಕೊಳ್ಳುತ್ತಾ ಹೊಸ ಹೊಸ ನಿಲುವುಗಳಿಗೆ ಬದಲಾಗುತ್ತಿವೆ. ಈ ಮೊದಲು ನಾವು ಕರ್ನಾಟಕದ ಭೌಗೋಳಿಕ ವ್ಯಾಪ್ತಿಯನ್ನು ಕವಿರಾಜಮಾರ್ಗದಿಂದ ಗುರುತಿಸುತ್ತಿದ್ದೆವು. ಆದರೆ ಮಾರ್ಗಕಾರ ಹೇಳಿದ ಕನ್ನಡ ನಾಡಿನ ವಿಸ್ತಾರವನ್ನು ಇವತ್ತು ಒಪ್ಪುವಂತಿಲ್ಲ. ಇನ್ನೂ ನಾವು ಅವತ್ತಿನ ಆ ನಿಲುವಿನೆಡೆಗೆ ಮುಖ ಮಾಡುವಂತಾದರೆ ಅದರಿಂದ ಎಷ್ಟು ಸಮಗ್ರತೆಯನ್ನು ಸಾಧಿಸಲು ಸಾಧ್ಯ, ಅಂತಲೆ ಇಂದು ನಾವು 'ಕರ್ನಾಟಕ, ಕನ್ನಡಿಗ, ಕನ್ನಡ' ಎಂಬುದಕ್ಕೆ ಹೊಸ ವ್ಯಾಖ್ಯಾನವನ್ನು ಕಂಡುಕೊಳ್ಳಬೇಕಾಗಿದೆ. ಹಾಗಾದರೆ ಹೊಸ ವ್ಯಾಖ್ಯಾನವನ್ನು ಭೌಗೋಳಿಕ ನೆಲೆಯಲ್ಲಿ ಅಥವಾ ಚಾರಿತ್ರಿಕ ನೆಲೆಯಲ್ಲಿ ಕಟ್ಟುವುದು ಪ್ರಸ್ತುತವಾಗಿ ಎಷ್ಟು ಸಮಂಜಸ ವಾಗುತ್ತದೆ. ಅಂತಲೇ ನಾವು ಇವತ್ತು ಈವರೆಗೂ ಕಟ್ಟಲ್ಪಟ್ಟಂತಹ ಪ್ರಮೇಯಗಳಿಂದೊಡಗೂಡಿದಂತೆ ಇದಕ್ಕೆ ಮುಂದುವರಿದು ಈ ಭೌಗೋಳಿಕ, ಚಾರಿತ್ರಿಕ ನೆಲೆಗಳಿಗಿಂತ ಸಾಂಸ್ಕೃತಿಕವಾಗಿ 'ಕರ್ನಾಟಕ, ಕನ್ನಡಿಗ, ಕನ್ನಡ'ದ ಪರಿಕಲ್ಪನೆಯನ್ನು ಕಟ್ಟಬೇಕಾಗಿದೆ. ಸಾಂಸ್ಕೃತಿಕವಾಗಿ 'ಕರ್ನಾಟಕ, ಕನ್ನಡಿಗ, ಕನ್ನಡ'ವನ್ನು ಕಟ್ಟುವಾಗ ಸಮಗ್ರವಾಗಿ ಕರ್ನಾಟಕವನ್ನು ತೆಗೆದುಕೊಳ್ಳದೆ ಸೀಮಿತ ವ್ಯಾಪ್ತಿಯನ್ನು ತೆಗೆದುಕೊಳ್ಳುವುದು ಹೆಚ್ಚು ಸೂಕ್ತವೆನಿಸುತ್ತದೆ. ಏಕೆಂದರೆ ಇವತ್ತು ಇಡೀ ಕರ್ನಾಟಕದ ಬೆಂಗಳೂರು, ಕಾಸರಗೋಡು, ಬೆಳಗಾವಿ, ಆದೋನಿ, ಪಾವಗಡ, ಕೋಲಾರಗಳಲ್ಲಿನ ಸಾಮಾಜಿಕ, ಭಾಷಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳು ಒಂದೇ ತೆರನಾಗಿಲ್ಲ. ಅದಕ್ಕಾಗಿಯೇ ಒಂದು ಸೀಮಿತ ವ್ಯಾಪ್ತಿಯನ್ನು ಬಳಸಿಕೊಂಡು ಅದಕ್ಕೊಂದು ಪರಿಹಾರ ಕಂಡುಕೊಂಡ ನಂತರವೆ ಅಲ್ಲಿ ಕಂಡುಕೊಂಡಂತಹ ಫಲಿತಾಂಶಗಳ ಆಧಾರದ ಮೇಲೆಯೇ 'ಕರ್ನಾಟಕ, ಕನ್ನಡಿಗ, ಕನ್ನಡ'ದ ಬಗ್ಗೆ ಒಂದು ನಿಲುವು ತಾಳಲು ಸಾಧ್ಯವಾಗುತ್ತದೆ. ಆದ್ದರಿಂದ ಈ ಅಧ್ಯಯನದಲ್ಲಿ 'ಕರ್ನಾಟಕ, ಕನ್ನಡಿಗ, ಕನ್ನಡ'ದ ಮರು ವ್ಯಾಖ್ಯಾನವನ್ನು ಗುಲಬರ್ಗಾ ಜಿಲ್ಲೆಯ ಚಿಂಚೋಳಿ, ಸೇಡಂ, ಯಾದಗೀರ ತಾಲೂಕುಗಳಿಗೆ ಹೊಂದಿಕೊಂಡಿರುವ ಕರ್ನಾಟಕ-ಆಂಧ್ರ ಗಡಿಭಾಗದ ಗಡಿಗ್ರಾಮಗಳನ್ನು ಅಧ್ಯಯನಕ್ಕಾಗಿ ಬಳಸಿಕೊಂಡು ಇಲ್ಲಿನ ಸ್ಥಿತಿಗತಿಗಳ ಮೇಲೆ 'ಕರ್ನಾಟಕ, ಕನ್ನಡಿಗ, ಕನ್ನಡ'ದ ಮೇಲೆ ಒಂದು ನಿಲುವನ್ನು ವ್ಯಾಖ್ಯಾನಿಸುತ್ತಿದ್ದೇನೆ.

ಈ ಗಡಿಭಾಗದಲ್ಲಿ ಕ್ಷೇತ್ರಕ್ಕಾಗಿ ಹೋದಾಗ ಅಲ್ಲಿನ ಸಾಮಾನ್ಯ ಜನರು ಪ್ರಮುಖವಾಗಿ ಎತ್ತುವ ಪ್ರಶ್ನೆಯೆಂದರೆ **ಕರ್ನಾಟಕ ಎಂದರೆ ಯಾವುದು? ಹಾಗೂ ಕನ್ನಡಿಗರೆಂದರೆ ಯಾರು?** ಕರ್ನಾಟಕದಲ್ಲಿ ರುವವರೆಲ್ಲರೂ ಕನ್ನಡಿಗರಾದರೆ ಕರ್ನಾಟಕದಿಂದ ಸದ್ಯ ಹೊರಗುಳಿದ ನಮ್ಮಂತವರ ಗುರುತು ಏನು. ನಮ್ಮನ್ನು ಯಾವುದರೊಂದಿಗೆ ಗುರುತಿಸಿಕೊಳ್ಳಬೇಕು. ಮೇಲ್ನೋಟಕ್ಕೆ ಈ ಪ್ರಶ್ನೆಗಳು ಸಹಜತೆಯಿಂದ ಕೂಡಿದ್ದರು ಇವರು ಕೇಳುವ ಪ್ರಶ್ನೆಗಳಿಗೆ ವಾಸ್ತವದಲ್ಲಿ ಉತ್ತರಿಸಲಾಗದ ಸ್ಥಿತಿ ನಮ್ಮಲ್ಲಿದೆ. 'ಕರ್ನಾಟಕ, ಕನ್ನಡಿಗ, ಕನ್ನಡ' ಎನ್ನುವ ಈ ಪ್ರಶ್ನೆ ಸದ್ಯ ಹಲವು ಮಜಲುಗಳಾಗಿ ಅನೇಕ ಪ್ರಶ್ನೆಗಳಾಗಿ ಉಳಿದುಬಿಟ್ಟಿವೆ. ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಇಲ್ಲಿ ಪ್ರಸ್ತುತವಾಗಿದೆ.

ಮೊದಲನೆಯದಾಗಿ ನೃಪತುಂಗನು ಕವಿರಾಜಮಾರ್ಗದಲ್ಲಿ ಕನ್ನಡ ಎಂಬುದನ್ನು 'ನುಡಿ' ಎಂಬ ಅರ್ಥದಲ್ಲಿ ಪ್ರಯೋಗಿಸಿರುವಂತೆ 'ನಾಡು' ಎಂಬರ್ಥದಲ್ಲಿಯೂ ಪ್ರಯೋಗಿಸಿದ್ದನ್ನು ಕಾಣಬಹುದಾಗಿದೆ. "ಕಾವೇರಿಯಿಂದಮಾ ಗೋದಾವರಿವರಮಿರ್ದಾ ನಾಡು. ಅದು ಕನ್ನಡದೊಳ್ ಭಾವಿಸಿದ ಜನಪದಂ, ಪುಲಿಗೆರೆ, ಕಿಸುವೊಳಲ್, ಒಕ್ಕುಂದ, ಕಪಣನಗರದ ಈ ನಾಡು ಕನ್ನಡದ ತಿರುಳ್" ಎಂಬಲ್ಲಿ ಕನ್ನಡಕ್ಕೆ ದೇಶವೆಂದಲ್ಲದೆ ಬೇರೆ ಅರ್ಥದಲ್ಲಿ ಹೇಳಿಲ್ಲ. 'ಮಲ್ಲೆಲರಿಂ ಪೊತ ಕೊಳಂಗಿಳಿಂ ... ಕನ್ನಡ ಎನಿಪ್ಪ ಆ ನಾಡು ಚೆಲ್ವಾಯ್ತು' ಎಂದು ಆಂಡಯ್ಯ ಹೇಳುವಲ್ಲಿ, ಕನ್ನಡ ಎಂಬುದು ಒಂದು ಭಾಷೆ ಎನ್ನುವುದಕ್ಕಿಂತ ನಾಡಿನ ಬಗೆಗಿನ ಹೇಳಿಕೆ ಎಂಬುದರಲ್ಲಿ ಅನುಮಾನವೇ ಇಲ್ಲ. ನನ್ನೊಲ್ ಎಂಬ ತಮಿಳು ವ್ಯಾಕರಣಕ್ಕೆ ೧೩ನೇ ಶತಮಾನದಲ್ಲಿ ಮಲ್ಲಿನಾಥರು ಬರೆದ ಟೀಕೆಯಲ್ಲಿ 'ಕನ್ನಡಂ' ಎಂಬ ಶಬ್ದವು ಬಂದಿದ್ದು 'ಕನ್ನಡಂ' ಎಂದರೆ ಭರತಖಂಡದ ೫೬ ದೇಶಗಳಲ್ಲಿ ಒಂದು ದೇಶವೆಂದು, ಹಲವು ಭಾಷೆಗಳಲ್ಲಿ ಒಂದು ಭಾಷೆಯೆಂದು ಹೇಳಲಾಗಿದೆ. ಒಟ್ಟಿನಲ್ಲಿ ಕನ್ನಡ ಎಂದರೆ ಅದೊಂದು ದೇಶಿವಾಚಕವೂ ಹೌದು, ಭಾಷೆ ಸೂಚಕವೂ ಹೌದು, ಇನ್ನು ಪ್ರಸಿದ್ಧ ಕನ್ನಡ ವ್ಯಾಕರಣಕಾರನಾದ ಕೇಶೀರಾಜನು "ಕನ್ನಡಿಗರು ಎಂದರೆ ಕನ್ನಡದ ಮೂಲಿಗರು, ಮೊದಲಿಗರು; ಕನ್ನಡದ ಮೂಲ ಜನಾಂಗ ಎಂದಿದ್ದಾನೆ. ಆದರೆ ನಂತರ ಬಂದ ಭಟ್ಟಕಳಂಕನು "ಜನನಂ ಹಿ ಪ್ರಾದುರ್ಭಾವ ತತ್ರೈವೊತ್ಪತ್ತಿ: ಇತಿ ಆಸ್ತಿ ಎವ ಅರ್ಥ | ಭೇದೋತ ನ ಇತಿ ನದ್ವಂದ್ವಾನುಪಪತ್ರಿ; ಇತಿ ಅಹ..... ಕರಹಡಿಗಂ | ಕರಹಡೋ ದೇಶ ವಿಶೇಷ ||" ಅಂದರೆ ಕನ್ನಡದಲ್ಲಿ ಹುಟ್ಟಿದವರೂ ಕನ್ನಡಿಗರು; ಕನ್ನಡದಲ್ಲಿ ಬಂದು ನೆಲೆಸಿ ಬೆಳೆದವರೂ ಕನ್ನಡಿಗರೇ ಎಂದು ಭಟ್ಟಕಳಂಕನು ಹೇಳುತ್ತಾನೆ. ಆದುದರಿಂದ ಯಾವ ಬಗೆಯಿಂದ ವಿಚಾರಿಸಿದರೂ 'ಕನ್ನಡಿಗ' ಎಂಬ ಹೆಸರು ಅವನಾಡುವ ಮಾತಿನಿಂದ ಬಂದಿರುವುದಿಲ್ಲ. ಬದಲಾಗಿ ಆತನು ನೆಲೆಸಿದ ನಾಡಿನಿಂದ ಬಂದದ್ದು ಎಂಬುದು ಸ್ಪಷ್ಟವಾಗುತ್ತದೆ. ಈ ಮೇಲಿನ ಕವಿರಾಜಮಾರ್ಗಕಾರ, ಆಂಡಯ್ಯ, ಮಲ್ಲಿನಾಥ, ಭಟ್ಟಾಕಳಂಕ ಇವರೆಲ್ಲರ ಮಾತಿನಂತೆ ಕನ್ನಡ ಎಂದರೆ ಒಂದು ಭಾಷೆಯಲ್ಲ. ಅದು 'ದೇಶವಾಚಕ' ಎಂಬುದು ಸ್ಪಷ್ಟವಾಗುತ್ತದೆ. ಇದು ಪ್ರಾಚೀನ ಕವಿಗಳ ಮಾತಾದರೆ ನಂತರದಲ್ಲಿನ ಆಧುನಿಕ ಚಿಂತಕರು 'ಕನ್ನಡ ನಾಡು, ಕನ್ನಡಿಗ' ಎಂಬುದರ ಪರಿಕಲ್ಪನೆಯನ್ನು ಪ್ರಸ್ತಾಪಿಸುತ್ತ ತಮ್ಮ ತಮ್ಮ ನಿಲುವುಗಳನ್ನು ಪ್ರಕಟಿಸಿದ್ದರು. ಇತ್ತೀಚಿನ ಕೆಲವು ವರ್ಷಗಳ ಹಿಂದೆ ಕನ್ನಡಿಗರ ಬಗ್ಗೆ ಸರೋಜಿನಿ ಮಹಿಷಿಯವರು ತಮ್ಮ ವರದಿಯಲ್ಲಿ "ಹದಿನೈದು ವರ್ಷಗಳ ಕಾಲ ರಾಜ್ಯದಲ್ಲಿ ವಾಸಿಸುತ್ತಿದ್ದು, ಕನ್ನಡ ಓದಲು ಬರೆಯಲು ಬರುವವರೆಲ್ಲಾ ಕನ್ನಡಿಗರು" ಎಂದು ವ್ಯಾಖ್ಯಾನಿಸುತ್ತಾ ಇಂಥವರನ್ನು ಕನ್ನಡಿಗರೆಂದು ಪರಿಗಣಿಸಬಹುದೆಂದರು. ಬರಗೂರು ರಾಮಚಂದ್ರಪ್ಪನವರು ಕನ್ನಡಿಗ ಎಂಬುದನ್ನು ತಾಂತ್ರಿಕ ಹಾಗೂ ತಾತ್ವಿಕದ ಎರಡು ನೆಲೆಗಳಲ್ಲಿ ಗುರುತಿಸಲು ಪ್ರಯತ್ನಿಸುತ್ತಾರೆ.

ಸರೋಜಿನಿ ಮಹಿಷಿಯವರ ಮಾತನ್ನು ಒಪ್ಪುವುದಾದರೆ ಕೇವಲ ೧೫ ವರ್ಷಗಳಿಂದ ಇಲ್ಲಿ ನೆಲೆಸಿ ಕನ್ನಡ ಓದಲು-ಬರೆಯಲು ಬರುವವರನ್ನೆಲ್ಲ ಕನ್ನಡಿಗರೆಂದು ಪರಿಗಣಿಸಿದರೆ ಇಂದು ಅಂತವರ ಸಂಖ್ಯೆ ನಮ್ಮ ರಾಜ್ಯದಲ್ಲಿ ಬಹಳಷ್ಟಿದೆ. ೧೫-೨೦ ವರ್ಷಗಳಿಂದ ಇಲ್ಲಿ ನೆಲೆಸಿ, ಕನ್ನಡ ಓದಲು ಬರೆಯಲು ಬಂದರೆ, ಅವರನ್ನು ಕನ್ನಡಿಗರೆಂದು ಅಪ್ಪಿಕೊಂಡರೆ, ನಮ್ಮ ಸಂಸ್ಕೃತಿ, ನಮ್ಮ ಆಚಾರ-ವಿಚಾರಗಳನ್ನು

ಅವರು ಅಪ್ಪಿಕೊಳ್ಳಲು ಸಾಧ್ಯವೇ? ಕೇವಲ ಅನಿವಾರ್ಯ ಕಾರಣಗಳಿಂದಾಗಿ ಇಲ್ಲಿ ಬಂದು ನೆಲೆಸಿದ ಮಾತ್ರಕ್ಕೆ ಅವರನ್ನೆಲ್ಲ ಕನ್ನಡಿಗರೆನ್ನಲು ಸಾಧ್ಯವೇ? ಈ ಮಾತನ್ನು ಒಪ್ಪುವುದಾದರೇ ಏಕೀಕರಣದ ನಂತರ ಸುಮಾರು ೫೦ ವರ್ಷಗಳಿಂದ ಕರ್ನಾಟಕದ ಗಡಿಯಿಂದ ಹೊರಗುಳಿದವರನ್ನು ಏನೆಂದು ಕರೆಯಬೇಕು? ಈ ೫ ದಶಕಗಳ ನಂತರ ಗಡಿಯಿಂದ ಹೊರಗುಳಿದವರು ಅಲ್ಲಿನ ಭಾಷೆಯನ್ನು ಸಂಪರ್ಕಕ್ಕಾಗಿ ತಮ್ಮಲ್ಲಿ ಬೆಳೆಸಿಕೊಂಡರು. ಮುಂದೆ ತಮ್ಮ ಮಕ್ಕಳಿಗೆ ಕನ್ನಡಕ್ಕೆ ಬದಲಾಗಿ ತೆಲುಗು ಶಿಕ್ಷಣವನ್ನು ಕಲಿಸುವುದು ಅನಿವಾರ್ಯವಾಯಿತು. ಅವರ ಮಕ್ಕಳಲ್ಲಿ ಅನೇಕರಿಗೆ ಕನ್ನಡ ಓದಲು-ಬರೆಯಲು ಬರುವುದಿಲ್ಲ ಆಯಾ ಪರಿಸರದಲ್ಲಿನ ಭಾಷೆಗಳನ್ನು ನಾವು ಅನಿವಾರ್ಯವಾಗಿ ಬಳಸಬೇಕಾಗುತ್ತದೆ. ಅಂದ ಮಾತ್ರಕ್ಕೆ ಅವರನ್ನು ನೀವು ಕನ್ನಡಿಗರಲ್ಲ ಎಂದರೆ ಸಮಂಜಸವೇ. ಭೌತಿಕವಾಗಿ ಕನ್ನಡ ನಾಡಿನ ಮೇರೆಗಳಿಂದ ಹೊರಗುಳಿದ ಇವರು ಮಾನಸಿಕವಾಗಿ ಇಂದಿಗೂ ಕನ್ನಡಿಗರಾಗಿದ್ದಾರೆ. ಆದ್ದರಿಂದಲೆ ಇಂಥವರ ಮನದಾಳದ ಮನೋವ್ಯಥೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಹಾಗಾದರೇ ನಾವು ಒಟ್ಟಾರೆಯಾಗಿ 'ಕನ್ನಡಿಗರು' ಎಂದರೆ ಯಾರು? ಎಂಬುದನ್ನು ಹೇಗೆ ಕಂಡುಕೊಳ್ಳಬೇಕೆಂಬುವುದೇ ಪ್ರಸ್ತುತ ಸಂದರ್ಭದಲ್ಲಿನ ಸಮಸ್ಯೆಯಾಗಿದೆ. ನಾವು ಇವತ್ತು ಯಾವ ನೆಲೆಯಲ್ಲಿ, ಯಾವ ದೃಷ್ಟಿಕೋನದಲ್ಲಿ ಇದಕ್ಕೆ ಪರಿಹಾರ ಕಂಡುಕೊಳ್ಳಬಹುದು. ಇಲ್ಲಿಯವರೆಗೂ ಕನ್ನಡಿಗರ ಬಗ್ಗೆ ಇದ್ದ ಧೋರಣೆಗಳು, ಕನ್ನಡಿಗರ ಮನೋಧರ್ಮಗಳು, ಇವತ್ತಿನ ಸಂದರ್ಭಕ್ಕೆ ಸರಿಹೊಂದುತ್ತಿಲ್ಲ. ಒಂದು ನಿರ್ದಿಷ್ಟ ಭೌಗೋಳಿಕ ನೆಲೆಯಲ್ಲಿ ನೆಲೆ ನಿಂತ ಇಲ್ಲವೆ ಒಂದು ನಿರ್ದಿಷ್ಟ ಮಾತೃಭಾಷೆಯ ಆಧಾರದಿಂದ ಕನ್ನಡಿಗರನ್ನು ಗುರುತಿಸಲು ಸಾಧ್ಯವೇ. ಒಂದು ವೇಳೆ ಕರ್ನಾಟಕದ ಭೌಗೋಳಿಕ ನೆಲೆಯಲ್ಲಿ ನೆಲೆ ನಿಂತವರನ್ನೆಲ್ಲ ಕನ್ನಡಿಗರು ಎನ್ನುವುದಾದರೇ ತಾಂತ್ರಿಕ ಕಾರಣಗಳಿಂದ ಏಕೀಕರಣ ನಂತರದ ಸಂದರ್ಭದಲ್ಲಿ ಹೊರಗುಳಿದು ಇಂದಿಗೂ ಕನ್ನಡಿಗರ ಜೊತೆಗೆ ಮಾನಸಿಕ ಸಂಬಂಧ ವನ್ನು ಉಳಿಸಿಕೊಂಡ ಗಡಿಯಿಂದ ಹೊರಗುಳಿದವರು ಕನ್ನಡಿಗರಲ್ಲವೇ? ಕವಿರಾಜಮಾರ್ಗಕಾರ ಹೇಳಿದ ಕನ್ನಡ ನಾಡಿನ ವಿಸ್ತಾರ ಇವತ್ತು ಎಲ್ಲಿಯೂ ಕಂಡುಬರುವುದಿಲ್ಲ. ಗೋದಾವರಿ ನದಿಯ ಕನ್ನಡಿಗರೆಲ್ಲ ಇವತ್ತು ಭೌಗೋಳಿಕವಾಗಿ ಕನ್ನಡಿಗರಾಗಿಲ್ಲ, ಅಂದ ಮಾತ್ರಕ್ಕೆ ಕನ್ನಡಿಗರನ್ನು ಗುರುತಿಸುವಲ್ಲಿ ನಾವು ಭೌಗೋಳಿಕ ನೆಲೆಯನ್ನು ಪ್ರಮುಖವಾಗಿಸಿಕೊಳ್ಳದೆ ಈ ಭೌಗೋಳಿಕ ನೆಲೆಯಿಂದ ಹೊರಗುಳಿದವರನ್ನೆಲ್ಲ, ಅವರು ಹೊಂದಿದ ಸಾಂಸ್ಕೃತಿಕ ಸಂಬಂಧಗಳ ಮೇಲೆ ಅವರನ್ನೆಲ್ಲ ಕನ್ನಡಿಗರೆಂದು ಗುರುತಿಸಬೇಕು. ಇದರಂತೆಯೇ ಕನ್ನಡ ಮಾತೃಭಾಷೆಯನ್ನು ಹೊಂದಿರುವವರೆಲ್ಲ ಕನ್ನಡಿಗರು ನಿಜ. ಆದರೆ ಕನ್ನಡವನ್ನು ಮಾತೃಭಾಷೆಯಾಗಿ ಹೊಂದಿಲ್ಲದಿದ್ದವರು ಕನ್ನಡಿಗರಲ್ಲವೇ ಎಂಬುವುದಾದರೇ ಖಂಡಿತ ಅವರು ಕನ್ನಡಿಗರೇ. ಕನ್ನಡಕ್ಕೆ ಅಪಾರ ಕೊಡುಗೆ ನೀಡಿದ ದ.ರಾ. ಬೇಂದ್ರೆ, ಶಿವರಾಮ ಕಾರಂತ, ಮಾಸ್ತಿ, ಜಿ.ಪಿ. ರಾಜರತ್ನಂ, ಎಂ. ಗೋವಿಂದ ಪೈ ಮುಂತಾದವರ ಮಾತೃಭಾಷೆ ಬೇರೆ ಬೇರೆಯಾಗಿತ್ತು. ಇವರನ್ನು ಉದಾಹರಿಸುವಾಗ ಮಾತೃಭಾಷೆಯ ಪ್ರಶ್ನೆ ನಮಗೆ ಎದುರಾಗದಿದ್ದಾಗ, ಇನ್ನುಳಿದವರ ಪ್ರಶ್ನೆ ಬಂದಾಗ ಏಕೆ ಕನ್ನಡ ಮಾತೃಭಾಷೆ ಯನ್ನು ಪರಿಗಣಿಸುತ್ತೇವೆ.

ಮೇಲಿನ ಒಟ್ಟು ಅಂಶಗಳಿಂದ ಇಲ್ಲಿ ಮಾತೃಭಾಷೆ ಮತ್ತು ಭೌಗೋಳಿಕ ನೆಲೆ ಇವುಗಳ ಆಧಾರದ ಮೇಲೆ ಇವತ್ತು ಕನ್ನಡಿಗರನ್ನು ಗುರುತಿಸಿ ಇವರು ಕನ್ನಡಿಗರೆಂದು ಕರೆಯಲು ಸಾಧ್ಯವಿಲ್ಲ. ಹೀಗಾಗಿ

ಇವತ್ತು ಕನ್ನಡ ನಾಡಿಗೆ ಯಾರಾದರೂ ಎಲ್ಲಿಂದಲಾದರೂ ಬಂದಿರಲಿ, ಅವರ ಮಾತೃಭಾಷೆ ಯಾವುದೇ ಆಗಿರಲಿ ಅಥವಾ ಕರ್ನಾಟಕದ ಹೊರಗುಳಿದವರೇ ಆಗಿರಲಿ ಅಂಥವರಲ್ಲಿ ಕನ್ನಡ ಪ್ರೇಮವನ್ನು, ಮುಖ್ಯವಾಗಿ ಅವರಲ್ಲಿನ ಕನ್ನಡದ ಸಂಸ್ಕೃತಿಯನ್ನು ಗುರುತಿಸಿ ಅವರನ್ನು ಕನ್ನಡಿಗರೆಂದು ಸ್ವೀಕರಿಸಬೇಕು.

ಆದ್ದರಿಂದ ಇವತ್ತು ಭೌಗೋಳಿಕ ನೆಲೆ ಮತ್ತು ಮಾತೃಭಾಷೆಯ ಆಧಾರಗಳನ್ನು ಬದಿಗೊತ್ತಿ, ಅಲ್ಲಿನ ಕನ್ನಡ ಮನಸ್ಸುಗಳ ಸಾಂಸ್ಕೃತಿಕತೆಯನ್ನು ಒಗ್ಗೂಡಿಸುವುದರೊಂದಿಗೆ ಸಮೃದ್ಧ ಕರ್ನಾಟಕವನ್ನು ಕಟ್ಟಲು ಪ್ರಯತ್ನಿಸಬೇಕಾಗಿದೆ. ಅಂತಲೇ ಈ ಅಧ್ಯಯನದ ವ್ಯಾಪ್ತಿಯಲ್ಲಿನ ಗಡಿಗ್ರಾಮಗಳಲ್ಲಿ ಭಾಷೆ ಮತ್ತು ಗಡಿಗಳನ್ನು ಲೆಕ್ಕಿಸದೇ, ಅವರು ಯಾವುದೇ ಗಡಿಯಲ್ಲಿರಲಿ ಯಾವುದೇ ಭಾಷೆಯನ್ನಾಡುತ್ತಿರಲಿ, ಅದನ್ನು ಪರಿಗಣಿಸದೆ, ಅವರಲ್ಲಿನ ಮತ್ತು ಅಲ್ಲಿನ ಕನ್ನಡದ ಮನಸ್ಸುಗಳನ್ನು ಇಲ್ಲಿ ಹಿಡಿದಿಡಲಾಗಿದೆ. ಇಂತಹ ಕನ್ನಡದ ಮನಸ್ಸುಗಳಿಗಾಗಿಯೇ ಕಾರ್ಯತಂತ್ರಗಳನ್ನು ರೂಪಿಸಿ ಯಶಸ್ವಿಯಾಗಬೇಕು. ಆಗಲೇ ಗಡಿಭಾಗದಲ್ಲಿನ ಇಂತಹ ಗಡಿಗ್ರಾಮಗಳು ಕನ್ನಡ ನಾಡಿನ ಗ್ರಾಮಗಳಾಗುತ್ತವೆ.

**೫.೩. ಗಡಿಭಾಗದ ಕನ್ನಡಿಗರ ಮೇಲಿನ ಒತ್ತಡಗಳು**

**೫.೩.೧. ನೈಸರ್ಗಿಕ ಒತ್ತಡಗಳು :**

ಪ್ರತಿಯೊಂದು ಜಡ-ಚರ ವಸ್ತುಗಳು ನಿಸರ್ಗದ ಮಡಿಲಲ್ಲಿ ಜೀವಿಸುವಂತೆ ಮನುಷ್ಯನು ಈ ಪ್ರಕೃತಿಯಲ್ಲಿಯೇ ಉಸಿರಾಡುತ್ತಾನೆ. ನಿಸರ್ಗದ ಮಡಿಲಲ್ಲಿ ಜೀವಿಸುವ ಮನುಷ್ಯನಿಗೆ ಪ್ರಕೃತಿ ತಿರುಗಿ ಬಿದ್ದಾಗ, ನೆರೆ, ಬರ, ಭೂಕಂಪ, ಸಾಂಕ್ರಾಮಿಕ ರೋಗಗಳು ಸಂಭವಿಸಿ ಅಲ್ಲಿ ಜೀವಿಸುವುದು ದುಸ್ತರ ವಾಗುತ್ತದೆ. ಈ ಕಾರಣಗಳಿಗಾಗಿ ಒಂದು, ಇಲ್ಲಿಂದ ಬೇರೆ ಕಡೆಗೆ ವಲಸೆ ಹೋಗುವುದು. ಇನ್ನೊಂದು ಈ ಸಂಕಷ್ಟಗಳಿಗೆ ಒಳಗಾಗಿ ಅಲ್ಲಿಯ ಬದುಕನ್ನು ಸಾಗಿಸುವುದು. ಈ ಎರಡರಲ್ಲಿ ಅನೇಕರು ಎರಡನೆಯದನ್ನೇ ಹೆಚ್ಚಾಗಿ ಅನುಸರಿಸುತ್ತಾರೆ. ಇದಕ್ಕೆ ಅವರ ಭಾವನಾತ್ಮಕ ಸಂಬಂಧದ ಕಾರಣ ಇವರಿಗೆ ಮುಖ್ಯವಾಗುತ್ತದೆ. ಕ್ರಿ.ಶ. ೧೮೦೪, ಕ್ರಿ.ಶ. ೧೮೧೯, ಕ್ರಿ.ಶ. ೧೮೫೪, ಕ್ರಿ.ಶ. ೧೮೭೩, ಕ್ರಿ.ಶ. ೧೮೭೭-೭೮, ಕ್ರಿ.ಶ. ೧೮೯೭, ಕ್ರಿ.ಶ. ೧೮೯೯-೧೯೦೦, ಕ್ರಿ.ಶ. ೧೯೨೪, ಕ್ರಿ.ಶ. ೧೯೪೦, ಕ್ರಿ.ಶ. ೧೯೭೦, ಕ್ರಿ.ಶ. ೧೯೮೮-೯೯ರಲ್ಲಿ ಈ ಪ್ರದೇಶದಲ್ಲಿ ಭೀಕರ ಬರಗಾಲಗಳು ಸಂಭವಿಸಿದವು. ಇವು ದಾಖಲೆಗಳಲ್ಲಿ ಕಂಡುಬಂದ ೧೩ ಭೀಕರ ಬರಗಾಲಗಳು. ಉಳಿದಂತೆ ದಾಖಲಾಗದ ಅದೆಷ್ಟು ಬರಗಾಲಗಳು ಇಲ್ಲಿ ಸಂಭವಿಸಿವೆಯೋ. ಒಂದು ಕಡೆ ಅತೀ ಮಳೆಯಿಂದಾಗಿ ಕೃಷಿಭೂಮಿಯಲ್ಲಿ ನೀರು ನಿಂತು ಬಿತ್ತನೆ ಮಾಡಲು ಸಾಧ್ಯವಾಗದೆ ಇದ್ದರೆ, ಇನ್ನೊಂದು ಕಡೆ ಬೀಜ ಬಿತ್ತಲು ಒಂದು ಹನಿ ಮಳೆ ಬೀಳದೆ ಕೃಷಿ ಭೂಮಿ ಬರಡಾಗುತ್ತದೆ. ಮತ್ತೊಂದು ಕಡೆ ರೈತ ಕಷ್ಟಪಟ್ಟು ಬೀಜ ಭಿತ್ತಿ ಮೊಳಕೆಯೊಡೆದ ಬೆಳೆಯನ್ನು ಜೋಪಾನ ಮಾಡಿ ಇನ್ನೇನು ರಾಶಿ ಮಾಡಬೇಕೆನ್ನುವಷ್ಟರಲ್ಲಿ ಬೇಡವಾದ ಅವಗಡ ಮಳೆಯಿಂದಾಗಿ ತೆನೆ ಕಟ್ಟಿದ ಬೆಳೆ ನೆಲಕ್ಕೆ ಬಿದ್ದು "ಕೈಗೆ ಬಂದಿದ್ದು ಬಾಯಿಗೆ ಬರಲಿಲ್ಲ" ಎಂಬ ಸ್ಥಿತಿ ಉಂಟಾಗುತ್ತದೆ. ಇಂತಹ ಸಮಸ್ಯೆ ಗಳಿಂದಾಗಿ ಸಣ್ಣ ಮತ್ತು ಅತೀ ಸಣ್ಣ ರೈತರು ತೆರಿಗೆ ಕಟ್ಟಲು ಹಣವಿಲ್ಲದೆ ಇದ್ದ ಒಟ್ಟು ಭೂಮಿ ಯಲ್ಲಿನ ಸ್ವಲ್ಪ ಭೂಮಿಯನ್ನು ಮಾರಿ ತೆರಿಗೆ ಕಟ್ಟಿ ಉಳಿದ ಹೊಲಗದ್ದೆಗಳನ್ನು ಉಳಿಸಿಕೊಂಡ ಪ್ರಸಂಗಗಳು ಇಲ್ಲೆಲ್ಲಾ ಕಂಡುಬರುತ್ತವೆ.

ಹಿಂದಿನ ೩-೪ ವರ್ಷಗಳಲ್ಲಿ (ಎಸ್.ಎಂ. ಕೃಷ್ಣಾ ಅಧಿಕಾರಾವಧಿಯಲ್ಲಿ) ಭೀಕರ ಬರಗಾಲ
ದುರಿಸಿದ್ದನ್ನು ಇಂದಿಗೂ ಈ ಭಾಗದ ಜನರು ನೆನಪಿಸಿಕೊಳ್ಳುತ್ತಾರೆ. "ಮಳೆಯಾಗದೆ ಭೂಮಿಯಲ್ಲಿ
ಕಿದ ಬೀಜ ಸತ್ತು ಹೋದವು. ಸಾಕಿದ ಹಸು-ಎಮ್ಮೆ, ಎತ್ತುಗಳಿಗೆ ತಿನ್ನಲು ಹುಲ್ಲು ಸಿಗದೆ ಪರದಾಡಿದವು.
ಳ್ಳ-ಕೊಳ್ಳ, ಕೆರೆಗಳೆಲ್ಲ ಒಣಗಿ ಬರಿದಾಗಿ ಪ್ರಾಣಿಗಳಿಗೆ ಕುಡಿಯಲು ನೀರಿಲ್ಲದೆ ಪರದಾಡಿದವು. ಈ
ಣಿಗಳ ನಿತ್ಯಸಾವಿನ ದಣಿವನ್ನು ಹೋಗಲಾಡಿಸಲು, ದೇವರೆಂದು ನಂಬಿ ಪೂಜಿಸಿದ ದನಕರುಗಳನ್ನು
ಟಕರಿಗೆ(ಖಾಟಿಕ)ಮಾರಿಬಿಟ್ಟೆವು." ಕ್ರಿ.ಶ. ೧೯೭೨ರಲ್ಲಿ ಸಂಭವಿಸಿದ ಭೀಕರ ಬರಗಾಲದ ಸಂದರ್ಭದಲ್ಲಿ
ತ್ತಿರದ ಹೈದರಾಬಾದ್, ನಾರಾಯಣಪೇಟೆ, ಕೊಡಂಗಲ್, ಮೆಹಬೂಬ್‌ನಗರ, ತಾಂಡೂರು,
ಹಿರಾಬಾದ್, ವಿಕಾರಾಬಾದ್‌ಗಳಂತಹ ನಗರ ಪ್ರದೇಶಗಳಿಗೆ ಕೆಲಸ ಹುಡುಕಿಕೊಂಡು ಅನೇಕ ಕೃಷಿಕುಟುಂಬ
ಳು ದುಡಿಯಲು ವಲಸೆ ಹೋಗಿದ್ದನ್ನು ಇಲ್ಲಿನ ಜನರು ನೆನಪಿಸಿಕೊಳ್ಳುತ್ತಾರೆ.



ನಕ್ಸಲರ ಬಾಂಬ್‌ಗೆ 10 ಬಲಿ

ಮೊದಲ ಪುಟದಿಂದ

ವರದಿ : ಪ್ರಜಾವಾಣಿ, ೦೪.೦೯.೨೦೦೫, ಪು. ೪

ಇಂತಹ ಭೀಕರ ಪರಿಸ್ಥಿತಿಯನ್ನು ಎದುರಿಸಿದ ಇಲ್ಲಿನ ಒಕ್ಕಲಿಗರು ಮಳೆರಾಯನ ಜೊತೆಯಲ್ಲಿ
ಣಜಾಟದಲ್ಲಿ ತೊಡಗಿ ಎಲ್ಲವನ್ನು ಕಳೆದುಕೊಂಡರು. ಇಂತಹ ಬೇಸರದಿಂದ ಇವರಿಗೆ ಯಾರಿಂದಲೂ
ಹಾಯದ ಹಸ್ತ ದೊರಕುತ್ತಿಲ್ಲ. ಆದ್ದರಿಂದ ನಕ್ಸಲ್ ಚಟುವಟಿಕೆಗಳಿಗೆ ಪ್ರೋತ್ಸಾಹಿಸುತ್ತಿರುವ ಬಗ್ಗೆ
ಗಾಗ ವರದಿಯಾಗುತ್ತಿವೆ.

ಕ್ರಿ.ಶ. ೧೯೯೩ರ ಸೆಪ್ಟೆಂಬರ್ ೩೦ರಂದು ಕಿಲಾರಿಯಲ್ಲಿ ಸಂಭವಿಸಿದ ಭೀಕರ ಭೂಕಂಪನದಲ್ಲಿ
ಲವು ಸಾವಿರದಷ್ಟು ಜನರು ಸಾವನ್ನನುಭವಿಸಿದರು. ಈ ಕಿಲಾರಿ ಮಹಾರಾಷ್ಟ್ರ ರಾಜ್ಯದಲ್ಲಿದ್ದರೂ
ರ್ನಾಟಕದ ಗಡಿಗೆ ತುಂಬ ಹತ್ತಿರದಲ್ಲಿರುವುದರ ಜೊತೆಗೆ ಅಲ್ಲಿನವರೊಂದಿಗೆ ಇಲ್ಲಿನವರ ವೈವಾಹಿಕ
ಂಬಂಧಗಳು ಬೆಸೆದುಕೊಂಡಿವೆ. ಮಹಾರಾಷ್ಟ್ರದ ಕಿಲಾರಿಗೆ ಸಮೀಪದಲ್ಲಿರುವ ಗುಲಬರ್ಗಾ ಜಿಲ್ಲೆಯ
ಲೂ ಈ ಭೀಕರ ಭೂಕಂಪನದ ಪರಿಣಾಮಗಳುಂಟಾದವು. ಕಿಲಾರಿ ಭೂಕಂಪನಕ್ಕೂ ಮುಂಚೆ ಕ್ರಿ.ಶ.
೬೭ರಲ್ಲಿ ಮಹಾರಾಷ್ಟ್ರದ ಕೊಯ್ನಾ ಜಲಾಶಯ ಪ್ರದೇಶದಲ್ಲಿ ಭೂಕಂಪನ ಸಂಭವಿಸಿ ಅಪಾರ
ನಿಗಳುಂಟಾಗಿದ್ದವು. ಆ ಪ್ರದೇಶ ಇಂದಿಗೂ ಭೂಕಂಪನ ಸಾಧ್ಯತೆಗಳಿಂದ ಮುಕ್ತವಾಗಿಲ್ಲ. ಇದರಂತೆಯೇ

ಕಿಲಾರಿಯಲ್ಲಿನ ಭೂಕಂಪನಕ್ಕೆ ಕಿಲಾರಿ ಸಮೀಪವಿರುವ ತಿರ್ನಿ ಜಲಾಶಯದ ನೀರಿನ ಒತ್ತಡ ಕಾರಣವಾಗಿತ್ತು ಎಂದು ಕೆಲವು ವರದಿಗಳು ಹೇಳಿವೆ. ಜಲಾಶಯದಲ್ಲಿನ ನೀರಿನ ಸಂಗ್ರಹದಿಂದ ಭೂಮಿಯ ಒಳಪದರುಗಳಲ್ಲಿ ಒತ್ತಡ ಹೆಚ್ಚಾಗಿ, ಆ ಭಾಗದ ಹಲವು ಗ್ರಾಮಗಳಲ್ಲಿ ಮೇಲಿಂದ ಮೇಲೆ ಭೂಮಿ ಕಂಪಿಸುತ್ತಿರುತ್ತದೆ. ಇದು ಮುಂದಿನ ಭೀಕರ ಭೂಕಂಪನದ ಮುನ್ಸೂಚನೆಯಾಗಿರುತ್ತದೆಂದು ಭೂಗರ್ಭ ವಿಜ್ಞಾನಿಗಳು ಹೇಳುತ್ತಾರೆ. ಅಂದರೆ ಕ್ರಿ.ಶ. ೧೯೬೭ ಮತ್ತು ಕ್ರಿ.ಶ. ೧೯೯೩ರಲ್ಲಿ ಮಹಾರಾಷ್ಟ್ರದಲ್ಲಿ ಸಂಭವಿಸಿದ ಇತ್ತೀಚಿನ ಭೀಕರ ಭೂಕಂಪನಗಳಿಗೆ ಅಲ್ಲಿನ ಕೊಯ್ನಾ ಮತ್ತು ತಿರ್ನಿ ಜಲಾಶಯಗಳಲ್ಲಿ ಸಂಗ್ರಹಿಸಿಟ್ಟಿದ್ದ ನೀರು ಕಾರಣ ಎಂಬುದು ಸ್ಪಷ್ಟವಾಗುತ್ತದೆ. ಇದರಂತೆಯೇ ಇಂದು ಹಲವು ವರ್ಷಗಳಿಂದ ಕರ್ನಾಟಕ-ಆಂಧ್ರದ ಹಸರಗುಂಡಗಿ, ಗುರ್ರಂಪಳ್ಳಿ ಮತ್ತು ಅಲ್ಲಿನ ಸುತ್ತಮುತ್ತಲಿನ ಗ್ರಾಮಗಳಲ್ಲಿನ ಭೂಒಡಲಲ್ಲಿ ಒಂದು ಶಬ್ದ ಕೇಳಿಬರುತ್ತಿದೆ. ಇಲ್ಲಿನ ಜನರು ರಾತ್ರಿ ವೇಳೆ ಮನೆಗಳಲ್ಲಿ ಮಲಗುವುದನ್ನು ಬಿಟ್ಟು ಹೊರಗಡೆ ಗುಡಿಸಲು, ಗುಡಾರ ಹಾಕಿಕೊಂಡು ರಾತ್ರಿ ಕಳೆಯುತ್ತಾ, ರಾತ್ರಿ ವೇಳೆ ದಿನಕ್ಕೊಬ್ಬರಂತೆ ಪಾಳಿಯಲ್ಲಿ ಕಾವಲು ಕಾಯುತ್ತಿರುವ ಇವರು ಭೂಮಿಯ ಕಂಪನದ ಮುನ್ಸೂಚನೆ ಸಿಗುತ್ತಿದ್ದಂತೆ ಮಲಗಿದ ವರನ್ನೆಲ್ಲ ಬಯಲಿಗೆ ಕರೆತರುತ್ತಾರೆ. ಪ್ರತಿದಿನವೂ ಆತಂಕದಲ್ಲೇ ಕಳೆಯುವ ಅನಿವಾರ್ಯ ಈ ಜನರನ್ನು ಕಾಡುತ್ತಿದೆ. ಇದಕ್ಕೆ ಮುಲ್ಲಾಮಾರಿ ಜಲಾಶಯದಲ್ಲಿ ಸಂಗ್ರಹಿಸುವ ನೀರು ಕಾರಣವಾಗಿದೆ. ಈ ಮುಲ್ಲಾಮಾರಿ ಜಲಾಶಯದ ಸುಮಾರು ೩೦ ಗ್ರಾಮಗಳನ್ನು ಇವತ್ತು ಬೇರೆ ಕಡೆ ಸ್ಥಳಾಂತರಿಸಬೇಕಾಗಿದೆ. ಇಲ್ಲದಿದ್ದರೆ ಇಲ್ಲಿನ ರೈತರ ಪಾಲಿಗೆ ವರವಾಗಬೇಕಾಗಿದ್ದ ಮುಲ್ಲಾಮಾರಿ ಜಲಾಶಯ ಸಾವಿರಾರು ಕುಟುಂಬಗಳ ಪಾಲಿನ ಮೃತ್ಯುಕೂಪವಾಗಿ ಪರಿಣಮಿಸುವ ಅಪಾಯವಿದೆ.

ಈ ಗಡಿಭಾಗದಲ್ಲಿ ಭೂಕಂಪನ ಸಂಭವಿಸಿದರೆ ಮುಲ್ಲಾಮಾರಿ ಜಲಾಶಯ, ಕಂಪನದ ಕೇಂದ್ರಬಿಂದು ಆಗಲಿದೆ. ಮಹಾರಾಷ್ಟ್ರದ ಕಿಲಾರಿಯಿಂದ ಆಂಧ್ರದ ಹೈದರಾಬಾದ್ ತನಕ ಕಂಪನದ ತೀವ್ರತೆ ಕಾಣಿಸಿ ಕೊಳ್ಳುತ್ತದೆ. ಭೂಮಿ ಕಂಪಿಸುತ್ತಿರುವ ಪ್ರಮಾಣ ಹಾಗೂ ಇತರೆ ಗುಣಲಕ್ಷಣಗಳನ್ನು ನೋಡಿದರೆ ಭೂಕಂಪನದ ವ್ಯಾಪ್ತಿ ೨೫೦ ರಿಂದ ೩೦೦ ಕಿಲೋಮೀಟರ್‌ವರೆಗೆ ವಿಸ್ತರಿಸುವ ಸಾಧ್ಯತೆ ಇದೆ. ಒಟ್ಟು ೬ ಟಿ.ಎಂ.ಸಿ. ಸಾಮರ್ಥ್ಯದ ಜಲಾಶಯದಲ್ಲಿ ಈಗ ಕೇವಲ ಎರಡನೆ ಒಂದು ಭಾಗ ಮಾತ್ರ ನೀರು ಸಂಗ್ರಹಗೊಂಡಿದೆ. ಇಷ್ಟು ಕಡಿಮೆ ಪ್ರಮಾಣದ ನೀರು ಇರುವಾಗಲೇ ಕಂಪನದ ತೀವ್ರತೆ ೦.೧, ೧.೦ ಹಾಗೂ ೧.೨ರಷ್ಟರ ಪ್ರಮಾಣ ದಾಖಲಾಗುತ್ತಿದೆ. ಇನ್ನೂ ಪೂರ್ತಿ ೬ ಟಿ.ಎಂ.ಸಿ. ನೀರು ಶೇಖರಣೆಗೊಂಡರೆ ಆಗುವ ಹಾನಿ ಅಂದಾಜಿಗೆ ಸಿಗುವುದಿಲ್ಲ. ಜಲಾಶಯಕ್ಕೆ ಒಳಹರಿವು ಹೆಚ್ಚಾದಷ್ಟು ಕಂಪನದ ತೀವ್ರತೆ ಹೆಚ್ಚುವ ಅಪಾಯ ಇದೆ. ಇದಕ್ಕೆ ಸೂಕ್ತ ಪರಿಹಾರಗಳನ್ನು ಆದಷ್ಟು ಬೇಗ ಕಂಡುಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಈ ಗಡಿಭಾಗದ ಸುಮಾರು ೩೦ ಹಳ್ಳಿಗಳು ಇಂದಲ್ಲ ನಾಳೆ ಅಪಾಯಕ್ಕೆ ಸಿಲುಕುತ್ತವೆ.

ಕ್ರಿ.ಶ. ೨೦೦೫-೦೬ರಲ್ಲಿ ಚಿಂಚೋಳಿ ೪೪ ಮಿ.ಮಿ, ಸೇಡಂ ೩.೩. ಮಿ.ಮಿ. ಯಾದಗೀರ ೧೬ ಮಿ.ಮಿ. ಮಳೆ ಆಗಸ್ಟ್‌ನಲ್ಲಿ ಬಿದ್ದಿತ್ತು. ಆ ನಂತರ ಮಳೆರಾಯನ ಕೃಪಾದೃಷ್ಟಿಯೇ ಇರಲಿಲ್ಲ. ಹೀಗಾಗಿ ಹಾಳಾಗುವುದೆಲ್ಲಾ ಹಾಳಾಗಿ ಹೋಗಿತ್ತು. ಇನ್ನಷ್ಟು ಉಳಿದದ್ದು ಹಾಳಾಗಬಾರದೆಂದರೆ ಮಳೆ ಬೇಕಾಗಿತ್ತು. ಇಂತಹ ಸಂದರ್ಭದಲ್ಲಿ ಬೆಳೆ ಹಾನಿಯಿಂದ ರೈತರು ತತ್ತರಿಸಿದರು. ಇದೇ ೨೦೦೬ರಲ್ಲಿ ಈ ಭಾಗದಲ್ಲೆಲ್ಲಾ

ಸಂಸ್ಥಾನದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಗಿತ್ತು. ಕೊನೆಯ ನವಾಬನ ಸಂದರ್ಭಕ್ಕೆ ರಾಜ್ಯಾಡಳಿತ ಕೊನೆಗೊಳ್ಳುವ ಸೂಚನೆ ಸಿಕ್ಕಾಗ ನವಾಬ ಮೀರ್ ಉಸ್ಮಾನ್ ಅಲಿಖಾನ್ (ಕ್ರಿ.ಶ. ೧೯೪೭) ಹಿಂದೂ ವಿರೋಧಿ ನೀತಿ ಅನುಸರಿಸಿ ತನ್ನ ಪೂರ್ವಜರ ಸಂಸ್ಥಾನವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದನು. ಇದು ಸ್ವಾತಂತ್ರ್ಯ ಸಂದರ್ಭದಲ್ಲಿ ಜನಾಭಿಪ್ರಾಯಕ್ಕೆ ವಿರೋಧವಾಗಿತ್ತು.

ಇಷ್ಟಲ್ಲದೇ ಏಕೀಕರಣದ ಸಂದರ್ಭದಲ್ಲಿ ಈ ಭಾಗವನ್ನು ಕರ್ನಾಟಕ ಒಳಗೆ ಸೇರಿಸಿಕೊಂಡದ್ದು ಕೇವಲ ಅನೌಪಚಾರಿಕತೆ ಎಂಬಂತಾಗಿದೆ. ಇಲ್ಲಿನ ಹಿರಿಯರು ಹೈದರಾಬಾದ್ ನಿಜಾಮನ ವಿರುದ್ಧ ಹೋರಾಡಿ ಸಮಗ್ರ ಕನ್ನಡ ನಾಡಿನ ಕನಸು ಕಂಡು ತಮ್ಮ ಮುಂದಿನ ಪೀಳಿಗೆ ಸ್ವತಂತ್ರ ಅಭಿವೃದ್ಧಿ ಕರ್ನಾಟಕದಲ್ಲಿ ಬದುಕು ಸಾಗಿಸುತ್ತಾರೆಂದು ನಂಬಿಕೊಂಡಿದ್ದರು. ಆದರೆ ವಾಸ್ತವದಲ್ಲಿ ಕರ್ನಾಟಕದ ಏಕೀಕರಣಕ್ಕಾಗಿ ಹೋರಾಡಿದ ಅನೇಕ ಕನ್ನಡಿಗರು ಇಂದು ನಮ್ಮ ಗಡಿಯಿಂದ ಹೊರಗುಳಿದಿದ್ದಾರೆ. ಮತ್ತು ಕರ್ನಾಟಕದ ಒಳಗಿರುವ ಇಲ್ಲಿನ ಗಡಿಕನ್ನಡಿಗರು ಕರ್ನಾಟಕ ಸರ್ಕಾರದ ಅಭಿವೃದ್ಧಿಯಿಂದ ಇಂದಿಗೂ ಸೌಲಭ್ಯ ವಂಚಿತರಾಗಿದ್ದಾರೆ. ಈ ಗಡಿಭಾಗದಲ್ಲಿನ ಕೊಂಚಾವರಂ, ಎಲೇರಾಜೋಳ, ಮುಧೋಳ, ಮೇದಕ, ಯಾನಗುಂದಿ, ಗುರುಮಠಕಲ್‌ಗಳಲ್ಲಿ ಇಂದಿಗೂ ನಿಜಾಮನ ಉರ್ದು ದಾಖಲೆಗಳು ಕರ್ನಾಟಕ ರಾಜ್ಯ ಸರಕಾರದ ಇಲಾಖೆಯಲ್ಲಿ ಜಾರಿಯಲ್ಲಿವೆ.

ಇಷ್ಟಲ್ಲದೆ ಏಕೀಕರಣದ ಸಂದರ್ಭದಲ್ಲಿ ಒಲ್ಲದ ಮನಸ್ಸಿನಿಂದ ಹೊರಗುಳಿದ ಗಡಿಗ್ರಾಮದ ಬಹುತೇಕ ಜನರು ಇವತ್ತು ಶಾಶ್ವತವಾಗಿ ಆಂಧ್ರದೊಂದಿಗೆ ಗುರುತಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ಅವರೆಂದಿಗೂ ಹೊಣೆಯಾಗುವುದಿಲ್ಲ. ಬದಲಾಗಿ ಅವರ ಈ ವಿಷಮ ಸ್ಥಿತಿಗೆ ನಾವೇ ಹೊಣೆಯಾಗುತ್ತೇವೆ. ಆಡಳಿತದ ದೃಷ್ಟಿಯಿಂದ ಇಂದು ನಮ್ಮ ಗಡಿಯಿಂದ ಹೊರಗುಳಿದ ಕನ್ನಡಿಗರನ್ನು ನಾವು ನಿರ್ಲಕ್ಷಿಸಿ, ಅವರ ಬೇಕು ಬೇಡಗಳನ್ನು ಲೆಕ್ಕಿಸದೇ ಇದ್ದುದರಿಂದ ಅವರೆಲ್ಲರಲ್ಲಿ ನಾವು ಕನ್ನಡಿಗರೆಂಬ ಭಾವನೆ ಕಡಿಮೆಯಾಗುತ್ತಿದೆ. ಅವರನ್ನು ನಾವು ಮೊದಲಿನಿಂದಲೂ ನಮ್ಮವರೆಂದು ತಿಳಿದು ನಮ್ಮೊಂದಿಗೆ ಕರೆದುಕೊಂಡು ಹೋಗಿದ್ದರೆ ಅವರ್‍ಯಾರು ಇವತ್ತು ನಮ್ಮಿಂದ ದೂರವಾಗುತ್ತಿರಲಿಲ್ಲ. ಸಾಲದೆಂಬಂತೆ ಆಂಧ್ರ ಸರ್ಕಾರ ಈ ಗಡಿಕನ್ನಡಿಗರ ಗ್ರಾಮಗಳಿಗೆ ವಿಶೇಷ ಸೌಲಭ್ಯಗಳನ್ನು ನೀಡಿ ತಮ್ಮೆಡೆಗೆ ಸೆಳೆದುಕೊಳ್ಳುತ್ತಿದ್ದಾರೆ. ಆಂಧ್ರ ಸರ್ಕಾರ ಅಲ್ಲಿನ ಗಡಿಗಳಿಗೆ ನೀಡಿದ ಸೌಲಭ್ಯಗಳನ್ನು ನೋಡಿ ನಮ್ಮ ಗಡಿಗ್ರಾಮದ ಕನ್ನಡಿಗರು ಅವರೊಂದಿಗೆ ಧ್ವನಿ ಎತ್ತುತ್ತಿದ್ದಾರೆ. ಮುಂದೊಮ್ಮೆ ಈ ಭಾಗದ ಜನಾಭಿಪ್ರಾಯ ನಮ್ಮ ವಿರುದ್ಧವಾಗಬಹುದು ಅದಕ್ಕಿಂತಲೂ ಮುಂಚೆ ನಾವು ಎಚ್ಚೆತ್ತುಕೊಳ್ಳುವುದು ಒಳಿತು.

**೫.೩.೩. ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಗಳು :**

ಮನುಷ್ಯ ಹುಟ್ಟಿನಿಂದ ಸಾಯುವವರೆಗೂ ಸಾಮಾಜಿಕ ಪ್ರಕ್ರಿಯೆಯಲ್ಲಿ ಭಾಗವಹಿಸುವುದು ಅನಿವಾರ್ಯ. ಅಂತಲೇ ಪ್ರತಿಯೊಬ್ಬರು ಒಂದಿಲ್ಲದೊಂದು ಸಮಾಜದಲ್ಲಿ ಅಲಿಖಿತ ಸದಸ್ಯತ್ವವನ್ನು ಪಡೆದುಕೊಂಡು ಎಲ್ಲರಿಗೂ ಒಪ್ಪಿತವಾಗುವ ರೀತಿಯಲ್ಲೇ ಬದುಕಬೇಕಾಗುತ್ತದೆ. ಆದರೆ ಇಂದು ಸಮಾಜವೆಂಬುವುದು ತನ್ನ ಸೀಮಿತ ಪರಿಧಿಯನ್ನು ಮೀರಿ ಬೆಳೆಯುವ ಹಂತವನ್ನು ಪಡೆದುಕೊಂಡಿದೆ.

ಮೊದಲಿನ ಸಮಾಜದಲ್ಲಿದ್ದ ಕಟ್ಟು-ಕಟ್ಟಳೆಗಳು ಇಂದು ಬದಲಾಗಿವೆ. ಅಂತಲೇ ಇವತ್ತು ಈ ಗಡಿಭಾಗದಲ್ಲಿ ಈ ಮೊದಲು ಜಾರಿಯಲ್ಲಿದ್ದ ಬಾಲ್ಯವಿವಾಹ, ಸ್ವಜಾತಿ ವಿವಾಹ, ಜೋಗತಿ, ಬಸವಿ ಪದ್ಧತಿಗಳು ಇಂದು ಬದಲಾಗಿ, ಇಲ್ಲಿನ ಆರೋಗ್ಯಕರ ಸಮಾಜದಲ್ಲಿ ಇವುಗಳನ್ನು ನಿಷೇಧಿಸಲಾಗುತ್ತಿದೆ. ವಿವಾಹವೆಂಬ ಸಾಮಾಜಿಕ ಸಂಸ್ಥೆಯ ಮೇಲೆ ಇಂದು ಇಲ್ಲಿ ಆಂಧ್ರದ ಪ್ರಭಾವ ದಟ್ಟವಾಗುತ್ತಿದೆ. ಈ ಭಾಗದಲ್ಲಿನ ಬಹುತೇಕ ವೈವಾಹಿಕ ಸಂಬಂಧಗಳು ಪಕ್ಕದ ಆಂಧ್ರದೊಂದಿಗೆ ನಡೆಯುತ್ತಿವೆ. ಇದರಿಂದ ಯಾವ ಹಾನಿ ಆಗದಿದ್ದರೂ ಕೂಡಾ ಇಲ್ಲಿಂದ ಅಲ್ಲಿಗೆ ಹೋಗುವ ಹೆಣ್ಣು ಕನ್ನಡಿಗರ ಪ್ರತೀಕವಾಗದೆ, ಕನ್ನಡಿಗರ ಸಂಸ್ಕೃತಿ ಅಲ್ಲಿ ಬೆಳೆಸುವ ವಾತಾವರಣ ಅವಳಿಗೆ ಸಿಗುತ್ತಿಲ್ಲ. ಆದರೆ ಅಲ್ಲಿಂದ ಇಲ್ಲಿಗೆ ಬರುವ ಹೆಣ್ಣು ಇಡೀ ಮನೆಯ ವಾತಾವರಣವನ್ನು ತೆಲುಗುಮಯ ಮಾಡುತ್ತಾಳೆ. ಆದ್ದರಿಂದ ಅಲ್ಲಿಂದ ಇಲ್ಲಿಗೆ ಬರುವ ಸೊಸೆಯಂದಿರಿಗೆ ಇಲ್ಲಿನ ಸಂಸ್ಕೃತಿಯ ಪಾಠ ಹೇಳಿಕೊಡುವುದು ಇಲ್ಲಿನ ಕನ್ನಡಿಗರಿಗೆ ಅನಿವಾರ್ಯ ವಾಗುತ್ತಿದೆ.

ಇಲ್ಲಿನ ಜನರ ಸಾಂಸ್ಕೃತಿಕ ಆರಾಧನೆಗಳಲ್ಲಿ ಹೆಣ್ಣು ದೈವಗಳ ಪ್ರಭಾವ ದಟ್ಟವಾಗಿದೆ. ಆಂಧ್ರದ ಪ್ರಭಾವದಿಂದ ಇದು ಬಂದಂತಿದೆ. ಹಿರಿಯರಿಂದ ಬಂದಂತಹ ಹಲವು ಆಚರಣೆಗಳನ್ನು ಇಂದಿಗೂ ಇಲ್ಲಿನ ಜನ ಆಚರಿಸುತ್ತಾರೆ. ತಮಗೊದಗಿದ, ತಮ್ಮ ಗ್ರಾಮಕ್ಕೆ ಒದಗಿದ ಸಂಕಷ್ಟಕ್ಕಾಗಿ ತಮ್ಮ ಹಾಗೂ ತಮ್ಮ ಗ್ರಾಮದ ಗ್ರಾಮದೈವಗಳಿಗೆ ಮೊರೆ ಹೋಗಿ ಹರಕೆ ತೀರಿಸುತ್ತಾರೆ. ಗ್ರಾಮದೈವಗಳು ಹೆಚ್ಚಾಗಿ ಹೆಣ್ಣು ದೇವರಾಗಿರುವುದರಿಂದ ಇವುಗಳ ಸಂತೃಪ್ತಿಗೆ ಕೋಣ, ಕುರಿ, ಕೋಳಿಯ ಬಲಿ ನೀಡುವ ಪದ್ಧತಿ ಇಲ್ಲೆಲ್ಲ ಜಾರಿಯಲ್ಲಿದೆ. ಈ ಮೊದಲು ಸಾಂಪ್ರದಾಯಿಕವಾಗಿ ನಡೆದುಕೊಂಡು ಬರುತ್ತಿದ್ದ ದೇವದಾಸಿ, ಬಸವಿ ಪದ್ಧತಿ ಇಂದಿಗೂ ಈ ಭಾಗದಲ್ಲಿ ಪ್ರಚಲಿತದಲ್ಲಿದೆ.

ಬಸವಿ ಬಿಡುವ ಪದ್ಧತಿ ಪಕ್ಕದ ಆಂಧ್ರದಿಂದಲೇ ಇಲ್ಲಿಗೆ ಪ್ರಸರಣಗೊಂಡಿತೆಂದು ಡಾ. ಚೆನ್ನಣ್ಣ ವಾಲಿಕಾರರು ಉಲ್ಲೇಖಿಸುತ್ತಾರೆ. ಬಸವಿ ಅಥವಾ ದೇವದಾಸಿ ಪದ್ಧತಿಯು ಮಾತೃ ಆರಾಧನಾ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಡೀ ಈ ಭಾಗದಲ್ಲಿ ಯಾದಗಿರಿ ತಾಲೂಕಿನ ಬಳಿಚಕ್ರದ ಮಸ್ಸೆಮ್ಮ ಮತ್ತು ಚಿಂಚೋಳಿ ತಾಲೂಕಿನ ನಿಡಗುಂದಿಯ ಚೌಡಮ್ಮದೇವಿ ತುಂಬಾ ಪ್ರಸಿದ್ಧವಾದ ಹೆಣ್ಣುದೈವಗಳು. ಕೇವಲ ಈ ಎರಡೇ ಎರಡು ಮಾತೃದೇವತಾರಾಧನೆಯ ದೈವಗಳಿರುವುದ ರಿಂದಲೋ ಏನೋ ಇಲ್ಲಿ ಕಡಿಮೆ ದೇವದಾಸಿ ಮತ್ತು ಬಸವಿಯರು ಕಂಡುಬರುತ್ತಾರೆ. ಎಲ್ಲಿ ಮಾತೃದೈವಗಳು ಹೆಚ್ಚಾಗಿರುವವೋ ಅಲ್ಲಿ ಮಾತ್ರ ಈ ರೀತಿಯ ಆಚರಣಾ ಪದ್ಧತಿ ಅನುಸರಿಸುವ ಜನರಿರುತ್ತಾರೆಂದು ಇದರಿಂದ ಗೊತ್ತಾಗುತ್ತದೆ. ಬಳಿಚಕ್ರದ ಮಸ್ಸೆಮ್ಮ ದೇವಿಯ ಹತ್ತಿರ ನಡೆಯುವ ಬಸವಿ ಬಿಡುವ ಪದ್ಧತಿಗೆ ಹತ್ತಿರದ ಆಂಧ್ರದ ಮಾರೆಮ್ಮ ದೇವಿಯ ಪ್ರಭಾವ ಬಿದ್ದಂತೆ ಕಂಡುಬರುತ್ತದೆ. ಹೆಣ್ಣುದೇವರ ಹೆಸರಿನಲ್ಲಿ ದೇವದಾಸಿ, ಬಸವಿ ಬಿಡುವ ಪದ್ಧತಿಯನ್ನು ನಾವು ನೋಡಿದ್ದರು, ಇದಕ್ಕೆ ಅಪರೂಪವೆಂಬಂತೆ ಯಾದಗಿರಿ ತಾಲೂಕಿನ ಮೈಲಾರದ ಮಲ್ಲಯ್ಯ ಪುರುಷ ದೈವಕ್ಕೆ ದೇವಸ್ಥಾನದ ಆವರಣದಲ್ಲಿ ದೇವರ ಎದುರಿನಲ್ಲಿ ಹೆಣ್ಣುಮಕ್ಕಳನ್ನು ಬಸವಿ ಬಿಡುವ ಪದ್ಧತಿ ಆಚರಣೆಯಲ್ಲಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಸವಿ ಬಿಟ್ಟವರನ್ನು ಮಾತನಾಡಿಸಿದಾಗ ಒಬ್ಬಳು "ನಮ್ಮ ತಂದೆ ಗಂಡು

ಮಕ್ಕಳಾಗಲಿಲ್ಲವೆಂದು, ಗಂಡು ಮಕ್ಕಳಾದರೆ ನನಗೆ ಬಸವಿ ಬಿಡುವುದಾಗಿ ಮೈಲಾರ ಮಲ್ಲಯ್ಯನಿಗೆ ಹರಕೆ ಹೊತ್ತಿದ್ದರಂತೆ. ಮುಂದೆ ಗಂಡು ಮಗುವಾಗಿದ್ದಕ್ಕೆ, ಹರಕೆಯಂತೆ ಮಲ್ಲಯ್ಯನಿಗೆ ನನ್ನನ್ನು ಬಸವಿ ಬಿಟ್ಟಿದ್ದಾರೆಂದು" ತನ್ನ ಅಸಹಾಯಕತೆಯನ್ನು ತೋರ್ಪಡಿಸಿದಳು. ಈ ದೇವದಾಸಿ, ಬಸವಿಯರು ಇವತ್ತು ಹತ್ತಿರದ ಆಂಧ್ರದ ಹೈದರಾಬಾದ್ ನಗರ ಪ್ರದೇಶಗಳಿಗೆ ಹೋಗಿ ಅಲ್ಲಿನ ಕಾಮಾಟಿಪುರದಲ್ಲಿ ಜೀವನ ಕಳೆಯುತ್ತಿದ್ದಾರೆ.

**೫.೩.೪. ವಲಸೆಯ ಒತ್ತಡಗಳು :**

ಪ್ರಸ್ತುತವಾಗಿ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಗಡಿಭಾಗ, ಗಡಿನಾಡು ಎಂಬುದನ್ನು ಇಲ್ಲಿ ಒಂದು ರಾಜ್ಯದ ಭೌಗೋಳಿಕ ಮೇರೆ ಎಂದು ತಿಳಿಯಲಾಗಿದೆ. 'ಗಡಿ' ಎಂಬುದರ ಚರ್ಚೆ, ವಿಶ್ಲೇಷಣೆ, ವಿವರಣೆ ವಲಸೆ ಎಂಬುದಕ್ಕೆ ಪೂರಕವಾಗಿರುತ್ತದೆ. ವಲಸೆ ಎಂಬುದನ್ನು ಈ ಪರಧಿಯಲ್ಲಿಯೇ ಇಲ್ಲಿ ನೋಡಲಾಗಿದೆ. ಭಾಷಾವಾರು ರಾಜ್ಯಗಳು ಸ್ಥಾಪನೆಗೊಂಡ ನಂತರದಲ್ಲಿ ಒಂದು ಭೌಗೋಳಿಕ ವ್ಯಾಪ್ತಿಯಡಿಯಲ್ಲಿ ಕೇಂದ್ರಿಕೃತಗೊಂಡ ಒಟ್ಟು ಆ ಭೂಪ್ರದೇಶದ ಹಾಗೂ ಆ ಭೂಪ್ರದೇಶದಲ್ಲಿರುವವರು ಆ ರಾಜ್ಯದ ನಿವಾಸಿಗಳಾಗಿರುತ್ತಾರೆ. ತಾಂತ್ರಿಕ ಮತ್ತು ಆಡಳಿತಾತ್ಮಕ ಕಾರಣಗಳಿಂದಾಗಿ ಈ ಭೌಗೋಳಿಕ ಮೇರೆಗೆ ಹೊಂದಿಕೊಂಡಿರುವವರು 'ಗಡಿನಾಡಿಗರು'. ಇವರು ಇವತ್ತಿನವರೆಗೂ ಭಾವನಾತ್ಮಕವಾಗಿ, ಮಾನಸಿಕವಾಗಿ ಗಡಿಯೊಳಗಿನ ನಮ್ಮೊಂದಿಗೆ ಸಂಬಂಧವಿರಿಸಿಕೊಂಡಿದ್ದಾರೆ. ಈ 'ಗಡಿಭಾಗ', 'ಗಡಿನಾಡು' ಎಂಬುದು ಒಂದು ವಿಶಿಷ್ಟ ಭೌಗೋಳಿಕ ವಲಯ ಹಾಗೂ ಇಲ್ಲಿ ಎರಡು, ಮೂರು ಭಿನ್ನ ಭಿನ್ನ ಸಂಸ್ಕೃತಿಗಳು ಒಂದರೊಳಗೊಂದು ಬೆರೆತುಕೊಂಡಿರುತ್ತವೆ. ಬೇರೆ ಬೇರೆ ಭಿನ್ನ ಭಿನ್ನ ಸಂಸ್ಕೃತಿಗಳು ಹೀಗೆ ಒಂದು ಕಡೆ ಕೂಡಿದಾಗ ಅಲ್ಲೊಂದು ಸಮ್ಮಿಶ್ರ ಸಂಸ್ಕೃತಿ ರೂಪಗೊಂಡಿರುತ್ತದೆ. ಉಭಯ ಭಾಷೆಗಳಲ್ಲಿ, ಉಭಯ ಜನಾಂಗಗಳಲ್ಲಿ, ಸಾಂಸ್ಕೃತಿಕ, ಭಾಷಿಕ, ಸಾಮಾಜಿಕ, ಆರ್ಥಿಕ ಅಂಶಗಳಲ್ಲಿ ಹೆಚ್ಚು ಕಡಿಮೆ ಒಂದರೊಳಗೊಂದು ಸೇರಿ ಪರಸ್ಪರ ಕೊಡು-ಕೊಳ್ಳುವಿಕೆಯ ಪ್ರಕ್ರಿಯೆಯನ್ನು ತಮಗರಿವಿಲ್ಲದಂತೆ ನಡೆಸಿಕೊಂಡು ಬರುತ್ತಿರುತ್ತವೆ. ಧಾರ್ಮಿಕ, ಸಾಮಾಜಿಕ, ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ - ಹೀಗೆ ಪ್ರತಿಯೊಂದರಲ್ಲಿಯೂ ಇಲ್ಲಿ ಸೌಹಾರ್ದತೆಯನ್ನು ಕಂಡುಕೊಳ್ಳುವುದರೊಂದಿದೆ. ಈ ಪ್ರಕ್ರಿಯೆ ತುಂಬಾ ಸಲೀಸಲಾಗಿ ನಡೆಯುವುದು ಇಲ್ಲಿನ ವೈಶಿಷ್ಟ್ಯವಾಗಿರುತ್ತದೆ. ಈ ರೀತಿಯ ಸಂಸ್ಕೃತಿಯನ್ನು 'ಕೂಡು ಸಂಸ್ಕೃತಿ' ಎಂದು ಕರೆದರೆ ಇನ್ನೂ ಸೂಕ್ತ ಎನಿಸುತ್ತದೆ. ಇಂತಹ ಕೂಡು ಸಂಸ್ಕೃತಿಯ ಛಾಯೆ ಈ ಗಡಿಭಾಗದಲ್ಲಿ ಕಾಣಬಹುದಾಗಿದೆ.

ನಮ್ಮ ರಾಷ್ಟ್ರದ ಸಂವಿಧಾನ ಇಲ್ಲಿನ ಪ್ರಜೆಗಳಿಗೆ ಇಡೀ ರಾಷ್ಟ್ರದಲ್ಲಿ ತಮಗೆ ಅನುಕೂಲವಾಗುವಂತೆ ಯಾವುದೇ ರಾಜ್ಯ, ಯಾವುದೇ ಕೇಂದ್ರಾಡಳಿತ ಪ್ರದೇಶದಲ್ಲಿ ನೆಲೆಸಲು, ವಾಸವಿರಲು ಪೂರ್ಣ ಸ್ವಾತಂತ್ರ್ಯದ ಹಕ್ಕು ನೀಡಿದೆ. ಹೀಗಿದ್ದೂ ತನ್ನ ತಲೆಮಾರಿನ, ತನ್ನ ಪೂರ್ವಜರ, ತಾನು ಹುಟ್ಟಿದ ನೆಲದಿಂದ ದೀಢಿರನೆ ಆ ನೆಲ, ಆ ಪ್ರದೇಶ ಬಿಟ್ಟು ಬೇರೆ ಕಡೆ ಯಾರು ವಲಸೆ ಹೋಗುವುದಿಲ್ಲ. ಅನೇಕಾನೇಕ ಕಾರಣ ಗಳಿಂದಾಗಿಯೇ ಒಂದು ನೆಲದಿಂದ, ಒಂದು ಸಂಸ್ಕೃತಿಯಿಂದ ಬೇರೊಂದು ನೆಲಕ್ಕೆ, ಬೇರೊಂದು ಸಂಸ್ಕೃತಿಗೆ ವಲಸೆ ಹೋಗಬೇಕಾಗುತ್ತದೆ. ಇದಕ್ಕೆ ಬಡತನ ಮುಖ್ಯ ಕಾರಣವಾಗಬಹುದು. ಹಾಗಂತ ಎಲ್ಲರೂ

ಬಡತನವನ್ನೇ ಮುಖ್ಯವಾಗಿರಿಸಿಕೊಂಡು ಒಂದು ಪ್ರದೇಶದಿಂದ ಒಂದು ಪ್ರದೇಶಕ್ಕೆ, ಒಂದು ಊರಿನಿಂದ ಇನ್ನೊಂದು ಊರಿಗೆ ವಲಸೆ ಹೋಗುವುದಿಲ್ಲ. ಒಂದು ಕಡೆ ಹುಟ್ಟಿ ಬೆಳೆದವರು ಅಲ್ಲಿನ ನೆಲದೊಂದಿಗೆ ಭಾವನಾತ್ಮಕ ಸಂಬಂಧವಿರಿಸಿಕೊಂಡಿರುತ್ತಾರೆ. ದೀಢರನೆ ತನ್ನ ಊರು ಹಿಡಿಸಲಿಲ್ಲವೆಂಬ ಕಾರಣಕ್ಕೆ ಬೇರೊಂದು ಕಡೆ ವಲಸೆ ಹೋಗುವುದು ಅತಿ ವಿರಳ. ಹೀಗೆ ಕೆಲವು ಅನಿವಾರ್ಯ ಕಾರಣಗಳಿಂದಾಗಿ ತನ್ನ ನೆಲೆಯನ್ನು ಬಿಟ್ಟು ಬಿಡುವಾಗ ಏನೋ ಕಳೆದುಕೊಳ್ಳುತ್ತಿರುವೆನೆಂಬ ಅಳುಕು ವಲಸಿಗರಿಗೆ ಕಾಡುತ್ತಿರುತ್ತದೆ.

ಸ್ವ-ಸ್ಥಳ, ಸ್ವ-ಗ್ರಾಮ ಬಿಟ್ಟು ಪರಸ್ಥಳ, ಪರಗ್ರಾಮವನ್ನು ಆಶ್ರಯಿಸಿ ಹೋಗುವವರನ್ನು 'ವಲಸಿಗರು' ಎನ್ನಬಹುದು. ಹೀಗೆ ವಲಸೆ ಹೋಗುವವರಿಗೆ ಅನೇಕಾನೇಕ ಕಾರಣಗಳಿರುತ್ತವೆ. ಪ್ರಥಮ ಹಂತದಲ್ಲಿ ನೋಡುವುದಾದರೆ ಜೀವನೋಪಾಯ ಸಾಧನಗಳ ಹುಡುಕಾಟವೆ ವಲಸೆಗೆ ಮುಖ್ಯ ಕಾರಣವೆನ್ನಬಹುದು. ಈ ಗಡಿಭಾಗದಲ್ಲಿ ಈ ಕಾರಣಕ್ಕಾಗಿಯೇ ಅನೇಕರು ಬೇರೆ ಕಡೆ ವಲಸೆ ಹೋಗಿರುವರು. ಕರ್ನಾಟಕಾಂಧ್ರ ಗಡಿಭಾಗಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಇಲ್ಲಿಂದ ಹೋಗುವವರು ಮತ್ತು ಇಲ್ಲಿಗೆ ಹೊರಗಿನಿಂದ ಬರುವವರು ಎಂಬ ಎರಡು ಬಗೆಯ ವಲಸಿಗರನ್ನು ಗುರುತಿಸಬಹುದು. ಈ ಎರಡು ರೀತಿಯ ವಲಸಿಗರಲ್ಲಿ ಇಲ್ಲಿಂದ ಹೋಗುವವರ ಸಂಖ್ಯೆಯೇ ಗಣನೀಯ ಪ್ರಮಾಣದಲ್ಲಿದೆ. ಈ ಭಾಗಕ್ಕೆ ಹತ್ತಿರದಲ್ಲಿರುವ ಆಂಧ್ರದ (ಹೈದ್ರಾಬಾದ್, ಮೆಹಬೂಬನಗರ, ನಾರಾಯಣಪೇಟೆ, ಮುಕ್ತಲ್, ಕೊಡಂಗಲ್, ತಾಂಡೂರು, ಬಷಿರಾಬಾದ್, ವಿಕಾರಾಬಾದ್) ದೊಡ್ಡ ದೊಡ್ಡ ನಗರಗಳಲ್ಲಿನ ಮೂಲಭೂತ ಸೌಕರ್ಯ, ಶೈಕ್ಷಣಿಕತೆ, ತಲಾಆದಾಯ, ಉದ್ಯೋಗಗಳಂತಹ ಅನುಕೂಲಗಳಿಂದಾಗಿಯೇ ಇಲ್ಲಿನ ಜನರು ಅಲ್ಲಿಗೆ ವಲಸೆ ಹೋಗುತ್ತಾರೆ. ಯಾವಾಗ ಬದುಕುವುದು ಇಲ್ಲಿ ದುಸ್ತರವಾಗುತ್ತದೆಯೋ ಆಗ ಅನಿವಾರ್ಯವಾಗಿ ಒಬ್ಬ ಇಲ್ಲವೇ, ಸಾಮೂಹಿಕ ವಲಸೆ ಹೋಗುವ ಇವರ ಜೀವನಮಟ್ಟ ಇದ್ದಕ್ಕಿದ್ದಂತೆ ಸುಧಾರಿಸುವುದಿಲ್ಲ. ಇಲ್ಲಿಂದ ಹೋದವರು ಹೈದರಾಬಾದಿನ ದೊಡ್ಡ ದೊಡ್ಡ ಕಟ್ಟಡ ಕೆಲಸಗಳಲ್ಲಿ, ಹೋಟೆಲ್‌ಗಳಲ್ಲಿ ಇಲ್ಲವೇ ಕೂಲಿಗಳಾಗಿ ದುಡಿಯುವ ಮೂಲಕ ತಮ್ಮ ದಿನನಿತ್ಯದ ಬದುಕಿನ ಬವಣೆಗೆ ಬೇಕಾದ ವ್ಯವಸ್ಥೆಯನ್ನು ಮಾಡಿಕೊಳ್ಳುವುದರಲ್ಲಿ ತೊಡಗುತ್ತಾರೆ. ಹೀಗೆ ಒಮ್ಮೆ ಇಲ್ಲಿಂದ ವಲಸೆ ಹೋಗುವವರು ಅವರ ಭಾವನಾತ್ಮಕ ಸಂಬಂಧ, ಸಾಮಾಜಿಕ ಸ್ಥಾನಮಾನ, ಸಾಂಸ್ಕೃತಿಕ ಗುರುತು ಇವೆಲ್ಲವನ್ನು ಬದಿಗೊತ್ತಿ, ಕ್ರಮೇಣ ಬರುಬರುತ್ತಾ ಅಲ್ಲಿನ ಆಗು-ಹೋಗುಗಳೊಡನೆ ಮೊದಮೊದಲು ಒಲ್ಲದ ಮನಸ್ಸಿನಿಂದ, ತದನಂತರ ಸ್ವಾಭಾವಿಕವೆಂಬಂತೆ ಅಲ್ಲಿನ ಸಂಸ್ಕೃತಿಯೊಂದಿಗೆ ಬೆರೆತುಕೊಳ್ಳುತ್ತಾರೆ.

ವಲಸೆ ಹೋಗುವವರು ತಮ್ಮ ಮತ್ತು ತಮ್ಮ ಪೂರ್ವಜರ, ತಮ್ಮ ತಲೆಮಾರಿನ ಅಸ್ಮಿಯತೆಯ ಗುರುತಿಗಾಗಿ ಇಲ್ಲವೇ, ಅವರ ದೈವಗಳ ಆರಾಧನೆಗಾಗಿ ತಮ್ಮ ಪೂರ್ವಿಕರ ನೆಲೆಗಳಿಗೆ ಬಂದು ಹೋಗುತ್ತಿರುತ್ತಾರೆ. ಇಲ್ಲಿಂದ ವಲಸೆ ಹೋದ ಮೇಲೆ ಮುಂದೆ ತಮಗೊದಗಿದ ಸಂಕಷ್ಟಗಳು ತಮ್ಮ ಗ್ರಾಮದೈವಗಳ ಅವಕೃಪೆಯಿಂದಾಗಿಯೇ ಎಂದು ತಿಳಿದು ವರ್ಷಕ್ಕೊಮ್ಮೆ ಅವುಗಳ ಜಾತ್ರೆ, ಉತ್ಸವ ಇಲ್ಲವೇ ತಮಗೆ ಅನುಕೂಲವಾದ ಸಂದರ್ಭಗಳಲ್ಲಿ ಬಂದು ನಡೆದುಕೊಳ್ಳುತ್ತಾರೆ. ಅಲ್ಲದೆ ತಮ್ಮ ಕುಟುಂಬದ ಜೀವನಾವರ್ತನ ವಿಧಿಗಳಾದ ಜವಳ (ಕೇಶಮುಂಡನ) ಮದುವೆ, ಮತ್ತಿತರ ಕಾರ್ಯಕ್ರಮಗಳನ್ನು ಈ ಧಾರ್ಮಿಕ ತಾಣಗಳ ಸಮ್ಮುಖದಲ್ಲಿ ನೆರವೇರಿಸುತ್ತಾರೆ.

ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಗ್ರಾಮಗಳಲ್ಲಿನ ವಲಸೆಗೆ ಅನೇಕಾನೇಕ ಕಾರಣಗಳು ಕಂಡು ಬರುತ್ತವೆ. ಇಲ್ಲಿಯ ಜನರ ವಲಸೆಗೆ ಬರಗಾಲ, ಬೆಳೆಯ ವೈಫಲ್ಯ, ನಿರುದ್ಯೋಗ, ಬಡತನಗಳಂತಹವು ಮುಖ್ಯವಾಗಿವೆ. ಇದಕ್ಕೆ ಪ್ರಕೃತಿಯ ಅವಕೃಪೆ ಒಂದೆಡೆಯಾದರೆ ಇನ್ನೊಂದೆಡೆಗೆ ಸಂಪನ್ಮೂಲಗಳ ಹಂಚಿಕೆ ಯಲ್ಲಿನ ಸರಕಾರಗಳ ವೈಫಲ್ಯಗಳು ಕಾರಣಗಳಾಗಿವೆ. ಹಾಗೇ ನೋಡಿದರೆ ಈ ಪ್ರದೇಶದಲ್ಲಿನ ಭೂಮಿ ಕೃಷಿಗೆ ಸಮೃದ್ಧವಾಗಿದ್ದರೂ ಸಮಯಕ್ಕೆ ಸರಿಯಾಗಿ ಮಳೆ ಬಾರದೆ ಇರುವುದರಿಂದ ಕೃಷಿಕರ ಮನೆಯಲ್ಲಿ ಉಣ್ಣಲು ಒಂದು ಕಾಳು ಜೋಳ ಇಲ್ಲದಂತಾಗುತ್ತದೆ. ಅಲ್ಲದೆ ಇಲ್ಲಿನ ಭೂಗರ್ಭ ಸಂಪತ್ತನ್ನು ಇವತ್ತಿಗೂ ಸರಿಯಾಗಿ ಯಾರು ಬಳಸಿಕೊಳ್ಳುತ್ತಿಲ್ಲ. ಇಲ್ಲಿನ ಭೂಗರ್ಭ ಅಪಾರವಾದ ಸುಣ್ಣದ ಶಿಲೆಯನ್ನು ತನ್ನಲ್ಲಿ ಹುದುಗಿಸಿಟ್ಟುಕೊಂಡಿದೆ. ಕೆಲವು ಖಾಸಗಿಯವರು ಈ ಕಚ್ಚಾವಸ್ತುಗಳನ್ನು ಬಳಸಿಕೊಂಡು ದೊಡ್ಡ ದೊಡ್ಡ ಸಿಮೆಂಟ್ ಕಾರ್ಖಾನೆಗಳನ್ನು ನಿರ್ಮಿಸಿ ಅಪಾರ ಲಾಭ ಪಡೆದುಕೊಳ್ಳುತ್ತಿದ್ದಾರೆ. ಅಲ್ಲದೇ ಇನ್ನೂ ಕೆಲವರು ನೆಲಗಳಿಗೆ ಹಾಸುವ ಕಲ್ಲಿನ ಗಣಿಗಳನ್ನು ಮಾಡಿಕೊಂಡು ಸ್ವಂತ ಲಾಭ ಪಡೆದುಕೊಳ್ಳುತ್ತಿದ್ದಾರೆ. ಇಲ್ಲಿನ ಸಿಮೆಂಟ್ ಕಾರ್ಖಾನೆ ಮತ್ತು ಕಲ್ಲಿನ ಗಣಿಗಳಲ್ಲಿ ಕೆಲವು ಸ್ಥಳೀಯರಿಗೆ ಮಾತ್ರ ಉದ್ಯೋಗವಕಾಶ ನೀಡ ಲಾಗಿದೆ. ನಮ್ಮ ಸರಕಾರಗಳು ಕೇವಲ ಬೆಂಗಳೂರಿನಂತಹ ಬೆಳೆದ ನಗರಗಳಲ್ಲಿ ದೊಡ್ಡ ದೊಡ್ಡ ಕಾರ್ಖಾನೆಗಳನ್ನು ತೆಗೆಯಲು ಪರವಾನಿಗೆ ಕೊಡುವ ಬದಲು ಈ ಭಾಗದಲ್ಲಿನ ಕಚ್ಚಾವಸ್ತುಗಳನ್ನು ಬಳಸಿಕೊಂಡು ಇಲ್ಲಿಯೇ ಕೈಗಾರಿಕೆಗಳು ಸ್ಥಾಪನೆಯಾಗುವಂತೆ ಮಾಡಬೇಕು. ಇದರಿಂದ ಇಲ್ಲಿ ಉದ್ಯೋಗಗಳು ಸೃಷ್ಟಿಯಾಗಿ ಸ್ಥಳೀಯರಿಗೆ ಉದ್ಯೋಗ ಸಿಕ್ಕು ಕೂಲಿಗಾಗಿ ವಲಸೆ ಹೋಗುವ ಪ್ರಸಂಗಗಳು ಕಡಿಮೆಯಾಗುತ್ತವೆ.

**೫.೩.೪.೧. ಗಡಿಭಾಗದ ಜನರ ವಲಸೆ ಆಂಧ್ರಕ್ಕೆ ಏಕೆ? :** ಇಲ್ಲಿನ ಜನರು ಮುಖ್ಯವಾಗಿ ಆಂಧ್ರದ ಹೈದರಾಬಾದ್, ಮೆಹಬೂಬನಗರ, ಮುಕ್ತಲ, ನಾರಾಯಣಪೇಟೆ, ಕೊಡಂಗಲ್, ತಾಂಡೂರು, ಬಷಿರಾ ಬಾದ್, ವಿಕಾರಬಾದ್‌ಗಳಂತಹ ನಗರಪ್ರದೇಶಗಳಿಗೆ ಹೆಚ್ಚಾಗಿ ವಲಸೆ ಹೋಗುತ್ತಿದ್ದಾರೆ. ಈ ನಗರ ಪ್ರದೇಶಗಳನ್ನೇ ವಲಸೆಗೆ ಏಕೆ ಆಯ್ದುಕೊಳ್ಳುತ್ತಾರೆ? ಎಂಬುದಕ್ಕೆ ಈ ಮುಂದಿನ ಅಂಶಗಳು ಉತ್ತರ ನೀಡುತ್ತವೆ.

೧. ಕರ್ನಾಟಕ-ಆಂಧ್ರದ ಭೌಗೋಳಿಕ, ಚಾರಿತ್ರಿಕ, ಭಾಷಿಕ, ಸಾಂಸ್ಕೃತಿಕ, ಸಾಹಿತ್ಯಿಕ ಅಂಶಗಳು ಒಂದರೊಳಗೊಂದು ಬೆರೆತುಕೊಂಡಿರುವುದು.

೨. ಈ ಗಡಿಗ್ರಾಮಗಳಿಗೆ ಆಂಧ್ರದ ರಾಜಧಾನಿ ಹೈದರಾಬಾದ್ ೯೫ ಕಿ.ಮೀ., ಮೆಹಬೂಬ ನಗರ ೩೫ ಕಿ.ಮೀ., ಮುಕ್ತಲ ೪೦ ಕಿ.ಮೀ., ನಾರಾಯಣಪೇಟೆ ೨೫ ಕಿ.ಮೀ., ಕೊಡಂಗಲ್ ೧೫ ಕಿ.ಮೀ., ತಾಂಡೂರು ೨೦ ಕಿ.ಮೀ., ಬಷಿರಾಬಾದ್ ೩೪ ಕಿ.ಮೀ., ವಿಕಾರಾಬಾದ್ ೩೫ ಕಿ.ಮೀ. ಗಳಷ್ಟು ಹತ್ತಿರದಲ್ಲಿದ್ದು ಉತ್ತಮ ರೈಲ್ವೆ ಮತ್ತು ರಸ್ತೆ ಸಂಪರ್ಕ ಹೊಂದಿರುವುದರ ಜೊತೆಗೆ ಈ ಊರುಗಳಿಗೆ ಹೋಗಲು ಕೇವಲ ೫೦ ರೂಪಾಯಿಗಿಂತ ಕಡಿಮೆ ವೆಚ್ಚ ತಗಲುತ್ತದೆ.

೩. ಹೈದರಾಬಾದ್‌ನಂತಹ ದೊಡ್ಡ ರಾಜಧಾನಿ ನಗರಪ್ರದೇಶ ಇಲ್ಲಿಗೆ ತೀರಾ ಹತ್ತಿರದಲ್ಲಿದ್ದು ಇಲ್ಲಿ ವಿಫುಲ ಉದ್ಯೋಗಾವಕಾಶಗಳು ಸಿಗುತ್ತಿವೆ ಮತ್ತು ದೊಡ್ಡ ನಗರಗಳ ಆಡಂಬರದ, ಬಣ್ಣದ ಬದುಕು ಗ್ರಾಮೀಣ ಯುವಕರನ್ನು ಕೈಬಿಸಿ ಕರೆಯುತ್ತಿವೆ. ಅಂತೆಯೇ ತೆಲುಗು ಚಿತ್ರರಂಗದ ಪ್ರಭಾವ ಇಲ್ಲಿನ ಯುವಕರ ಮೇಲೆ ಗಾಢ ಪ್ರಭಾವ ಬೀರಿದೆ.

೪. ಸಾಂಸ್ಕೃತಿಕ ಆಚರಣೆಗಳು ಇಲ್ಲಿನ ಕನ್ನಡಿಗರ ಮತ್ತು ತೆಲುಗರಲ್ಲಿ ಹೆಚ್ಚು ಕಡಿಮೆ ಒಂದೇ ಬಗೆಯಲ್ಲಿವೆ. ಇಲ್ಲಿನ ದೈವಗಳಿಗೆ ಅವರು, ಅಲ್ಲಿನ ದೈವಗಳಿಗೆ ಇವರು ನಡೆದುಕೊಳ್ಳುತ್ತಾರೆ. ಈ ಎರಡು ಗಡಿಗಳಲ್ಲಿನ ವೈವಾಹಿಕ ಸಂಬಂಧಗಳಲ್ಲಿ ಅಲ್ಲಿಯ ಹೆಣ್ಣನ್ನು ಇಲ್ಲಿಗೆ. ಇಲ್ಲಿನ ಹೆಣ್ಣನ್ನು ಅಲ್ಲಿಗೆ ಮದುವೆ ಮಾಡಿಕೊಡುವುದು ಮೊದಲಿನಿಂದಲೂ ಈ ಭಾಗದಲ್ಲೆಲ್ಲ ನಡೆದು ಕೊಂಡು ಬಂದಿದೆ.

೫. ಭಾಷಿಕವಾಗಿ ನೋಡಿದಾಗ ಕನ್ನಡ ಮತ್ತು ತೆಲುಗು ಭಾಷೆಗಳು, ದ್ರಾವಿಡ ಸಹೋದರ ಭಾಷಾವರ್ಗಕ್ಕೆ ಸೇರುತ್ತವೆ. ಇವೆರಡನ್ನು ಒಟ್ಟೊಟ್ಟಿಗೆ ಮಾತನಾಡುವುದು ಬಲು ಸುಲಭ. ಇಲ್ಲಿನ ಪ್ರತಿಯೊಬ್ಬರು (ಅಕ್ಷರಸ್ಥ ಮತ್ತು ಅನಕ್ಷರಸ್ಥ) ಕನ್ನಡದ ಜೊತೆ ಜೊತೆಗೆ ತೆಲುಗು ಭಾಷೆಯನ್ನು ಬಲ್ಲವರಾಗಿದ್ದು, ಸಹಜವಾಗಿಯೇ ಎರಡು ಭಾಷೆಯನ್ನು ದಿನನಿತ್ಯದ ಚಟುವಟಿಕೆಗಳಲ್ಲಿ ಬಳಸುತ್ತಾರೆ.

ಈ ಮೇಲಿನ ಸಂಬಂಧ ಮತ್ತು ಕಾರಣಗಳಿಂದಾಗಿ ಇಲ್ಲಿನ ಜನರು ವಲಸೆ ಹೋಗಲು ಈ ಆಂಧ್ರದ ಊರುಗಳನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದಾರೆ. ಅಲ್ಲದೆ ಈಗಾಗಲೆ ಈ ನಗರಪ್ರದೇಶಗಳಲ್ಲಿ ದೊಡ್ಡ ದೊಡ್ಡ ಉದ್ದಿಮೆಗಳು, ಕೈಗಾರಿಕೆಗಳು ಸ್ಥಾಪನೆಗೊಂಡು ಕೆಲಸ ನಿರ್ವಹಿಸುವುದರೊಂದಿಗೆ ವಲಸೆ ಹೋದ ದುಡಿಯುವ ಕೈಗಳಿಗೆ ಕೆಲಸ ಒದಗಿಸುತ್ತಿವೆ.

**೫.೩.೪.೨. ವಲಸೆ ಹೋಗುವುದರಿಂದಾಗುವ ಸಮಸ್ಯೆಗಳು ಮತ್ತು ಪರಿಣಾಮಗಳು :** ಒಟ್ಟಾರೆಯಾಗಿ ಈ ಮೇಲಿನ ನೈಸರ್ಗಿಕ, ಚಾರಿತ್ರಿಕ, ಸಾಂಸ್ಕೃತಿಕ, ಭೌತಿಕ ಕಾರಣಗಳಿಂದಾಗಿ ಈ ಗಡಿಭಾಗದ ಜನ ವಲಸೆಯ ಒತ್ತಡಗಳಿಗೆ ಒಳಗಾಗುತ್ತಿದ್ದಾರೆ. ಈ ರೀತಿ ವಲಸೆ ಹೋಗುವುದರಿಂದ ಆಗುವ ಸಮಸ್ಯೆ ಮತ್ತು ಪರಿಣಾಮಗಳನ್ನು ಈ ರೀತಿ ನೋಡಬಹುದು.

೧. ತಮ್ಮ ನಾಡಿನ ಚರಿತ್ರೆ, ಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆ ಮುಂತಾದವುಗಳು ವಲಸೆ ಹೋದವರಿಂದ ದಿನ ಕಳೆದಂತೆ ಕ್ರಮೇಣ ಮರೆಯಾಗುತ್ತವೆ. ಅವರ ಮುಂದಿನ ಪೀಳಿಗೆಗೆ ಇದರ ಪರಿಚಯವು ಲಭಿಸುವುದಿಲ್ಲ.

೨. ತಮ್ಮ ಗ್ರಾಮ, ತಮ್ಮ ಅವಿಭಕ್ತ ಕುಟುಂಬದಿಂದ ದೂರ ಹೋಗುವುದರಿಂದ ಅವರಲ್ಲಿ ಒಂಟಿತನ ಕಾಡುತ್ತದೆ ಮತ್ತು ವಲಸೆ ಹೋದ ಪ್ರದೇಶದಲ್ಲಿ ಇವರನ್ನೂ ಅಲ್ಲಿನ ಸ್ಥಳೀಯರು ಪರಕೀಯರಂತೆ ಕಾಣುತ್ತಾರೆ.

೩. ಉದ್ಯೋಗ ಹುಡುಕಿಕೊಂಡು ಹೋಗಿ, ನಗರಪ್ರದೇಶಗಳ ಕೈಗಾರಿಕೆಗಳಲ್ಲಿ ದುಡಿಯುವುದರಿಂದ ತಮ್ಮ ವಂಶಪರಂಪರೆಯಾಗಿ ಬಂದಂತಹ ಕರಕುಶಲ ಕಲೆಯನ್ನು ಮರೆಯುವ ಸಾಧ್ಯತೆ ಹೆಚ್ಚಾಗಿರುತ್ತದೆ.

೪. ವಲಸಿಗರ ಮೇಲೆ ನಗರೀಕರಣ, ಔದ್ಯೋಗೀಕರಣದ ಪ್ರಭಾವ ಹೆಚ್ಚಾಗಿ ಅವರ ಬದುಕಿಗೆ ಅನಿಶ್ಚಿತತೆ ಮತ್ತು ಭದ್ರತೆಯ ಸಮಸ್ಯೆಗಳು ಕಾಡುತ್ತವೆ.

ಇಂತಹ ವಲಸೆಯಿಂದಾಗಿ ಈ ಗಡಿಗ್ರಾಮಗಳಲ್ಲಿ ಕೃಷಿ ಕೂಲಿಕಾರ್ಮಿಕರು ಸಿಗದೆ ರೈತರು ಪರದಾಡು ವಂತಹ ಸ್ಥಿತಿ ನಿರ್ಮಾಣವಾಗಿದೆ. ಕೃಷಿಯೋಗ್ಯ ಭೂಮಿ ವಲಸೆಯಿಂದಾಗಿ ಬರಡಾಗುತ್ತಿದೆ. ಆದ್ದರಿಂದ ಇಂತಹ ವಲಸೆಯನ್ನು ತಡೆಗಟ್ಟಬೇಕು ಮತ್ತು ಇಲ್ಲಿನ ದುಡಿಯುವ ಕೈಗಳಿಗೆ ಕೆಲಸ ನೀಡುವುದು ಇಂದು ಅನಿವಾರ್ಯವಾಗಿದೆ. ಇಲ್ಲದಿದ್ದರೆ ಈ ಗಡಿಗ್ರಾಮಗಳು ಮುಂದೊಮ್ಮೆ ಜನರಿಲ್ಲದೆ ಬರಿದಾಗುತ್ತವೆ.

**೫.೪. ಪ್ರತ್ಯೇಕತೆ, ಪ್ರತ್ಯೇಕ ರಾಜ್ಯದ ಬೇಡಿಕೆ**

ವಿಶಾಲ ಕರ್ನಾಟಕದ ಕನಸು ಕಟ್ಟಿಕೊಂಡು ಕ್ರಿ.ಶ. ೧೯೫೦ರ ದಶಕದಲ್ಲಿ ನಮ್ಮ ಹಿರಿಯರು ಕಷ್ಟಪಟ್ಟು ದೊಡ್ಡ ಹೋರಾಟವನ್ನೇ ಕರ್ನಾಟಕ ಕಟ್ಟುವುದಕ್ಕಾಗಿ ಮಾಡಿದರು. ಅವರ ಕನಸು ಅಖಂಡ ಕರ್ನಾಟಕವಾಗಿದ್ದಿತು. ಆದರೆ ಅದು ರೂಪಗೊಂಡಿದ್ದು ಏಕೀಕೃತ ಕರ್ನಾಟಕದ ಮಾದರಿಯಲ್ಲಿ. ಏಕೀಕೃತ ಕರ್ನಾಟಕ ರಚನೆಗೊಂಡಾಗ ಕನ್ನಡ ನಾಡಿನ ಅನೇಕ ಭೂಭಾಗಗಳು ಕರ್ನಾಟಕದಿಂದ ಹೊರಗುಳಿದ್ದುದು ಎಲ್ಲರ ಗಮನದಲ್ಲಿದೆ. ಏಕೀಕರಣದ ನಂತರ ಮೇಲಿಂದ ಮೇಲೆ ನಮಗೆ ಒಂದಿಲ್ಲದೊಂದು ಸಮಸ್ಯೆಗಳು ಕಾಡುತ್ತಿವೆ. ಒಂದು ಕಡೆ ನೆಲ-ಜಲಗಳ ಸಮಸ್ಯೆ, ಇನ್ನೊಂದು ಕಡೆ ಭಾಷೆ ಮತ್ತು ಸಾಂಸ್ಕೃತಿಕತೆಯ ಸಮಸ್ಯೆಗಳು ಕಾಡುತ್ತಿವೆ. ಮತ್ತೊಂದೆಡೆಗೆ ಪ್ರಾದೇಶಿಕ ಅಸಮಾನತೆಯಿಂದಾಗಿ ಪ್ರತ್ಯೇಕತೆಯ ಕೂಗು ಎಲ್ಲೆಡೆ ಕೇಳಿಬರುತ್ತಿವೆ. ಇಂತಹ ಪರಿಸ್ಥಿತಿಯ ಲಾಭ ಪಡೆಯಲು ಸಮಾಜಘಾತುಕ ಶಕ್ತಿಗಳು ಬಲ ಪ್ರಯೋಗಕ್ಕೆ ಮುಂದಾಗುತ್ತಿವೆ. ಪ್ರಸ್ತುತ ಈ ಭಾಗವು ಪ್ರತ್ಯೇಕ ರಾಜ್ಯದ ಬೇಡಿಕೆ ಮುಂದಿಟ್ಟಿದೆ. ಈಗಾಗಲೇ ಈ ಭಾಗದಲ್ಲಿ ಎರಡು ಗುಂಪುಗಳು ಪ್ರತ್ಯೇಕ ರಾಜ್ಯದ ಬೇಡಿಕೆಯಲ್ಲಿ ಸಕ್ರಿಯವಾಗಿವೆ. ವೈಜನಾಥ ಪಾಟೀಲರು **'ಹೈದರಾಬಾದ್-ಕರ್ನಾಟಕ ಹೋರಾಟ ಸಮಿತಿ'** ಮತ್ತು ರಾಜು ಕುಳಗೇರಿಯವರು **'ಕಲ್ಯಾಣ ಕರ್ನಾಟಕ ಪ್ರತ್ಯೇಕ ರಾಜ್ಯ'** ಸಂಘಟನೆಗಳು ಪ್ರತ್ಯೇಕ ರಾಜ್ಯ ಬೇಡಿಕೆಗೆ ಆಗ್ರಹಿಸಿ ಹೋರಾಟಕ್ಕೆ ಮುಂದಾಗಿವೆ. ಈ ಸಂಘಟನೆಗಳು ಇವತ್ತು ಶಾಂತಿಯಿಂದ ತಮ್ಮ ಬೇಡಿಕೆಗಳನ್ನು ಸರಕಾರಗಳ ಮುಂದಿಟ್ಟಿವೆ. ಒಂದು ವೇಳೆ ತಮ್ಮ ಬೇಡಿಕೆ, ಹಕ್ಕುಗಳು ಈಡೇರದಿದ್ದರೆ ರಕ್ತಕ್ರಾಂತಿಯ ಹೋರಾಟಕ್ಕೆ ಅಣಿಯಾಗುವುದಾಗಿ ತಿಳಿಸಿವೆ. ಒಂದು ವೇಳೆ ಕ್ರಾಂತಿಮಾರ್ಗ ಹಿಡಿದರೆ, ಈ ಸಂಘಟನೆಗಳು ಉಗ್ರಗಾಮಿ ನೀತಿ ಅನುಸರಿಸುವ ದಿನ ಬಹಳ ದೂರವಿಲ್ಲ ಎಂದೆನಿಸುತ್ತದೆ. ಏಕೆಂದರೆ ಈಗಾಗಲೇ 'ಕ್ರಾಂತಿಯಿಂದ ವಿಮುಕ್ತಿ' ಎಂಬ ಮಂತ್ರದೊಂದಿಗೆ ನಮ್ಮ ದೇಶದಲ್ಲಿ ಅನೇಕ ಪ್ರತ್ಯೇಕತಾ ಸಂಘಟನೆಗಳು ಈಗಾಗಲೇ ಅಸ್ತಿತ್ವ ಕಂಡುಕೊಂಡು ಕಾರ್ಯಾರಂಭ ಮಾಡಿವೆ. ಅಷ್ಟೇ ಅಲ್ಲದೆ ನಮ್ಮ ರಾಜ್ಯದ ಅಕ್ಕಪಕ್ಕಗಳಲ್ಲಿಯೂ ಪ್ರತ್ಯೇಕತಾವಾದಿ ಸಂಘಟನೆಗಳು ಹಣ, ಜನಸಂಖ್ಯಾ ಬಲದೊಂದಿಗೆ ಹೋರಾಟಕ್ಕಿಳಿವೆ. ಇದಕ್ಕೆ ಮುಖ್ಯ ಕಾರಣ ಪ್ರಾದೇಶಿಕ ಅಸಮಾನತೆ, ಇದು ಪ್ರತ್ಯೇಕತೆಯನ್ನು ಪ್ರಚೋದಿಸುತ್ತದೆ. ಅಂತಲೇ ಬೇರೆ ಬೇರೆ ಕಡೆಗಳಲ್ಲಿ ಪ್ರತ್ಯೇಕ ರಾಷ್ಟ್ರ, ಪ್ರತ್ಯೇಕ ರಾಜ್ಯಗಳ ಬೇಡಿಕೆಯೊಂದಿಗೆ ಪ್ರತ್ಯೇಕತಾವಾದಿಗಳು ಸಂಘಟಿತರಾಗಿದ್ದಾರೆ.

ಕ್ರಿ.ಶ. ೧೯೭೬ರಲ್ಲಿ ಹುಟ್ಟಿಕೊಂಡ ಪೀಪಲ್ಸ್ ವಾರ್ ಗ್ರೂಪ್ ಸುಮಾರು ೪,೩೦೦ ಕಾರ್ಯಕರ್ತರನ್ನು ಹೊಂದಿರುವುದರೊಂದಿಗೆ ಓರಿಸ್ಸಾ, ಛತ್ತೀಸಗಡ, ಮಹಾರಾಷ್ಟ್ರ, ಆಂಧ್ರ ಈ ನಾಲ್ಕು ರಾಜ್ಯಗಳಲ್ಲಿ ತಮ್ಮ ಮೂಲಭೂತ ಅವಶ್ಯಕತೆಗಳು, ಅಭಿವೃದ್ಧಿಯಲ್ಲಿನ ಅಸಮಾನತೆಗಳಂತಹ ಹಕ್ಕುಗಳನ್ನು ಕ್ರಾಂತಿಯಿಂದ ಪಡೆಯಬೇಕೆಂದು 'ಕ್ರಾಂತಿಯಿಂದ ವಿಮುಕ್ತಿ' ಎಂಬ ಮಂತ್ರದೊಂದಿಗೆ ಹೋರಾಡುತ್ತಿವೆ. ಸುಮಾರು ಒಟ್ಟಾರೆ ಇಡೀ ರಾಷ್ಟ್ರದಲ್ಲಿ ೨೦ ಸಾವಿರಕ್ಕೂ ಹೆಚ್ಚು ಸದಸ್ಯರನ್ನೊಳಗೊಂಡಂತೆ ೧೮-೨೦ ರಾಜ್ಯಗಳಲ್ಲಿ ೪೦ಕ್ಕೂ ಹೆಚ್ಚು ಸಂಘಟನೆಗಳು ಪ್ರತ್ಯೇಕ ರಾಜ್ಯಕ್ಕಾಗಿ ಹೋರಾಟ ಮಾಡುತ್ತಿವೆ. ಮುಖ್ಯವಾಗಿ ಮಾವೋವಾದಿ ಸಂಘಟನೆಗಳು ಬಿಹಾರ, ಜಾರ್ಖಂಡ್ ಮತ್ತು ಆಂಧ್ರಗಳಲ್ಲಿ ರೈತರ ಹಕ್ಕುಗಳನ್ನು ಮುಂದಿಟ್ಟುಕೊಂಡು ಹೋರಾಡುತ್ತಿದೆ. ಪೊಲೀಸರು, ರಾಜಕೀಯ ವ್ಯಕ್ತಿಗಳು ಮತ್ತು ಜಮೀನ್ದಾರರು ಇವರ ಕಡುವೈರಿಗಳು. ಇನ್ನು ಕೆಲವು ಸಂಘಟನೆಗಳು ಜನರಿಗೆ ಸ್ವಾತಂತ್ರ್ಯ, ವಿಮುಕ್ತಿ ಎಂದೆಲ್ಲ ಹೇಳಿ ಅವರಲ್ಲಿ ಹುಚ್ಚು ಆದರ್ಶಗಳನ್ನು ಬೆಳೆಸುತ್ತಿದ್ದಾರೆ. ಹಳ್ಳಿಗಳಲ್ಲಿನ ಗ್ರಾಮಸ್ಥರಿಗೆ ನ್ಯಾಯ ದೊರಕಿಸುವುದಾಗಿ ಹೇಳಿ ಕಾಂಗರೂ ಕೋರ್ಟುಗಳನ್ನು ನಡೆಸುತ್ತಾ ಆ ಗ್ರಾಮದವರನ್ನೇ ಸುಲಿಯುತ್ತಿರುವುದು ಗ್ರಾಮಸ್ಥರ ಅರಿವಿಗೆ ಬರುತ್ತಿಲ್ಲ. ಇಷ್ಟಲ್ಲದೆ ಈ ಸಂಘಟನೆಗಳು ಅಪಹರಣ, ದಾಳಿ, ಅತ್ಯಾಚಾರಗಳು, ದೊಡ್ಡ ದೊಡ್ಡ ಕಂಪನಿಗಳಿಂದ, ವ್ಯಾಪಾರಸ್ಥರಿಂದ, ಸರ್ಕಾರಿ ಅಧಿಕಾರಿಗಳಿಂದ ಹಣ ವಸೂಲಿ, ರಾಜಕೀಯ ಮುಖಂಡರ ಮನೆಗಳ ಮೇಲೆ ದಾಳಿ ಮಾಡುತ್ತ ಸಮಾಜದಲ್ಲಿ ಆತಂಕ ಮೂಡಿಸಿವೆ.

ಈ ಸಂಘಟನೆಗಳಿಗೆ ಹತಾಶೆಗೊಂಡ ಬಡವರು, ಅರಣ್ಯಗಳಲ್ಲಿನ ಬುಡಕಟ್ಟು ಜನಾಂಗಗಳು, ನಿರುದ್ಯೋಗಿ ಯುವಕರು ಪ್ರಮುಖವಾಗಿ ಬೆಂಬಲ ನೀಡುವುದರೊಂದಿಗೆ ಇವುಗಳಲ್ಲಿ ಸದಸ್ಯತ್ವ ಪಡೆದು ಹೋರಾಟದಲ್ಲಿ ಸಕ್ರಿಯವಾಗಿದ್ದಾರೆ. ಇಂತಹ ಸಮಾಜ ವಿರೋಧಿ ಸಂಘಟನೆಗಳಲ್ಲಿ ಹಲವನ್ನು ಪೋಟಾ ಅಡಿಯಲ್ಲಿ ನಿಷೇಧಿಸಲ್ಪಟ್ಟರು ಅವು ಭೂಗತ ಚಟುವಟಿಕೆಗಳನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿವೆ.

ಈ ಮೇಲಿನ ಪ್ರತ್ಯೇಕತಾವಾದಿ ಸಂಘಟನೆಗಳನ್ನು ಗಮನಿಸಿದಾಗ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ಅವು ತಮ್ಮ ಕದಂಬಬಾಹುವನ್ನು ವಿಸ್ತರಿಸುವ ಸಾಧ್ಯತೆಗಳಿವೆ. ಸಾಂಸ್ಕೃತಿಕವಾಗಿ ಮತ್ತು ಚಾರಿತ್ರಿಕವಾಗಿ ಸಮೃದ್ಧವಾಗಿದ್ದರು ಪ್ರಸ್ತುತ ಬದಲಾದ ಪರಿಸ್ಥಿತಿಯಲ್ಲಿ ಈ ಭಾಗ ಆಡಳಿತಾತ್ಮಕವಾಗಿ ಎಲ್ಲರಿಂದ ನಿರ್ಲಕ್ಷ್ಯಕ್ಕೊಳಗಾಗಿದೆ. ಹೈದರಾಬಾದಿನ ಕೊನೆಯ ನಿಜಾಮನಿಂದ ಇಂದಿನ ಸರಕಾರಗಳೆಲ್ಲವೂ ಈ ಪ್ರದೇಶವನ್ನು ನಿರ್ಲಕ್ಷಿಸಿವೆ. ಮೂಲಭೂತ ಅವಶ್ಯಕತೆಗಳು ಸಮರ್ಪಕವಾಗಿ ದೊರೆಯದಿದ್ದಾಗ ಅಥವಾ ಹಂಚಿಕೆಯಾಗದಿದ್ದಾಗ ಸ್ವಾಭಾವಿಕವಾಗಿಯೆ ಜನರು ಆಡಳಿತಾಂಗದ ವಿರುದ್ಧ ಧ್ವನಿ ಎತ್ತುತ್ತಾರೆ. ಮೊದಮೊದಲು ಈ ಧ್ವನಿ ಸಣ್ಣದಾಗಿ ಹೊರಬಿದ್ದು, ತದನಂತರದಲ್ಲಿ ಈ ಸಣ್ಣ ಧ್ವನಿಯೇ ದೊಡ್ಡ ಕ್ರಾಂತಿಯತ್ತ ಮುನ್ನುಗ್ಗುತ್ತದೆ. ಹೀಗಾಗಿಯೇ ತಮ್ಮ ಬೇಡಿಕೆಗಳಿಗೆ, ತಮ್ಮ ಹಕ್ಕುಗಳಿಗೆ ಸ್ಪಂದಿಸದಿದ್ದುದಕ್ಕಾಗಿ ರಕ್ತಕ್ರಾಂತಿಯ ಹೋರಾಟಕ್ಕೆ ಅಣಿಯಾಗುತ್ತಾರೆ.

ಈ ಎಲ್ಲ ಮೇಲಿನ ಅಂಶಗಳನ್ನು ಗಮನಿಸುವುದಾದರೆ ಈ ಭಾಗದಲ್ಲಿಯೂ ಈ ಪ್ರತ್ಯೇಕತಾವಾದಿಗಳು ಇವತ್ತಲ್ಲದಿದ್ದರೂ ನಾಳೆ ತಮ್ಮ ವ್ಯಾಪ್ತಿಯನ್ನು ಹರಡಿಸಿಕೊಳ್ಳುವಂತಿವೆ. ಏಕೆಂದರೆ ಈ

ಭಾಗದಲ್ಲಿ ಇವತ್ತಿಗೂ ಬಡತನ, ನಿರುದ್ಯೋಗಗಳಂತಹ ಸಮಸ್ಯೆಗಳಿವೆ. ಬಡತನದಿಂದ ತತ್ತರಿಸುತ್ತಿರುವ ಜನ ಮತ್ತು ವಿದ್ಯಾಭ್ಯಾಸ ಪಡೆದು, ಸರಕಾರಗಳ ನೀತಿಯಿಂದಾಗಿ ನಿರುದ್ಯೋಗಕ್ಕೆ ಒಳಗಾದ ಯುವಜನರು ಈ ಪ್ರತ್ಯೇಕತಾವಾದಿಗಳ ಬೆಂಬಲಕ್ಕೆ ನಿಂತರೆ ಶಾಂತಿಯಿಂದ ಹೋರಾಟಕ್ಕಿಳಿದವರ ಗತಿ ಏನು? ಈಗಾಗಲೇ ಈ ಭಾಗದ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿನ ಯಾದಗೀರ, ಗುರುಮಠಕಲ್, ಮುಧೋಳ ಭಾಗಗಳಲ್ಲಿ ನಕ್ಸಲ ಚಟುವಟಿಕೆಗಳು ಚುರುಕಾಗುತ್ತಿವೆ.

## ನಕ್ಸಲರ ಬಾಂಬ್‌ಗೆ ಕಾಂಗ್ರೆಸ್ ಶಾಸಕ ಸೇರಿ 10 ಬಲಿ

ಹೈದ್ರಾಬಾದ, ಆ. 15-ಸ್ವಾತಂತ್ರ್ಯ ದಿನವಾದ ಸೋಮವಾರ ಆಂಧ್ರ ಪ್ರದೇಶ ನಕ್ಸಲರ ಗುಂಪು ನಡೆಸಿದ ರಕ್ತ ದೋಕುಳಿಗೆ ಕಾಂಗ್ರೆಸ್‌ನ ಹಿರಿಯ ನಾಯಕ ಮತ್ತು ಮುಕ್ತಲ್ ಶಾಸಕ ನರಸ ರೆಡ್ಡಿ, ಅವರ ಪುತ್ರ ವೆಂಕಟೇಶ್ವರ ರೆಡ್ಡಿ, ನಗರ ಪಾಲಿಕೆ ಆಯುಕ್ತ ಸೇರಿದಂತೆ ಹತ್ತು ಮಂದಿ ಸಾವಿಗೀಡಾಗಿದ್ದಾರೆ.

ಮೆಹಬೂಬನಗರ ಜಿಲ್ಲೆಯ ನಾರಾಯಣಪೇಟದಲ್ಲಿ ಸೋಮವಾರ ಸರಕಾರಿ ಪ್ರಾಥಮಿಕ ಶಾಲೆ ಸೇರಿದಂತೆ ವಿವಿಧ ಕಾಮಗಾರಿಗೆ ಶಂಕು ಸ್ಥಾಪನೆ ನೆರವೇರಿಸಿದರು. ▶ 9ನೇ ಪುಟ



ನಾರಾಯಣಪೇಟದಲ್ಲಿ ನಕ್ಸಲರ ದಾಳಿಗೆ ಶಾಸಕ ಸೇರಿ ಇನ್ನಿತರರ ಶವಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವುದು.

**ವರದಿ : ವಿಜಯ ಕರ್ನಾಟಕ, ೧೫.೦೮.೨೦೦೫, ಪು. ೧**

ಕ್ರಿ.ಶ. ೨೦೦೫ರ ಸ್ವಾತಂತ್ರ್ಯ ದಿನೋತ್ಸವದಂದು ಆಂಧ್ರಪ್ರದೇಶದ ನಕ್ಸಲರ ಗುಂಪು ನಾರಾಯಣ ಪೇಟೆಯಲ್ಲಿ ಕಾಂಗ್ರೆಸ್‌ನ ಹಿರಿಯ ನಾಯಕ ಮತ್ತು ಮುಕ್ತಲ್ ಶಾಸಕ ನರಸರೆಡ್ಡಿ, ಅವರ ಪುತ್ರ ವೆಂಕಟೇಶ್ವರರೆಡ್ಡಿ, ನಗರಪಾಲಿಕೆಯ ಆಯುಕ್ತ ಸೇರಿದಂತೆ ಹತ್ತು ಮಂದಿಯ ಮೇಲೆ ಗುಂಡಿನ ಸುರಿಮಳೆಗೈದರಲ್ಲದೇ, ಕೈಬಾಂಬುಗಳನ್ನು ಎಸೆದು ಭೀಕರವಾಗಿ ಹತ್ಯೆ ಮಾಡಿದರು. ನಕ್ಸಲರು ಈ ಕೃತ್ಯ ಎಸಗುವುದಕ್ಕೂ ಮುನ್ನ ಗುಲಬರ್ಗಾ ಜಿಲ್ಲೆಯ ಗಡಿಭಾಗದ ಗುರುಮಠಕಲ್ಲಿನಲ್ಲಿ ಸುಮಾರು ಎಂಟು

ತಿಂಗಳಿಂದ ಮನೆ ಬಾಡಿಗೆ ಪಡೆದು ವಾಸವಾಗಿದ್ದರು. ಮತ್ತು ಇವರು ಸಂಪರ್ಕಕ್ಕಾಗಿ ಬಳಸುತ್ತಿದ್ದ ಮೊಬೈಲ್‌ಸಿಮ್ ಯಾದಗೀರಿಯ ಅಂಗಡಿಯಿಂದ ಖರೀದಿಸಲಾಗಿತ್ತು. ಈ ಘಟನೆಯ ನಂತರ ಗುಲಬರ್ಗಾ ಜಿಲ್ಲೆಗೆ ಹೊಂದಿಕೊಂಡಿರುವ ಆಂಧ್ರದ ಗಡಿಯಲ್ಲಿ ಮುಂಜಾಗೃತಾ ಕ್ರಮವಾಗಿ ಪೊಲೀಸ ಇಲಾಖೆ ಸಾಕಷ್ಟು ಬಂದೋಬಸ್ತ ಮಾಡಿತ್ತು. ಇಂತಹ ಸಂದರ್ಭದಲ್ಲಿ ಈ ಭಾಗದ ಗಡಿಗಳು ಸುರಕ್ಷಿತವಾಗಿಲ್ಲವೆಂಬುದು ಖಚಿತವಾಗುತ್ತದೆ. ಅಲ್ಲದೇ ಒಂದು ವೇಳೆ ಕರ್ನಾಟಕ ಸರ್ಕಾರದಿಂದ ಬೇಸತ್ತ ಇಲ್ಲಿನ ಜನರು ನಕ್ಸಲ ಮತ್ತು ಪ್ರತ್ಯೇಕತಾವಾದಿಗಳಿಗೆ ಆಶ್ರಯ ನೀಡಿ ಅವರ ಹೋರಾಟಗಳಿಗೆ ಬೆಂಬಲ ನೀಡಿದರೆ ಇಲ್ಲಿನ ಜನರ ಗತಿ ಏನಾಗಬಹುದು?



**ವರದಿ : ಸಂಯುಕ್ತ ಕರ್ನಾಟಕ, ನವೆಂಬರ್ ೧, ಪುಟ ೧.**

ಅಂತಲೇ ಇವತ್ತು ಈ ಭಾಗದಲ್ಲಿ ಪ್ರತ್ಯೇಕ ರಾಜ್ಯಕ್ಕಾಗಿ ಹೋರಾಡುತ್ತಿರುವ **'ಹೈದರಾಬಾದ್-ಕರ್ನಾಟಕ ಹೋರಾಟ ಸಮಿತಿ'** ಮತ್ತು **'ಕಲ್ಯಾಣ ಕರ್ನಾಟಕ ಪ್ರತ್ಯೇಕ ರಾಜ್ಯ'** ಸಂಘಟನೆಗಳು ಶಾಂತಿಯಿಂದ ತಮ್ಮ ಬೇಡಿಕೆಗಳಿಗಾಗಿ ಹೋರಾಡುತ್ತಿವೆ. ಇಲ್ಲಿನ ಈ ಎರಡು ಸಂಘಟನೆಗಳು ಪ್ರಮುಖವಾಗಿ ವ್ಯವಸಾಯ ದಲ್ಲಿ ಅಭಿವೃದ್ಧಿ, ನೀರಾವರಿ ಯೋಜನೆಗಳ ಅಭಿವೃದ್ಧಿ, ಕೈಗಾರಿಕೆಗಳ ಸ್ಥಾಪನೆ, ಶೈಕ್ಷಣಿಕ ಅಭಿವೃದ್ಧಿ, ಆರೋಗ್ಯ ಸೇವೆಗಳ ಅಭಿವೃದ್ಧಿ, ರಸ್ತೆ-ಸಂಪರ್ಕಗಳ ಅಭಿವೃದ್ಧಿ, ವಿಶ್ವವಿದ್ಯಾನಿಲಯವಾರು ಅಥವಾ ವಿಭಾಗವಾರು ಪಿ.ಯು.ಸಿ. ಮಂಡಳಿಗಳನ್ನು ಅಸ್ತಿತ್ವಕ್ಕೆ ತರುವುದು. ಉದ್ಯೋಗದಲ್ಲಿ ವಿಶ್ವವಿದ್ಯಾಲಯ ಮಟ್ಟದಲ್ಲಿ ನೇಮಕಾತಿ, ಪ್ರತಿಯೊಂದು ಬೆಳೆಗಳಿಗೆ ವೈಜ್ಞಾನಿಕ ಬೆಂಬಲ ಬೆಲೆ ಘೋಷಿಸುವುದು. ಬರಗಾಲ,

ಬೆಳೆಹಾನಿ, ಅತಿವೃಷ್ಠಿ, ಅನಾವೃಷ್ಠಿ, ಭೂಕಂಪಗಳಂತಹ ನೈಸರ್ಗಿಕ ವಿಪತ್ತುಗಳಿಗೆ ತುತ್ತಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಮತ್ತು ಒಂದು ವೇಳೆ ಇವು ಸಂಭವಿಸಿದರೆ ಶೀಘ್ರದಲ್ಲಿಯೆ ಇವುಗಳ ಮೇಲೆ ಹಿಡಿತ ಸಾಧಿಸಿ, ಇವುಗಳಿಂದ ಹಾನಿಗೊಳಗಾದ ಜನರಿಗೆ ರಕ್ಷಣೆ ಒದಗಿಸುವುದು, ಇಲ್ಲಿನ ನೀರಿನ ಮೂಲಗಳ ಸುಧಾರಣೆ, ಕೆರೆಗಳ ಹೂಳೆತ್ತಿಸುವುದು ಮತ್ತು ಅವುಗಳಿಗೆ ನೀರು ಹರಿಸುವುದು. ಇಲ್ಲಿನ ನದಿಗಳಿಗೆ ಚೆಕ್‌ಡ್ಯಾಂಗಳನ್ನು ಕಟ್ಟಿ ಕನಿಷ್ಟ ಒಂದು ಬೆಳೆಗಾದರೂ ನೀರಾವರಿ ವ್ಯವಸ್ಥೆ ಮಾಡುವುದು. ಇತರ ಕಡೆ ರಚಿಸಿರುವ ಕಾಫಿಬೋರ್ಡ್‌ಗಳಂತೆ ಇಲ್ಲಿನ ತೊಗರೆ ಮತ್ತು ಬಿಳಿಜೋಳ ಮಂಡಳಿಗಳನ್ನು ರಚಿಸುವುದು. ಹಿಂದುಳಿದವರು ಎಂಬ ಹಣೆಪಟ್ಟಿಯಿಂದ ಸಾಹಿತ್ಯ, ಸಂಗೀತ, ಕಲೆ, ಪತ್ರಿಕೋದ್ಯಮ ಮೊದಲಾದ ಅಕಾಡೆಮಿಗಳಲ್ಲಿ ಈ ಭಾಗದವರಿಗೆ ಪ್ರಾತಿನಿಧ್ಯ ದೊರಕಿಸಿಕೊಡುವುದು. ಇಂತಹ ಅಂಶಗಳನ್ನು ಮುಂದಿಟ್ಟುಕೊಂಡು ಈ ಎರಡು ಸಂಘಟನೆಗಳು ಹೋರಾಡುತ್ತಿವೆ.



ವರದಿ : ವಿಜಯ ಕರ್ನಾಟಕ, ೦೨.೧೧.೨೦೦೪, ಪು. ೪

ಈ ರೀತಿಯ ನ್ಯಾಯಬದ್ಧ ಬೇಡಿಕೆಗಳಿಂದ ಹೋರಾಟಕ್ಕಿಳಿದ ಈ ಎರಡು ಸಂಘಟನೆಗಳಿಗೆ ಈಗಾಗಲೇ ಹಾಲಿ ಮಾಜಿ ಶಾಸಕರು, ಮಠಾಧೀಶರು, ಶೈಕ್ಷಣಿಕ ಸಂಘ-ಸಂಸ್ಥೆಗಳು, ವಿದ್ಯಾರ್ಥಿ ಸಂಘಟನೆಗಳು ಬೆಂಬಲ ವ್ಯಕ್ತಪಡಿಸಿವೆ. ಅಲ್ಲದೇ ಇವು ಪ್ರತಿ ವರ್ಷ ಪ್ರತ್ಯೇಕ ರಾಜ್ಯದ ಧ್ವಜಾರೋಹಣ ಕಾರ್ಯಕ್ರಮವನ್ನು ನಡೆಸುತ್ತಿವೆ. ಇದನ್ನರಿತ ರಾಜ್ಯ ಸರ್ಕಾರ ಇದಕ್ಕೆ ಸಂಬಂಧಿಸಿದಂತೆ ಕೇಂದ್ರಕ್ಕೆ ಹಲವು ಬಾರಿ ನಿಯೋಗಗಳನ್ನು ಕರೆದುಕೊಂಡು ಹೋಗಿದೆ. ಈ ಹೋರಾಟದಲ್ಲಿ ವೈಜನಾಥ ಪಾಟೀಲ್, ವಿಠ್ಠಲ್

ಹೆರೂರ, ವಿಶ್ವನಾಥರೆಡ್ಡಿ ಮುದ್ನಾಳ, ಸಿ. ಗುರುನಾಥ, ಶಿವರಾಮ ಮೋಘಾ, ಹಣಮಂತರಾವ್ ದೇಸಾಯಿ, ವಿದ್ಯಾಧರ ಗುರುಜಿ, ಪ್ರೊ. ಕೇಶವರಾವ್ ಜಾಧವ್, ಬಸವರಾಜ್ ಇಂಗಿನ್, ಡಾ. ರಾಜು ಕುಳಗೇರಿ, ಸುಭಾಷ ಗೌಳಿ, ಸುರೇಶ ಜಾಧವ, ಜೈಭೀಮ ರುಕ್ಮಪ್ಪ ಕಾಂಬಳೆ, ಮಲ್ಲೇಶಪ್ಪ ತಾಳಮಡಗಿ, ಕಾಶಿನಾಥ ಶಾಬಾದಕರ್, ಬಾಬುರಾವ ಶೇರಿಕಾರ, ಬಸಪ್ಪ ಯಲ್ಲಪ್ಪ, ಆರಾಧ್ಯ, ಓಬೇದುಲ್ಲಾ, ಅಶೋಕ ಗುರುಜಿ, ಪ್ರೊ. ಶಿವಶಂಕರ, ಮಲ್ಲಿನಾಥ ಇಂದೂರ್, ಗುರುಶಾಂತ ಪಟ್ಟೇದಾರ, ಪಂಡಿತ ಚಿದ್ರಿ, ಗಣಪತರಾವ, ಮಲ್ಕಪ್ಪ, ಚಾಮರಾಜ, ಬಸವಲಿಂಗಪ್ಪ ಈ ಮುಂತಾದವರು ಬೀದರ, ಗುಲಬರ್ಗಾ, ರಾಯಚೂರು, ಬಳ್ಳಾರಿ, ಕೊಪ್ಪಳಗಳಿಂದ ಪ್ರತ್ಯೇಕ ರಾಜ್ಯದ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ.

## ವಿದರ್ಭ ಮಾದರಿ ಹೈ.ಕ.ಮಂಡಳಿ ಸಾಧ್ಯವೇ?

### ಕರ್ನಾಟಕಕ್ಕೆ ಗೃಹ ಸಚಿವ ಶಿವರಾಜ್ ಪಾಟೀಲ್ ಸಲಹೆ

ಪ್ರಜಾವಾಣಿ ವಾರ್ತೆ

ನವದೆಹಲಿ.ಜ.4– ವಿದರ್ಭ ಅಭಿವೃದ್ಧಿ ಮಂಡಳಿ ಮಾದರಿಯಲ್ಲಿ ಹೈದರಾಬಾದ್ ಕರ್ನಾಟಕದ ಅಭಿವೃದ್ಧಿ ಮಂಡಳಿಗೆ ಸಂವಿಧಾನದತ್ತ ಅಧಿಕಾರ ನೀಡುವ ಪ್ರಸ್ತಾಪ ಪರಿಶೀಲಿಸಲು ಗೃಹ ಸಚಿವ ಶಿವರಾಜ್ ಪಾಟೀಲ್ ಕರ್ನಾಟಕಕ್ಕೆ ಸಲಹೆ ಮಾಡಿದ್ದಾರೆ.

ಮುಖ್ಯಮಂತ್ರಿ ಎನ್.ಧರ್ಮಸಿಂಗ್ ನೇತೃತ್ವದ ನಿಯೋಗದ ಜತೆ ಇಂದು ನಡೆದ ಮಾತುಕತೆ ವೇಳೆ ಗೃಹ ಸಚಿವರು ಈ ಅಭಿಪ್ರಾಯ ವ್ಯಕ್ತಪಡಿಸಿದರು. ಸಂವಿಧಾನದ 371ನೇ ಪರಿಚ್ಛೇದಕ್ಕೆ ತಿದ್ದುಪಡಿ ಮಾಡಿ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಿಗೆ ಉದ್ಯೋಗ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಪ್ರಾದೇಶಿಕ ಮೀಸಲಾತಿ ನೀಡಬೇಕೆಂಬುದು ರಾಜ್ಯದ ಬೇಡಿಕೆ.

ಈ ಬೇಡಿಕೆ ಬಗ್ಗೆ ಚರ್ಚಿಸಲು ಮುಖ್ಯಮಂತ್ರಿಗಳು, ಉಪಮುಖ್ಯಮಂತ್ರಿ ಸಿದ್ದರಾಮಯ್ಯ, ಕೇಂದ್ರ ಯೋಜನಾ ಖಾತೆ ರಾಜ್ಯ ಸಚಿವ ಎಂ.ವಿ.ರಾಜಶೇಖರನ್ ಮತ್ತು ಜಲಸಂಪನ್ಮೂಲ ಖಾತೆ ಸಚಿವ ಮಲ್ಲಿಕಾರ್ಜುನ ಖರ್ಗೆ ಜತೆ ಪಾಟೀಲ್ ಅವರನ್ನು ಭೇಟಿ ಮಾಡಿದ್ದರು.

'ಪ್ರಾದೇಶಿಕ ಮೀಸಲಾತಿಗಾಗಿ ಸಂವಿಧಾನ ತಿದ್ದುಪಡಿ ಮಾಡಿದರೆ ನ್ಯಾಯಾಲಯದಲ್ಲಿ ಯಾರಾದರೂ ಪ್ರಶ್ನಿಸಬಹುದು. ಬೇರೆ ರಾಜ್ಯಗಳಿಂದಲೂ ಅದೇ ರೀತಿಯ ಬೇಡಿಕೆ ಬರಬಹುದು ಮತ್ತಿತರ ವಿಷಯಗಳ ಬಗ್ಗೆ ಗೃಹ ಸಚಿವರು ವಿವರಿಸಿದರು. ಅವರ ಹೊಸ ಪ್ರಸ್ತಾಪವನ್ನು ನಾವೇನು ಒಪ್ಪಿಕೊಂಡಿಲ್ಲ. ಪರಿಶೀಲಿಸಿ ತಿಳಿಸುತ್ತೇವೆ ಎಂದು ಹೇಳಿದ್ದೇವೆ' ಎಂದು ಮುಖ್ಯಮಂತ್ರಿಗಳು ಸಂಜೆ ಪತ್ರಕರ್ತರಿಗೆ ತಿಳಿಸಿದರು.

ಪ್ರತ್ಯೇಕ ವಿದರ್ಭ ರಾಜ್ಯದ ಬೇಡಿಕೆ ಹಿನ್ನೆಲೆಯಲ್ಲಿ 'ವಿದರ್ಭ ಅಭಿವೃದ್ಧಿ ಮಂಡಳಿ' ರಚಿಸಲಾಗಿದೆ. ಅದಕ್ಕಾಗಿ ಸಂವಿಧಾನದತ್ತವಾದ ಕೆಲವು ಅಧಿಕಾರಗಳನ್ನು ನೀಡುವ ಆಲೋಚನೆ ಇದೆ. ಅದೇ ಮಾದರಿಯಲ್ಲಿ ಹೈದರಾಬಾದ್ ಕರ್ನಾಟಕದ ಅಭಿವೃದ್ಧಿಗೆ ಮಂಡಳಿ ರಚಿಸುವ ಪ್ರಸ್ತಾಪ ಗೃಹಸಚಿವರು ಮುಂದಿಟ್ಟರು' ಎಂದು ಮುಖ್ಯಮಂತ್ರಿಗಳು ತಿಳಿಸಿದರು.

'ಹೈದರಾಬಾದ್ ಕರ್ನಾಟಕದ ಹಿಂದುಳಿದ ಜಿಲ್ಲೆಗಳಾದ ರಾಯಚೂರು, ಗುಲ್ಬರ್ಗ, ಬೀದರ್ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ಕಲ್ಪಿಸಲು ಸಂವಿಧಾನಕ್ಕೆ ತಿದ್ದುಪಡಿ ಮಾಡುವ ಮಸೂದೆಯನ್ನು ಮುಂದಿನ ಬಜೆಟ್ ಅಧಿವೇಶನದಲ್ಲಿ ಮಂಡಿಸಬೇಕೆಂದು ನಮ್ಮ ಒತ್ತಾಯ' ಎಂದು ಧರ್ಮಸಿಂಗ್ ಹೇಳಿದರು.

ಬರ ನೆರವು: ರಾಜ್ಯದಲ್ಲಿ ಬರ ಪರಿಹಾರಕ್ಕೆ ತುರ್ತಾಗಿ ನೆರವು ನೀಡುವಂತೆಯೂ ಮುಖ್ಯಮಂತ್ರಿಗಳ ನೇತೃತ್ವದ ನಿಯೋಗ ಗೃಹ ಸಚಿವರಿಗೆ ಮನವಿ ಸಲ್ಲಿಸಿತು. ಕೇಂದ್ರ ಅಧ್ಯಯನ ತಂಡ ರಾಜ್ಯಕ್ಕೆ ಭೇಟಿ ನೀಡಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ರಾಜ್ಯದ ಬೇಡಿಕೆಯಾದ 1047 ಕೋಟಿ ರೂಪಾಯಿ ನಗದು ಮತ್ತು ನಾಲ್ಕುವರೆ ಲಕ್ಷ ಟನ್ ಆಹಾರ ಧಾನ್ಯವನ್ನು ಬಿಡುಗಡೆ ಮಾಡುವಂತೆ ನಿಯೋಗ ಕೇಳಿಕೊಂಡಿತು.

ವಿಶೇಷ ಪ್ಯಾಕೇಜ್: ಮುಂಬೈ ಅಭಿವೃದ್ಧಿಗೆ ನೆರವಾದ ರೀತಿಯಲ್ಲಿಯೇ ಬೆಂಗಳೂರು ಮೂಲಸೌಕರ್ಯ ಸುಧಾರಣೆಗೆ ವಿಶೇಷ ಪ್ಯಾಕೇಜ್ ನೀಡುವಂತೆ ಮುಖ್ಯಮಂತ್ರಿಗಳ ನಿಯೋಗ ಇಂದು ಕೇಂದ್ರ ಯೋಜನಾ ಆಯೋಗದ ಉಪಾಧ್ಯಕ್ಷ ಮೊಂಟೆಕ್‌ಸಿಂಗ್ ಅಹ್ಲುವಾಲಿಯಾ ಅವರಿಗೆ ಮನವಿ ಮಾಡಿತು.

ಈ ತಿಂಗಳ 19ಕ್ಕೆ ರಾಜ್ಯದ ಯೋಜನಾ ಗಾತ್ರದ ಬಗ್ಗೆ ಚರ್ಚೆಗೆ ಸಭೆ ನಡೆಯಲಿರುವ ಹಿನ್ನೆಲೆಯಲ್ಲಿ ರಾಜ್ಯದ ನಿಯೋಗ ಇಂದಿನ ಸಭೆಯಲ್ಲಿ ಕೆಲವು ನಿರ್ದಿಷ್ಟ ಬೇಡಿಕೆಗಳನ್ನು ಆಯೋಗದ ಮುಂದೆ ಮಂಡಿಸಿತು. ತ್ವರಿತ ನೀರಾವರಿ ಸೌಲಭ್ಯ ಯೋಜನೆ (ಎಐಬಿಪಿ)ಯಡಿ ನೀಡಲಾಗುವ ಸಾಲದ ಅರ್ಧಭಾಗವನ್ನು ಅನುದಾನದ ರೂಪದಲ್ಲಿ ನೀಡಬೇಕೆಂಬುದು ರಾಜ್ಯದ ಬೇಡಿಕೆ.

**ವರದಿ : ವಿಜಯ ಕರ್ನಾಟಕ, ೦೪.೧೧.೨೦೦೪, ಪು. ೪**

ಇವರ ಬೇಡಿಕೆಗಳನ್ನು ಮತ್ತು ಈ ಭಾಗದ ಅಭಿವೃದ್ಧಿಗೆ ನಾವು ಶ್ರಮಿಸದಿದ್ದರೆ ಇವತ್ತಿದ್ದ ಕರ್ನಾಟಕದ ಇನ್ನುಳಿದ ಈ ಭಾಗಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಸರಕಾರಗಳು ಇಲ್ಲಿನ ಅಭಿವೃದ್ಧಿಯತ್ತ ದೃಷ್ಟಿಹರಿಸಬೇಕಾಗಿದೆ.

೫.೫. ಕರ್ನಾಟಕ-ಆಂಧ್ರ ಗಡಿಭಾಗದಲ್ಲಿರುವ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು

೫.೫.೧. ಗಡಿಗ್ರಾಮಗಳಲ್ಲಿನ ಗ್ರಾಮೀಣಾಭಿವೃದ್ಧಿಯ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು :

ಈ ಅಧ್ಯಯನದ ವ್ಯಾಪ್ತಿಗೊಳಪಡುವ ಕರ್ನಾಟಕ-ಆಂಧ್ರ ಗಡಿಭಾಗದ ಸುಮಾರು ೧೩೦ ಹಳ್ಳಿಗಳಲ್ಲಿನ ಗ್ರಾಮೀಣಾಭಿವೃದ್ಧಿ ನಿರೀಕ್ಷೆಯ ಮಟ್ಟಕ್ಕೆ ತಲುಪಿಲ್ಲ. ಸರ್ಕಾರ ಜಾರಿಗೊಳಿಸಿದ ಯೋಜನೆಗಳು ಈ ಗಡಿಗ್ರಾಮಗಳಲ್ಲಿ ಕಂಡುಬರುತ್ತಿಲ್ಲ. ಇಲ್ಲಿನ ಗ್ರಾಮಪಂಚಾಯತಿಗಳು ಜವಾಬ್ದಾರಿಯುತವಾಗಿ ಕೆಲಸ ಮಾಡುತ್ತಿಲ್ಲ. ಸರ್ಕಾರದ ಅನುದಾನಗಳು ಗ್ರಾಮಗಳಿಗೆ ಮುಟ್ಟುವ ಮುನ್ನವೇ ಅಪಾರ ಪ್ರಮಾಣದ ಸೋರಿಕೆಯಾಗುತ್ತಿವೆ. ಇಷ್ಟಲ್ಲದೇ ಬಹಳಷ್ಟು ಹಳ್ಳಿಗಳು ಕನಿಷ್ಟ ಜೀವನಾವಶ್ಯಕತೆಗಳಿಂದ ವಂಚಿತವಾಗಿವೆ. ಮುಖ್ಯವಾಗಿ ಈ ಗಡಿ ಹಳ್ಳಿಗಳಲ್ಲಿ ಕುಡಿಯುವ ನೀರು, ಗ್ರಾಮೀಣಾರೋಗ್ಯ, ಪ್ರಾಥಮಿಕ ಶಿಕ್ಷಣ, ಸತ್ವಯುತ ಆಹಾರ, ಬೀದಿದೀಪಗಳು, ಶೌಚಾಲಯಗಳ ಕೊರತೆ, ಕೂಡುರಸ್ತೆ ಸೌಕರ್ಯ, ಭೂರಹಿತ ಕೃಷಿಕಾರ್ಮಿಕರಿಗೆ ವಸತಿ ಸೌಲಭ್ಯ, ನಿರುದ್ಯೋಗಿ ಯುವಕರಿಗೆ ಉದ್ಯೋಗ, ಕೃಷಿಕರಿಗೆ ಉತ್ತಮ ಬಿತ್ತನೆ ಬೀಜ, ನೀರಾವರಿ ಯೋಜನೆಗಳು, ಕೃಷಿಮಾರುಕಟ್ಟೆ ಮತ್ತು ಉಗ್ರಾಣ ವ್ಯವಸ್ಥೆ, ರೈತರಿಗೆ ಸಕಾಲಕ್ಕೆ ಸಾಲ ನೀಡುವ, ಬೆಳೆ ವೈಫಲ್ಯಕ್ಕೆ ಪರಿಹಾರ, ಬೆಳೆದ ಬೆಲೆಗೆ ಬೆಂಬಲ ಬೆಲೆ ಇವುಗಳ ಕೊರತೆ ಕಂಡುಬರುತ್ತಿದೆ. ಇವೆಲ್ಲ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಆಡಳಿತಾತ್ಮಕ ನ್ಯೂನತೆಗಳು ಕಂಡುಬರುತ್ತವೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದಕ್ಕಿಂತ ಮುಂಚೆ ಈ ಮೇಲಿನ ಸಮಸ್ಯೆಗಳು ಮತ್ತು ಆ ಸಮಸ್ಯೆ ಬಗೆಹರಿಸುವ ಪರಿಹಾರೋಪಾಯಗಳನ್ನು ಇಲ್ಲಿ ವಿಶ್ಲೇಷಿಸಲಾಗುತ್ತಿದೆ.

ಕೇಂದ್ರ ಸರ್ಕಾರ, ರಾಜ್ಯಸರ್ಕಾರ, ಜಿಲ್ಲಾಪಂಚಾಯತಿಗಳು ಗ್ರಾಮೀಣಾಭಿವೃದ್ಧಿಯ ಯೋಜನೆಗಳನ್ನು ರೂಪಿಸಿ ಗ್ರಾಮಗಳ ಅಭಿವೃದ್ಧಿಗೆ ಹಲವು ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುತ್ತಿವೆ. ಆದರೆ ಈ ಯೋಜನೆಗಳು ಎಷ್ಟರ ಮಟ್ಟಿಗೆ ನಿಗದಿತ ಗುರಿ ತಲುಪಿ ಗ್ರಾಮೀಣಾಭಿವೃದ್ಧಿಯಾಗಲು ಸಹಕಾರಿಯಾಗಿವೆ ಎಂಬುದನ್ನು ನೋಡುವುದಕ್ಕೆ ಈ ಕೆಳಗಿನ ಅಂಶಗಳನ್ನು ಗಮನಿಸುವುದು ಸೂಕ್ತವಾಗಬಹುದು.

**೫.೫.೧.೧. ವಸತಿ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು :** ಈ ಗಡಿಗ್ರಾಮಗಳಲ್ಲಿ ವಸತಿ ಸಮಸ್ಯೆ ಹೆಚ್ಚಾಗಿ ಕಂಡುಬರುತ್ತಿದೆ. ತಮ್ಮ ಪೂರ್ವಜರು ಕಟ್ಟಿದ ತಾನು ಹುಟ್ಟಿ ಬೆಳೆದ ಮನೆಯೊಂದಿಗೆ ಪ್ರತಿಯೊಬ್ಬರು ಭಾವನಾತ್ಮಕ ಸಂಬಂಧವನ್ನು ಹೊಂದಿರುತ್ತಾರೆ. ಹಾಗೆ ಇಲ್ಲಿಯವರು ಕೇವಲ ಮಳೆ, ಗಾಳಿ, ಬಿಸಿಲುಗಳಿಂದ ರಕ್ಷಿಸುವ ಭೌತಿಕ ಕಟ್ಟಡಗಳೆಂದು ತಿಳಿಯದೆ ಅದು ಜೀವನದ ಪ್ರಮುಖ ಘಟ್ಟಗಳಲ್ಲೊಂದು ಎಂಬ ಸ್ಥಾನ ಮನೆಗಳಿಗೆ ನೀಡಿರುವುದು ಕಂಡುಬರುತ್ತದೆ. ಹೀಗಿದ್ದು ಈ ಗಡಿಗ್ರಾಮಗಳಲ್ಲಿ ಇವತ್ತಿಗೂ ಸುಮಾರು ಶೇ. ೪೮ರಷ್ಟು ಕುಟುಂಬಗಳು ಪಕ್ಕಾಮನೆಗಳನ್ನು ಕಟ್ಟಿಕೊಳ್ಳುವ ಸಾಮರ್ಥ್ಯದಿಂದ ವಂಚಿತರಾಗಿದ್ದಾರೆ. ವೃದ್ಧ ತಂದೆ-ತಾಯಿ, ಅವರ ಇಬ್ಬರು ಅಥವಾ ಮೂವರು ವಯಸ್ಕ ಮಕ್ಕಳು ಹಾಗೂ ಹಲವಾರು ಚಿಕ್ಕ ಮಕ್ಕಳಿರುವಂತಹ ಕುಟುಂಬಗಳು ಒಂದೇ ಕೋಣೆಯ ಮನೆಯಲ್ಲಿ ವಾಸಿಸುವುದು ಸರ್ವೇಸಾಮಾನ್ಯವಾಗಿದೆ. ಒಟ್ಟಾರೆ ಸುಮಾರು ೪೫ ಪ್ರತಿಶತದಷ್ಟು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಕುಟುಂಬಗಳು ಸೂಕ್ತ ಸೂರಿಲ್ಲದೆ ಕಷ್ಟಪಡುತ್ತಿವೆ. ಸರ್ಕಾರ ಈ ನಿಟ್ಟಿನಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಆಶ್ರಯ ಮತ್ತು ಅಂಬೇಡ್ಕರ್ ವಸತಿಯೋಜನೆ, ಇಂದಿರಾ ಆವಾಸ್ ಯೋಜನೆಗಳ

ಅಡಿಯಲ್ಲಿ ಪಕ್ಕಾಮನೆಗಳನ್ನು ನಿರ್ಮಿಸುತ್ತಿದೆ. ಆದರೆ ಈ ಯೋಜನೆಗಳು ಎಷ್ಟರಮಟ್ಟಿಗೆ ನಿಗದಿತ ಗುರಿ ಮುಟ್ಟುತ್ತಿವೆ ಎಂಬುದೇ ಇಲ್ಲಿನ ಮುಖ್ಯ ಪ್ರಶ್ನೆ? ಈ ಯೋಜನೆಗಳ ಅಡಿಯಲ್ಲಿ ನಿರ್ಮಿಸಿದ ಮನೆಗಳು ಕಳಪೆ ಮಟ್ಟದ ಕಾಮಗಾರಿ, ಮನೆಗಳನ್ನು ಹಂಚುವಾಗ ಅಗತ್ಯ ಫಲಾನುಭವಿಗಳನ್ನು ಗುರುತಿಸುವಲ್ಲಿ ಕಂಡುಬರುವ ನ್ಯೂನತೆ, ಕನಿಷ್ಟ ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು, ಶೌಚಾಲಯ, ರಸ್ತೆ, ವಿದ್ಯುತ್‌ಗಳಂತಹ ಮುಂತಾದವುಗಳು ಇಂತಹ ವಸತಿ ಯೋಜನೆಗಳಲ್ಲಿ ಸರಿಯಾಗಿ ಕಂಡುಬರುವುದೇ ಇಲ್ಲ. ಈ ಮನೆಗಳನ್ನು ಹಂಚುವಾಗ ಬಹುತೇಕ ಎಲ್ಲ ಕಡೆ ಸ್ಥಳೀಯ ಶಾಸಕ, ಪಂಚಾಯತಿ ಅಧ್ಯಕ್ಷ, ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರ ಮತ್ತು ಗ್ರಾಮದ ಪ್ರಮುಖ ಪ್ರಭಾವಿಗಳ ಬೆಂಬಲಿಗರಿಗೆ ಮಾತ್ರ ಸರಕಾರದ ಮನೆಗಳನ್ನು ಹಂಚಲಾಗುತ್ತಿದೆ. ಅಂದರೆ ಈ ಯೋಜನೆಗಳ ಅಡಿಯಲ್ಲಿ ಮನೆ ಪಡೆಯಬೇಕೆಂದರೆ ಇಂತವರ ಅನುಯಾಯಿಗಳಾಗಿರಲೇಬೇಕು. ಅಂತವರಿಗೆ ಮಾತ್ರ ಈ ಮನೆಗಳು ಸಿಗುವಂತಹ ಸ್ಥಿತಿ ಇಲ್ಲಿದೆ. ದುರ್ಬಲರಿಗೆ, ಬಡವರಿಗೆ ಆಶ್ರಯ ಮನೆಗಳ ಹಂಚಿಕೆಯಲ್ಲಿ ಸ್ಥಳೀಯ ರಾಜಕೀಯ ಪ್ರವೇಶ ಮಾಡುತ್ತಿದೆ. ಇಂತಹ ಎಲ್ಲ ಬಗೆಯ ಸಮಸ್ಯೆಗಳನ್ನು ಬಗೆಹರಿಸಿ ಈ ಆಶ್ರಯ ಮನೆಗಳನ್ನು ನಿರ್ಮಿಸುವಾಗ ಅವು ಗಟ್ಟಿಮುಟ್ಟಾಗಿರುವಂತೆ, ಅಲ್ಲಿ ಕುಡಿಯುವ ನೀರು, ಶೌಚಾಲಯ, ವಿದ್ಯುಚ್ಛಕ್ತಿ, ರಸ್ತೆ, ಆರೋಗ್ಯಕೇಂದ್ರಗಳಂತಹ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿ, ಮನೆ ಕಟ್ಟಿಕೊಳ್ಳಲಾಗದ ಬಡವರನ್ನು ಗುರುತಿಸಿ ಅಂತಹ ಫಲಾನುಭವಿಗಳಿಗೆ ವಸತಿ ವ್ಯವಸ್ಥೆ ಮಾಡಿಕೊಡಬೇಕು.

**೫.೫.೧.೨. ಕುಡಿಯುವ ನೀರಿನ ಸಮಸ್ಯೆಗಳು ಮತ್ತು ಪರಿಹಾರಗಳು :** ಕುಡಿಯುವ ನೀರಿನ ಸಮಸ್ಯೆಯು ಈ ಗಡಿಗ್ರಾಮಗಳ ದಿನನಿತ್ಯದ ಸಮಸ್ಯೆಗಳಲ್ಲೊಂದಾಗಿದೆ. ಕಿರುನೀರಿನ ಯೋಜನೆಗಳಿರುವ ಸುಮಾರು ೬೩ ಹಳ್ಳಿಗಳಲ್ಲಿ ೨೮ ಕಿರುನೀರಿನ ಯೋಜನೆಗಳು ಇಂದು ಕೆಲಸ ಮಾಡುತ್ತಿಲ್ಲ. ಪೈಪಿನ ಮೂಲಕ ನೀರು ಪೂರೈಸುವ ೪೯ ಯೋಜನೆಗಳಲ್ಲಿ ೨೮ ಎತ್ತರ ಮಟ್ಟದ ಜಲಾಶಯಗಳಿಂದ ನೀರು ಪೂರೈಸುವುದರಿಂದ ಅವುಗಳಲ್ಲಿ ವ್ಯತ್ಯಯ ಉಂಟಾಗುತ್ತಿದೆ. ಕೊಳವೆ ಬಾವಿಗಳ ಕೈ ಪಂಪುಗಳು ಯಾವಾಗಲು ಕೆಟ್ಟಿರುತ್ತವೆ. ಇದಕ್ಕೆ ಅಂತರ್ಜಲ ಕಡಿಮೆ ಆಗಿರುವುದರಿಂದಲೂ, ನೀರು ಪೂರೈಕೆ ಪಂಪುಗಳಿಗೆ ಅಳವಡಿಸಿದ ವಿದ್ಯುತ್ ಯಂತ್ರಗಳು ಮೇಲಿಂದ ಮೇಲೆ ಕೈಕೊಡುವುದರಿಂದಲೂ ಕುಡಿಯುವ ನೀರಿನ ಪೂರೈಕೆಯಲ್ಲಿ ವ್ಯತ್ಯಯ ಕಂಡುಬರುತ್ತಿದೆ. ಇಲ್ಲಿನ ಕುಡಿಯುವ ನೀರಿನ ಮೂಲ ಎರಡು ಸ್ವರೂಪದಲ್ಲಿದ್ದು ಮೊದಲನೆಯದು ನೈಸರ್ಗಿಕವಾದದ್ದು, ಎರಡನೆಯದು ಮಾನವ ನಿರ್ಮಿತವಾದದ್ದು, ಮಳೆಗಾಲ ಮುಗಿದ ೩-೪ ತಿಂಗಳಿಗೆ ಈ ಭಾಗದ ಬಹುತೇಕ ಗಡಿಹಳ್ಳಿಗಳಲ್ಲಿನ ಅಂತರ್ಜಲ ತೀರಾ ಕೆಳಗೆ ಹೋಗುವುದರಿಂದ ಬೇಸಿಗೆಯಲ್ಲಿ ಕುಡಿಯುವ ನೀರಿನ ಬವಣೆ ತೀವ್ರವಾಗುತ್ತದೆ. ಅಂತರ್ಜಲ ಮಟ್ಟವನ್ನು ಹೆಚ್ಚಿಸುವ ಯಾವ ಕ್ರಮಗಳನ್ನು ಇಲ್ಲಿ ಸರ್ಕಾರ, ಸರ್ಕಾರೇತರ ಸಂಘ-ಸಂಸ್ಥೆಗಳು ಕೈಗೊಂಡಿರುವುದಿಲ್ಲ. ಇದಕ್ಕೆ ಇಲ್ಲಿನ ಕೆಲವು ಗಡಿಗ್ರಾಮಗಳಲ್ಲಿನ ಕುಡಿಯುವ ನೀರಿನ ಸ್ಥಿತಿಯನ್ನು ನೋಡಬೇಕು.

ಕೋಲಕುಂದಾ ಗಡಿಗ್ರಾಮದ ಒಟ್ಟು ಜನಸಂಖ್ಯೆ ಸುಮಾರು ೫,೫೦೦ ಇದೆ. ಒಂದು ತೆರೆದ ಬಾವಿಯಿಂದ ಗ್ರಾಮಪಂಚಾಯತಿ ಈ ಗ್ರಾಮಕ್ಕೆ ಕುಡಿಯುವ ನೀರಿನ ಸೌಲಭ್ಯವನ್ನು ಒದಗಿಸಿದೆ. ಇದಲ್ಲದೆ ಜಿಲ್ಲಾ ಪಂಚಾಯತಿಯ ೧೩ ಕೊಳವೆ ಬಾವಿಗಳು ಮತ್ತು ಗ್ರಾಮಸ್ಥರ ಖಾಸಗಿ ೧೨ ತೆರೆದ ಬಾವಿ,

೮ ಕೊಳವೆ ಬಾವಿಗಳು ಕೂಡಾ ಗ್ರಾಮದ ಜನರಿಗೆ ಕುಡಿಯುವ ನೀರೊದಗಿಸುತ್ತವೆ. ಒಟ್ಟಾರೆ ಇಡೀ ಗ್ರಾಮದಲ್ಲಿ ೩೪ ವಿವಿಧ ಕುಡಿಯುವ ನೀರಿನ ಮೂಲಗಳಿವೆ. ಇವಿಷ್ಟೆ ವರ್ಷ ಪೂರ್ತಿ ಕುಡಿಯುವ ನೀರನ್ನು ಒದಗಿಸಿದರೆ ಇಡೀ ಗ್ರಾಮಕ್ಕೆ ಯಾವತ್ತು ಕುಡಿಯುವ ನೀರಿನ ಅಭಾವ ಎದುರಾಗುವುದಿಲ್ಲ. ಆದರೆ ಇಲ್ಲಿನ ಅಂತರ್ಜಲ ಮಟ್ಟ ತೀರಾ ಆಳದಲ್ಲಿರುವುದರಿಂದ ಈ ತೆರೆದ ಬಾವಿಗಳು ಮತ್ತು ಕೊಳವೆಬಾವಿಗಳು ಉತ್ತಮ ನೀರಿನ ಮೂಲಗಳಾಗುತ್ತಿಲ್ಲ. ಸುಮಾರು ೨೫೦ ರಿಂದ ೩೦೦ ಅಡಿ ಆಳದಲ್ಲಿ ನೀರು ಸಿಗುವುದು, ಅದು ಸಿಕ್ಕರೆ ಸಿಗಬಹುದು, ಇಲ್ಲದಿದ್ದರೆ ಇಲ್ಲ. ಸಿಕ್ಕರೂ ೧ ಅಥವಾ ೨ ಇಂಚು ನೀರು. ಇಷ್ಟು ನೀರಿಗಾಗಿ ಕೊಳವೆಬಾವಿ ಕೊರೆದು ನೀರನ್ನು ಮೇಲೆತ್ತಲು ಸುಮಾರು ೧೫ ರಿಂದ ೨೦ ಸಾವಿರ ಪ್ರತಿ ಕೊಳವೆಬಾವಿಗೆ ವೆಚ್ಚ ತಗಲುತ್ತದೆ. ಇಷ್ಟಿದ್ದರೂ ಜಿಲ್ಲಾಪಂಚಾಯತ್ ಕೊಳವೆ ಬಾವಿಗಳೇನೋ ಕೊರೆಸುತ್ತದೆ. ಆದರೆ ಮುಂದೆ ಇವುಗಳ ನಿರ್ವಹಣೆಗೆ ಆದ್ಯತೆ ಕೊಡದೆ ಅವು ನಿಷ್ಕ್ರೀಯವಾಗುತ್ತವೆ. ಹೀಗಾಗಿಯೆ ಈ ಗ್ರಾಮದಲ್ಲಿ ಹಲವು ಕೊಳವೆಬಾವಿಗಳು ನೀರೇತ್ತುತ್ತಿಲ್ಲ. ಅಂತಲೇ ಇವತ್ತು ಇಂತಹ ಗಡಿಗ್ರಾಮಗಳಲ್ಲಿ ಕುಡಿಯುವ ನೀರಿಗಾಗಿ ಮುಖ್ಯವಾಗಿ ಅಂತರ್ಜಲದ ಮಟ್ಟವನ್ನು ಹೆಚ್ಚಿಸಬೇಕಾಗಿದೆ. ಅದಕ್ಕಾಗಿ ಮಳೆನೀರನ್ನು ಸಂಗ್ರಹಿಸುವುದು ಹಾಗೂ ಆ ನೀರು ಭೂಮಿಯಲ್ಲಿ ಇಂಗುವಂತೆ ಮಾಡುವುದು. ಬೆಟ್ಟ, ಗುಡ್ಡ, ದಿಣ್ಣೆಗಳ ಮೇಲೆ ಬಿದ್ದ ಮಳೆನೀರನ್ನು ಇಳಿಜಾರು ಇರುವ ಕಡೆ ಹರಿಸಿ, ಹಾಗೇ ಹರಿದು ಹೋಗುವ ನೀರಿಗೆ ಕೆರೆ, ಜಲಾಶಯಗಳನ್ನು ನಿರ್ಮಿಸಬೇಕಾಗಿದೆ.

ಸರ್ಕಾರದ ಸಂಸ್ಥೆಗಳು ಕೊಳವೆಬಾವಿಗಳನ್ನು ಕೊರೆಯಿಸುವುದಕ್ಕೂ ಪೂರ್ವದಲ್ಲಿ ಭೂಗರ್ಭ ಶೋಧಕ (ಜಿಯೋ ಫಿಜಿಕಲ್ ಸರ್ವೆ)ರಿಂದ ಎಲ್ಲಿ ನೀರಿನ ಮಟ್ಟ ಅಧಿಕವಾಗಿದೆ ಎಂದು ಖಾತರಿಪಡಿಸಿಕೊಂಡು ಅವರು ಹೇಳುವ ಸ್ಥಳಗಳಲ್ಲಿ ಕೊಳವೆ ಬಾವಿಗಳನ್ನು ಕೊರೆದು, ಅಲ್ಲಿ ಸಿಗುವ ನೀರಿನ ಪ್ರಮಾಣ ಹಾಗೂ ನೀರಿನ ಆಳದ ಮಟ್ಟ ಸರಿಯಾಗಿ ಗುರುತಿಸಿ ಕೈಪಂಪುಗಳನ್ನು ಜೋಡಿಸಬೇಕು. ಇಲ್ಲದಿದ್ದರೆ ಮಳೆಗಾಲದಲ್ಲಿ ಕೂಡಿಸಿದ ಕೈಪಂಪುಗಳು ೩-೪ ತಿಂಗಳು ಕಳೆಯುವಷ್ಟರಲ್ಲಿಯೇ ಬೇಸಿಗೆಯಲ್ಲಿ ನಿರುಪಯುಕ್ತವಾಗುತ್ತವೆ. ಇದರ ಜೊತೆಗೆ ಗ್ರಾಮಸ್ಥರು ಸಹ ಇವುಗಳ ನಿರ್ವಹಣೆಗೆ ಆದ್ಯತೆ ನೀಡಬೇಕು. ಊರಿನ ದನಕಾಯುವ ಕಿಡಿಗೇಡಿ ಹುಡುಗರು ಕೊಳವೆಬಾವಿಗಳ ಮೇಲೆ ಕಲ್ಲಿನಿಂದ ಜಜ್ಜಿ ಹಾಳು ಮಾಡುವುದನ್ನು ತಪ್ಪಿಸಬೇಕು. ಸರ್ಕಾರಗಳು ಹಳ್ಳಿಗಳ ಪ್ರತಿ ೧೦೦ ಜನರಿಗೆ ಒಂದು ಕೊಳವೆ ಬಾವಿ, ಪ್ರತಿ ೫೦೦ ಜನರಿಗೆ ಒಂದು ಕಿರುನೀರು ಯೋಜನೆ, ೨೦೦೦ ಜನಸಂಖ್ಯೆಯ ಹಳ್ಳಿಗಳಿಗೆ ಜಲಸಂಗ್ರಹಗಾರರಿಂದ ಪೈಪು ಮೂಲಕ ನೀರು ಪೂರೈಸುವ ಯೋಜನೆ, ಅಂತರ್ಜಲ ಹೆಚ್ಚಿಸುವ ದೃಷ್ಟಿಯಿಂದ ಹಳ್ಳಿಗಳಿಗೆ ೨ ಕಿ.ಮೀ. ಅಂತರದಲ್ಲಿನ ಕೆರೆಗಳ ಹೂಳು ತೆಗೆದು ಅವುಗಳಲ್ಲಿ ನೀರು ಸಂಗ್ರಹಿಸುವಂತೆ ಮಾಡುವುದು, ಇಂತಹ ಯೋಜನೆಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸಿದರೆ ಗಡಿ ಹಳ್ಳಿಗಳಲ್ಲಿ ಕುಡಿಯುವ ನೀರಿನ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬಹುದು.

**೫.೫.೧.೩. ಶೌಚಾಲಯ ಮತ್ತು ಬೀದಿದೀಪಗಳ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು:** ಗಡಿಗ್ರಾಮಗಳಲ್ಲಿನ ಸ್ವಚ್ಛತಾ ಆಂದೋಲನದಲ್ಲಿ ಶೌಚಾಲಯ ಯೋಜನೆಯು ಒಂದು. ಗ್ರಾಮಗಳಲ್ಲಿನ ಪ್ರತಿಯೊಂದು ಮನೆಯಲ್ಲಿ ಶೌಚಾಲಯ (ಕಕ್ಕಸ್ಸು) ನಿರ್ಮಿಸುವ ಮೂಲಕ ಹಳ್ಳಿಗಳಲ್ಲಿ ನಿರ್ಮಲ

ಪರಿಸರವನ್ನು ಕಂಡುಕೊಳ್ಳಬಹುದೆಂದು ಸರ್ಕಾರ, ಗ್ರಾಮಪಂಚಾಯತಿಗಳು ಪ್ರತಿಯೊಂದು ಮನೆಗಳಿಗೆ ಶೌಚಾಲಯ ನಿರ್ಮಿಸಲು ಪ್ರತಿ ಶೌಚಾಲಯಕ್ಕೆ ರೂ. ೧೨೦೦ಗಳನ್ನು ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳಿಗೆ ಕೊಡಲಾಗುತ್ತಿದೆ. ಇವತ್ತು ರೂ. ೧೨೦೦ಗಳಲ್ಲಿ ಶೌಚಾಲಯ ನಿರ್ಮಿಸಲು ಸಾಧ್ಯವೇ? ನಾಲ್ಕೂವರೆ ಅಡಿ ಎತ್ತರದ ಶೌಚಾಲಯದ ಗೋಡೆಗಳಿಗೆ ಬೇಕಾಗುವಷ್ಟು ಇಟ್ಟಿಗೆ, ಸಿಮೆಂಟ್, ಮರಳು, ಪ್ಯಾನು, ಪೈಪು ಮತ್ತು ಕೆಲಸಗಾರರ ಕೂಲಿ, ಸರ್ಕಾರ ನೀಡುವ ಸಾವಿರದ ಇನ್ನೂರು ರೂಪಾಯಿಗಳಲ್ಲಿ ಸಾಧ್ಯವೇ ಎನ್ನುವುದಾದರೆ ಅದು ಸಾಧ್ಯವಿಲ್ಲ. ಆದ್ದರಿಂದಲೆ ಹಣ ಪಡೆದುಕೊಂಡವರು ದಾಖಲೆಗಳಲ್ಲಿ ಮಾತ್ರ ಶೌಚಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಗಡಿಗ್ರಾಮಗಳಲ್ಲಿನ ಬೀದಿದೀಪಗಳದ್ದು ಇನ್ನು ಒಂದು ಸಮಸ್ಯೆ. ಕೆ.ಇ.ಬಿ.ಯವರು ಹಾಕಿದ ಎತ್ತರ ದೀಪದ ಕಂಬಗಳಿಗೆ ೧೦೦ ಅಥವಾ ೧೬೦ ವ್ಯಾಟನ ಬಲ್ಪ್ ಹಾಕಿದರೆ ಅದು ಕಂಬದ ಕೆಳಗೂ ಬೆಳಕು ನೀಡುವುದಿಲ್ಲ. ಈ ಟಂಗ್‌ಸ್ಟನ್ ಬಲ್ಪಗಳಿಗೆ ಬದಲಾಗಿ ಟ್ಯೂಬ್‌ಲೈಟ್ ಹಾಕಿ ಸ್ವಾತಂತ್ರ್ಯ ನಂತರದ ಗಡಿಗ್ರಾಮಗಳೂ ದೀಪದಿಂದ ಬೆಳಗುವಂತೆ ಮಾಡಬೇಕಾಗಿದೆ.

೫.೫.೧.೪. **ಗಡಿಭಾಗದ ಶಾಲೆಗಳಲ್ಲಿನ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು :** ಸರ್ಕಾರ ಮತ್ತು ಶಿಕ್ಷಣ ಇಲಾಖೆಗಳ ಅಂಕಿ-ಅಂಶ, ದಾಖಲೆಗಳನ್ನು ಒಪ್ಪುವುದಾದರೆ ಈ ಕರ್ನಾಟಕ-ಆಂಧ್ರ ಗಡಿಭಾಗದಲ್ಲಿ ಶೇ. ೬ಲಕ್ಕಿಂತಲೂ ಹೆಚ್ಚಿನ ಸಾಕ್ಷರತೆಯ ಪ್ರಮಾಣವನ್ನು ಗುರುತಿಸಬಹುದು. ಆದರೆ ವಾಸ್ತವದಲ್ಲಿ ಈ ಅಂಕಿ-ಅಂಶಗಳು ಕೇವಲ ದಾಖಲೆಗಳಲ್ಲಿ ಮಾತ್ರ ಉಳಿದುಕೊಂಡಿವೆ. ಸುಮಾರು ೧೩೦ ಗಡಿಗ್ರಾಮಗಳ ಶಾಲೆಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆ ೨೪,೯೦ರಷ್ಟಿದ್ದು, ಇವರಿಗೆ ಒಟ್ಟು ೬೦೨ ಶಿಕ್ಷಕರಿರಬೇಕಾಗಿತ್ತು. (ಸರ್ಕಾರದ ನಿಯಮದಂತೆ ೪೦ ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕರಂತೆ) ಆದರೆ ಇಲ್ಲಿರುವುದು ೫೩೩ ಮಾತ್ರ. ಅಂದರೆ ಇನ್ನು ೭೦ ಶಿಕ್ಷಕರ ಅಭಾವ ಎದ್ದು ಕಾಣುತ್ತಿದೆ. ಇದು ಶಿಕ್ಷಕರ ಸಂಖ್ಯೆಯಲ್ಲಿನ ಸಮಸ್ಯೆಯಾದರೆ ಇನ್ನು ಶಾಲಾಕಟ್ಟಡ ಮತ್ತು ಅಲ್ಲಿನ ವಿದ್ಯಾರ್ಥಿಗಳಿಗನುಗುಣವಾಗಿ ಕೋಣೆಗಳಿರದೆ ಇದ್ದುದು ಮತ್ತೊಂದು ಸಮಸ್ಯೆ. ಅನೇಕ ಗಡಿಗ್ರಾಮಗಳಲ್ಲಿನ ಶಾಲಾಕಟ್ಟಡಗಳು ಶಿಥಿಲಗೊಂಡಿದ್ದು ಕಂಡುಬರುತ್ತವೆ. ಅಲ್ಲದೆ ಈ ಶಾಲೆಗಳಲ್ಲಿನ ಬಿಸಿಯೂಟದ ವ್ಯವಸ್ಥೆ ತೀರಾ ಹದಗೆಟ್ಟಿದ್ದು ಜಾತ್ರೆ, ಉತ್ಸವಗಳಲ್ಲಿ ಉಚಿತ ಊಟಕ್ಕಾಗಿ ಮುಗಿಬೀಳುವಂತೆ ಮಕ್ಕಳು ಬಿಸಿಯೂಟಕ್ಕಾಗಿ ಮುಗಿಬೀಳುತ್ತಾರೆ. ಬಿಸಿಯೂಟ ಕಾರ್ಯಕ್ರಮವನ್ನು ಶಾಲೆಯ ಸಿಬ್ಬಂದಿಗಳು ಸರಿಯಾಗಿ ನಿರ್ವಹಿಸುತ್ತಿಲ್ಲ. ಬಿಸಿಯೂಟಕ್ಕೆ ಬೇಕಾಗುವ ಅಡುಗೆ ಅನಿಲ ಸರಿಯಾದ ಸಮಯಕ್ಕೆ ಪೂರೈಕೆಯಾಗದೆ, ಒಂದೊಂದು ವಾರದವರೆಗೆ ಶಾಲೆಗಳಲ್ಲಿ ಬಿಸಿಯೂಟ ಸ್ಥಗಿತಗೊಂಡದ್ದು ಕಂಡುಬರುತ್ತದೆ. ಬೇಳೆ, ಅಕ್ಕಿ, ತರಕಾರಿ ಮತ್ತು ಇತರ ಪದಾರ್ಥಗಳು ಕಳಪೆಯಾಗಿರುತ್ತವೆ. ಗಡಿಶಾಲೆಗಳಲ್ಲಿ ಮಕ್ಕಳಿಗೆ ಕುಡಿಯುವ ನೀರಿನ ವ್ಯವಸ್ಥೆ, ಶೌಚಾಲಯ ವ್ಯವಸ್ಥೆ, ಆಟದ ಮೈದಾನ ಕಂಡುಬರುವುದಿಲ್ಲ. ಮತ್ತು ಮುಖ್ಯವಾಗಿ ಈ ಗಡಿಗ್ರಾಮಗಳು ದ್ವಿಭಾಷಿಕ ಪರಿಸರದಲ್ಲಿರುವುದರಿಂದ ಬೇರೆ ಕಡೆಯಿಂದ ಬರುವ ಶಿಕ್ಷಕರಿಗೆ ಮಕ್ಕಳ ಜೊತೆ ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ಭಾಗಿಯಾಗಲು ಭಾಷೆ ಅಡ್ಡಿಪಡಿಸುತ್ತಿದೆ. ಜಿಲ್ಲಾ ಪರಿಷತ್ತು ಇಂತಹ ಗಡಿಭಾಗದಲ್ಲಿನ ಶಾಲೆಗಳ ಅಭಿವೃದ್ಧಿಯತ್ತ ಹೆಚ್ಚಿನ ಗಮನ ನೀಡುವುದು ಅತ್ಯವಶ್ಯಕವಾಗಿದೆ. ಜಿಲ್ಲಾ ಪರಿಷತ್ತು ಪ್ರಾಥಮಿಕ ಶಾಲೆಗಳ ಕೊಠಡಿಗಳಿಗೆ ಕೇವಲ ೧೫ ಸಾವಿರ ರೂಪಾಯಿ ಅನುದಾನ ನೀಡುತ್ತಿದೆ. ಇದು ಇವತ್ತಿನ

ದುಬಾರಿ ವ್ಯವಸ್ಥೆಗೆ ಸರಿಹೊಂದುವುದಿಲ್ಲ. ಆದ್ದರಿಂದ ವಿಶೇಷವಾಗಿ ಗಡಿಭಾಗದ ದ್ವಿಭಾಷಿಕ ಪರಿಸರವನ್ನು ಗಮನದಲ್ಲಿರಿಸಿಕೊಂಡು ಅನುದಾನ ಹೆಚ್ಚಿಸಬೇಕು. ಸಾಧ್ಯವಾದರೆ ಗಡಿಶಾಲೆಗಳ ಅಭಿವೃದ್ಧಿಗಾಗಿ ಜಿಲ್ಲಾ ಮಟ್ಟದಲ್ಲಿ ಒಂದು ಪ್ರತ್ಯೇಕ ಮಂಡಳಿ, ಸಮಿತಿಯನ್ನು ರಚಿಸಿ, ಕಾರ್ಯನಿರ್ವಹಿಸಲು ಸಜ್ಜಾಗಬೇಕಾಗಿದೆ. ಅಂದಾಗ ಮಾತ್ರ ಗಡಿಭಾಗದ ಶಾಲೆಗಳ ಅಭಿವೃದ್ಧಿಯಾಗುತ್ತದೆ.

**೫.೫.೧.೫. ರೈತರ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು :** ಇಲ್ಲಿನ ಗಡಿಭಾಗದ ಜನ ಇಂದಿಗೂ ಒಣಬೇಸಾಯ (ಮಳೆಯಾಶ್ರಿತ) ಪದ್ಧತಿಯನ್ನು, ಹಳೆಯ ಮಾದರಿಯಲ್ಲೇ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಇಲ್ಲಿನ ಕೃಷಿಭೂಮಿ ಕಪ್ಪು ಮಿಶ್ರಿತ ಮಣ್ಣನ್ನು ಹೊಂದಿದ್ದು, ತುಂಬಾ ಫಲವಂತಿಕೆಯಿಂದ ಕೂಡಿದೆ. ತೊಗರೆ, ಬಿಳಿಜೋಳ, ಕಡಲೆ, ಸೂರ್ಯಕಾಂತಿ, ಹೆಸರು, ಉದ್ದಿನ ಬೇಳೆಗಳನ್ನು ಲಾಭದಾಯಕ ವಾಗಿ ಇಲ್ಲಿ ಬೆಳೆಯಲಾಗುತ್ತದೆ. ಕೆಲವೆಡೆ ಕೊಳವೆಬಾವಿ ಮತ್ತು ಕೆರೆಗಳ ನೀರಿನಿಂದ ಭತ್ತ ಮತ್ತು ಶೇಂಗಾ ಬೆಳೆಯಲಾಗುತ್ತದೆ. ರೈತರು ಸಮೃದ್ಧವಾಗಿ ಈ ಬೆಳೆಗಳನ್ನು ಬೆಳೆದರೂ, ಅವರ ಆರ್ಥಿಕ ಸ್ಥಿತಿ ಮಾತ್ರ ಯಾವತ್ತು ಸುಧಾರಿಸಿಲ್ಲ. ಇದಕ್ಕೆ ಬೆಳೆದ ಬೆಳೆಗಳಿಗೆ ಸೂಕ್ತ ಬೆಂಬಲ ಬೆಲೆ ಸಿಗುತ್ತಿಲ್ಲ. ಅಲ್ಲದೆ ಕೃಷಿ ಮಾರುಕಟ್ಟೆಯ ಅಭಾವ, ದಲ್ಲಾಳಿಗಳ ಹಾವಳಿ, ಉಗ್ರಾಣಗಳ ಕೊರತೆ, ನೀರಾವರಿಯಲ್ಲಿನ ಹಿಂದುಳಿಯುವಿಕೆ, ರಸ್ತೆ ಸಂಪರ್ಕಗಳ ಕೊರತೆ, ಸಮಯಕ್ಕೆ ಸರಿಯಾಗಿ ದೊರೆಯದ ಹಣಕಾಸಿನ ನೆರವು ಈ ಎಲ್ಲ ಮತ್ತು ಇನ್ನಿತರ ಪೂರಕ ಅಂಶಗಳಿಂದ ಇಲ್ಲಿನ ರೈತರು ಸಂಕಷ್ಟಕ್ಕೆ ಸಿಲುಕಿದ್ದಾರೆ. ಇವೆಲ್ಲಕ್ಕೂ ಸರ್ಕಾರ ಮತ್ತು ಅದರ ದ್ವಂದ್ವ ನೀತಿಗಳೇ ಕಾರಣವಾಗಿವೆ. ರೈತರ ಕೃಷಿ ಚಟುವಟಿಕೆಗಳಿಗೆ ಬೇಕಾದ ಹಣಕಾಸಿನ ನೆರವನ್ನು ಶೀಘ್ರ ಮತ್ತು ಕಡಿಮೆ ಬಡ್ಡಿದರದಲ್ಲಿ ಮೊದಲು ನೀಡುವಂತಾಗಬೇಕು. ಇಲ್ಲದಿದ್ದರೆ ಅನಿವಾರ್ಯವೆಂಬಂತೆ ಹಳ್ಳಿಯ ಸಾಹುಕಾರರಿಂದ ಹೆಚ್ಚಿನ ಬಡ್ಡಿದರದಲ್ಲಿ ರೈತರು ಸಾಲ ಪಡೆದು ಸಾಲಗಾರರಾಗುತ್ತಾರೆ. ಇದನ್ನು ಮೊದಲು ನಿಲ್ಲಿಸಬೇಕು. ಬೆಳೆದ ಬೆಳೆಗಳನ್ನು ಸಂಗ್ರಹಿಸಿಡಲು, ಗಡಿಭಾಗದ ಹೋಬಳಿ ಮಟ್ಟದಲ್ಲಿ ಉಗ್ರಾಣಗಳನ್ನು ಕಟ್ಟಬೇಕು. ಇದ್ದಂತಹ ಹಳ್ಳ, ಕೊಳ್ಳ, ಕೆರೆಗಳನ್ನು ಅಭಿವೃದ್ಧಿಪಡಿಸಿ, ಕೃಷಿಗೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಬೇಕು. ರೈತರಿಗೆ ಹತ್ತಿರವಾಗುವಂತಹ ಕೃಷಿ ಮಾರುಕಟ್ಟೆಗಳನ್ನು ಸ್ಥಾಪಿಸಿ ದಲ್ಲಾಳಿಗಳ ಸಹಾಯವಿಲ್ಲದೆ ನೇರವಾಗಿ ರೈತರೇ ಬೆಳೆಗಳನ್ನು ಇಲ್ಲಿ ಮಾರಾಟ ಮಾಡುವಂತಾಗ ಬೇಕು. ಮತ್ತು ಎಲ್ಲ ಬೆಳೆಗಳಿಗೆ ಯೋಗ್ಯ ರೀತಿಯ ಬೆಂಬಲ ಬೆಲೆಗಳನ್ನು ನೀಡುತ್ತಾ ರೈತರಿಂದ ಸರ್ಕಾರ ನೇರವಾಗಿ ಬೆಳೆಗಳನ್ನು ಖರೀದಿಸಬೇಕು. ಹೀಗಾದಾಗ ಮಾತ್ರ ಗಡಿಭಾಗದ ರೈತರು ಅಕ್ಕಪಕ್ಕ ರಾಜ್ಯಗಳ ಕೃಷಿಮಾರುಕಟ್ಟೆಯತ್ತ ದೃಷ್ಟಿಹರಿಸುವುದನ್ನು ಬಿಟ್ಟುಬಿಡುತ್ತಾರೆ. ಇಲ್ಲದಿದ್ದರೆ ಇವರು ಹತ್ತಿರದ ಆಂಧ್ರದ ಮಾರುಕಟ್ಟೆಯನ್ನು ಅನಿವಾರ್ಯವಾಗಿ ಅವಲಂಬಿಸುವಂತಾಗುತ್ತದೆ.

**೫.೫.೨. ಆಡಳಿತಾತ್ಮಕ ಪರಿಹಾರೋಪಾಯಗಳು :**

ನಮ್ಮ ಹಿರಿಯರು ಭಾಷಾವಾರು ಪ್ರಾಂತ್ಯಗಳ ರಚನೆಗೆ ಪ್ರಾಮುಖ್ಯ ಕೊಟ್ಟಿದ್ದು ಎಲ್ಲ ಕನ್ನಡಿಗರು ಒಂದು ಭೌಗೋಳಿಕ ವಲಯದಲ್ಲಿ ಒಗ್ಗೂಡುವ ಮಹದಾಸೆಯಿಂದ. ಇದರಿಂದ ಕನ್ನಡಿಗರ ಸಂಸ್ಕೃತಿ, ಭಾಷೆ, ಸಾಹಿತ್ಯ ಕಲೆಗಳು ಉಳಿದು ಮುಂದಿನ ಪೀಳಿಗೆಗೆ ಮುಂದುವರೆಯುತ್ತವೆಂದು, ಆದರೆ ಇವರ ಕನಸು ಈಡೇರಿದ್ದು ಭಾಷಾವಾರು ಪ್ರಾಂತ್ಯಗಳ ರಚನೆಯಿಂದ. ಇದು ಕೇವಲ ಕರ್ನಾಟಕಕ್ಕೆ ಮಾತ್ರ

ಸೀಮಿತವಾಗದೆ ಇತರ ರಾಜ್ಯಗಳು ಈ ಪ್ರಕ್ರಿಯೆಯಲ್ಲಿ ಮುಂದಾಗಿದ್ದವು. ಬಂಗಾಳ, ಪಂಜಾಬ, ಓರಿಸ್ಸಾ, ಅಸ್ಸಾಂ, ಬಿಹಾರ, ಮಹಾರಾಷ್ಟ್ರ, ಆಂಧ್ರ ರಾಜ್ಯಗಳು ತಮ್ಮ ಮಾತೃಭಾಷೆಯ ಆಧಾರದ ಮೇಲೆ ಹೊಸನಾಡಿನ ಚಿತ್ರಣವನ್ನು ರೂಪಿಸಿಕೊಂಡವು. ಕರ್ನಾಟಕಕ್ಕೆ ಸಂಬಂಧಿಸಿದಂತೆ ಈ ಭಾಷಾವಾರು ಕಲ್ಪನೆ ಇಂದು ನಿನ್ನೆಯದಲ್ಲ. ಬಳ್ಳಾರಿಯ ವಿಭಾಗಾಧಿಕಾರಿ ಬ್ರಿಟಿಷ್ ಆಡಳಿತಾಧಿಕಾರಿಯಾಗಿದ್ದ ಸರ್ ಥಾಮಸ್ ಮನ್ರೋ, ಮೈಸೂರು ರಾಜ್ಯದ ರೆಸಿಡೆಂಟ್ ಮಾರ್ಕವಿಟ್ನಿ ಹಾಗೂ ಭಾಷಾತಜ್ಞರಾಗಿದ್ದ ಜಾರ್ಜ್ ಗ್ರಿಮರ್‌ಸನ್ ಇವರೆಲ್ಲರೂ ಭಾಷಾವಾರು ರಚನೆಯಿಂದ ಆಡಳಿತ ಸುಗಮಗೊಂಡು ಜನರು ನೆಮ್ಮದಿಯಿಂದಿರಲು ಸಾಧ್ಯವಾಗುತ್ತದೆಂದು ಆಗಲೇ ಪ್ರತಿಪಾದಿಸಿದ್ದರು. ಮಹಾತ್ಮಗಾಂಧಿಯವರೂ ಕೂಡ ಸ್ವಾತಂತ್ರ್ಯ ಪೂರ್ವದಲ್ಲಿಯೇ "ಕರ್ನಾಟಕವನ್ನು ಪ್ರತ್ಯೇಕ ಪ್ರಾಂತ್ಯವನ್ನಾಗಿಸುವುದು ಅವಶ್ಯ, ಅದನ್ನು ನಾನು ಸ್ವಾಗತಿಸುತ್ತೇನೆ. ಪ್ರಾಂತೀಯ ಭಾಷೆಗಳು ಸಂಪೂರ್ಣವಾಗಿ ಅಭಿವೃದ್ಧಿ ಹೊಂದಬೇಕಾದರೆ ಭಾಷೆಯ ಆಧಾರದ ಮೇಲೆ ಪ್ರಾಂತ್ಯಗಳನ್ನು ಪುನರ್ ವಿಂಗಡನೆ ಮಾಡಬೇಕಾಗಿದೆ" ಎಂದು ಅಭಿಪ್ರಾಯ ಪಟ್ಟಿದ್ದರು. ಒಂದೇ ಭಾಷೆಯನ್ನಾಡುವ ಜನ, ಒಂದೇ ಆಡಳಿತಕ್ಕೆ ಒಳಪಟ್ಟರೆ ಆ ಪ್ರದೇಶ ಸರ್ವತೋಮುಖ ಪ್ರಗತಿ ಸಾಧಿಸಲು ಸಾಧ್ಯವಾಗುತ್ತದೆ ಎಂಬುದು ಆಡಳಿತಾತ್ಮಕದ ಮುಖ್ಯ ಉದ್ದೇಶವಾಗಿತ್ತು. ಆದರೆ ಕನ್ನಡಿಗರನ್ನೆಲ್ಲ ಒಗ್ಗೂಡಿಸುವ ಭರದಲ್ಲಿ ನಾವು ಎಡವಿದ್ದಂತೂ ನಿಜ. ಕನ್ನಡ ನಾಡಿನ ಭೌಗೋಳಿಕ ಮೇರೆಗಳನ್ನು ರೂಪಿಸುವಾಗ ಎಲ್ಲ ಕನ್ನಡಿಗರನ್ನು ಗಣನೆಗೆ ತೆಗೆದುಕೊಂಡಿದ್ದರೆ ಇವತ್ತು ನಮ್ಮ ಸಹೋದರರು ಕನ್ನಡ ನಾಡಿನಿಂದ ಹೊರಗುಳಿಯುತ್ತಿರಲಿಲ್ಲ. ಇವತ್ತು ಇವರನ್ನು ನಾವು ನಮ್ಮ ಗಡಿಯಿಂದ ಹೊರಗಿಟ್ಟಿರುವುದಂತೂ ನಿಜ. ಅವರು ಕನ್ನಡಿಗರಾಗಿದ್ದು ಕನ್ನಡದವರಲ್ಲ. ಅವರ ಬಗ್ಗೆ ನಾವು ಕಿಂಚಿತ್ತು ಯೋಚಿಸುತ್ತಿಲ್ಲ. ಆದರೆ ಇಂತಹ ಪರಿಸ್ಥಿತಿಯಲ್ಲಿ ಗಡಿಯಿಂದ ಹೊರಗುಳಿದ ಕನ್ನಡಿಗರು ಭೌತಿಕವಾಗಿ ಬೇರೆ ಬೇರೆ ಕಡೆ ಇದ್ದರೂ ಮಾನಸಿಕವಾಗಿ ಇವತ್ತಿಗೂ ಕನ್ನಡ ನಾಡಿನ, ಕನ್ನಡ ಸಂಸ್ಕೃತಿಯೊಂದಿಗೆ ಗುರುತಿಸಿಕೊಳ್ಳುತ್ತಾರೆ.

**೫.೫.೨.೧. ಕರ್ನಾಟಕ ಆಂಧ್ರ ಗಡಿಭಾಗದಲ್ಲಿ ಜಾರಿಯಾಗದ ಆಡಳಿತ ಕನ್ನಡ :** ಆಡಳಿತದ ದೃಷ್ಟಿಯಿಂದ ಕರ್ನಾಟಕವನ್ನು ಒಗ್ಗೂಡಿಸಿ ಆಡಳಿತ ಸುಗಮವಾಗಿ ಮತ್ತು ಯಶಸ್ಸಿನತ್ತ ನಡೆಸಲು ನಾವು ಹಲವಾರು ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದೆವು. ಈ ನಾಡಿನ ಭಾಷೆ ಕನ್ನಡ. ಆದ್ದರಿಂದ ಆಡಳಿತದ ಭಾಷೆ ಕನ್ನಡದಲ್ಲಿಯೇ ನಡೆಯಬೇಕೆಂದು ಕ್ರಿ.ಶ. ೧೯೬೩ರಲ್ಲಿ ರಾಜ್ಯದ ಆಡಳಿತ ಭಾಷೆ ಕನ್ನಡವೆಂಬ ಶಾಸನ ಅನುಷ್ಠಾನಕ್ಕೆ ತರಲಾಯಿತು. ಶಾಸನ ರೂಪ ಪಡೆದ ನಂತರ ಇದು ಕ್ರಿ.ಶ. ೧೯೬೮ರಿಂದ ತಾಲ್ಲೂಕು ಮಟ್ಟದ ಎಲ್ಲ ಕಚೇರಿಗಳಲ್ಲಿ ಕನ್ನಡ ಅನುಷ್ಠಾನಕ್ಕೆ ಬರಬೇಕೆಂದು ರಾಜ್ಯಸರ್ಕಾರ ಆದೇಶ ಹೊರಡಿಸಿತು. ಕ್ರಿ.ಶ. ೧೯೭೦ರಲ್ಲಿ ಕನ್ನಡ ಆಡಳಿತ ಭಾಷಾ ಸಮಿತಿಯನ್ನು ರಚಿಸಿ, ಅದರ ಸಲಹೆಗಳನ್ನು ಜಾರಿಗೆ ತರಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿತು. ಇದು ಕ್ರಿ.ಶ. ೧೯೭೨ರಲ್ಲಿ ಜಿಲ್ಲಾಮಟ್ಟದ ಕಚೇರಿಗಳಲ್ಲಿ ಮತ್ತು ಕ್ರಿ.ಶ. ೧೯೭೪ರಿಂದ ಸಚಿವಾಲಯವೂ ಸೇರಿದಂತೆ ಎಲ್ಲ ಹಂತಗಳಲ್ಲಿ ಕನ್ನಡವನ್ನು ಜಾರಿಗೊಳಿಸಬೇಕೆಂದು ಆದೇಶ ಹೊರಡಿಸಿತು. ಆದೇಶವನ್ನು ಜಾರಿಗೆ ತರಲು ಸರಕಾರ 'ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ' ಎಂಬ ಪ್ರತ್ಯೇಕ ಇಲಾಖೆಯನ್ನು ಹುಟ್ಟು ಹಾಕಿತು. ಆಡಳಿತ ಭಾಷೆಯಾಗಿ ಜಾರಿಗೆ ತಂದ ನಂತರ ಅದು ಯಶಸ್ವಿಯಾಗದಿದ್ದುದಕ್ಕೆ, ಆಡಳಿತದಲ್ಲಿನ ನ್ಯೂನತೆಗಳಿಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಕ್ರಿ.ಶ. ೧೯೮೩ರಲ್ಲಿ 'ಕನ್ನಡ ಕಾವಲು ಸಮಿತಿ'ಯನ್ನು ಸರಕಾರ ರಚಿಸಿತು.

ಆಡಳಿತದಲ್ಲಿ ಕನ್ನಡವನ್ನು ಜಾರಿಗೆ ತರುವುದಕ್ಕಾಗಿ ಸರಕಾರಿ ಅಧಿಕಾರಿಗಳಿಗೆ, ನೌಕರರಿಗೆ, ನ್ಯಾಯಾಂಗ ಇಲಾಖೆ ಅಧಿಕಾರಿಗಳಿಗೆ, ನ್ಯಾಯಾಧೀಶರಿಗೆ ಪ್ರಾಸಿಕ್ಯೂಟರುಗಳಿಗೆ, ಕಾರ್ಖಾನೆ, ಮಂಡಳಿ, ಕಾರ್ಪೋರೇಷನುಗಳ ಸಿಬ್ಬಂದಿಗಳಿಗೆ ಆಡಳಿತ ಕನ್ನಡದಲ್ಲಿ ತರಬೇತಿ ನೀಡುವುದು. ಈವರೆಗೂ ಇದ್ದ ಇಂಗ್ಲೀಷ್ ಪದಗಳಿಗೆ ಸಮಾನವಾದ ಕನ್ನಡ ಪದಗಳನ್ನು ಬಳಸುವುದು. ಆಡಳಿತ ಶಬ್ದಕೋಶ, ಕಾನೂನು ಪದಕೋಶ, ಇಲಾಖಾವಾರು ಕೈಪಿಡಿಗಳು, ಇಲಾಖಾವಾರು ಪಾರಿಭಾಷಿಕ ಪದಕೋಶಗಳನ್ನು ರಚಿಸಿ, ಕರ್ನಾಟಕ ಸರ್ಕಾರಿ ನಿಯಮಾವಳಿ, ಕರ್ನಾಟಕ ಹಣಕಾಸು ಸಂಹಿತೆ, ಖಜಾನೆ ಸಂಹಿತೆ, ಭಾರತ ದಂಡಸಂಹಿತೆ, ಭಾರತ ದಂಡಪ್ರಕ್ರಿಯೆ ಸಂಹಿತೆ, ಭಾರತ ಸಿವಿಲ್ ಸಂಹಿತೆ ಮುಂತಾದ ಬಹುಸಂಖ್ಯಾತ ಕಾನೂನು ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಮುದ್ರಿಸಲಾಯಿತು. ಇಷ್ಟು ಮಾಡಿದರೂ ಇವತ್ತಿಗೂ ಆಡಳಿತದಲ್ಲಿ ಸಂಪೂರ್ಣವಾಗಿ ಕನ್ನಡವನ್ನು ನಾವು ನೋಡುತ್ತಿಲ್ಲ. ಇದಕ್ಕೆ ಕಾರಣರಾರು? ಇದಕ್ಕೆ ರಾಜಕೀಯ ಇಚ್ಛಾಶಕ್ತಿ ಇಲ್ಲದಿರುವುದು ಮತ್ತು ಅಧಿಕಾರಿಶಾಹಿಯ ನಿರ್ಲಕ್ಷ್ಯ ಧೋರಣೆಗಳೇ ಪ್ರಮುಖವಾದ ಕಾರಣಗಳಾಗಿವೆ.

ಸರಕಾರ ಜಾರಿಗೆ ತಂದತಹ 'ಆಡಳಿತದಲ್ಲಿ ಕನ್ನಡ'ದ ಅನುಷ್ಠಾನಕ್ಕೆ ಕೆಲವು ತಾಂತ್ರಿಕ ತೊಂದರೆಗಳು ಕಂಡುಬರುತ್ತವೆ. ಉದಾಹರಣೆಗೆ ಕೆಲವು ಇಂಗ್ಲೀಷ್ ಪದಗಳಿಗೆ ಸಂದರ್ಭಕ್ಕನುಸಾರವಾಗಿ ಕನ್ನಡ ಪದಗಳು ತಕ್ಷಣ ಹೊಳೆಯದಿದ್ದರೆ ಬಳಕೆಯಲ್ಲಿರುವ ಇಂಗ್ಲೀಷ್ ಪದಗಳನ್ನು ಬಳಸುವುದು ಉಚಿತವೇ ಅಥವಾ ಇಲ್ಲವೇ ಎಂಬುದು. ಇಂತಹ ಸಂದರ್ಭಗಳಲ್ಲಿ ಕನ್ನಡಕ್ಕೆ ಪರ್ಯಾಯವಾಗಿ ಬೇರೆ ಭಾಷೆಯ ಪದಗಳು ಬಳಸುವುದು ತಪ್ಪಾಗಿ ಕಾಣುವುದಿಲ್ಲ. ಆದರೆ ಈ ಅವಕಾಶವಿರುವುದೆಂದು ಪುನಃ ಪುನಃ ಕನ್ನಡಕ್ಕೆ ಪರ್ಯಾಯವಾಗಿ ಬೇರೆ ಭಾಷೆಯ ಪದಗಳನ್ನು ರಚಿಸುವುದು ಉಚಿತವಾಗುವುದಿಲ್ಲ. ಈ ಎಲ್ಲ ಕಾರಣಗಳಿಂದ ಹೊರತಾಗಿಯೂ ಸರ್ಕಾರ ಆಡಳಿತದಲ್ಲಿ ಕನ್ನಡವನ್ನು ಸಮರ್ಪಕವಾಗಿ ಜಾರಿಗೆ ತರಲು ಕ್ರಿ.ಶ. ೧೯೬೩ರಲ್ಲಿ ಕರ್ನಾಟಕ ಸರಕಾರದ ಆಡಳಿತ ಭಾಷೆ ಕನ್ನಡ ಎಂಬ ಶಾಸನವನ್ನು ತಂದಿತು. ತದನಂತರ, ಕ್ರಿ.ಶ. ೧೯೬೮ರಿಂದ ತಾಲ್ಲೂಕು ಮಟ್ಟದ ಎಲ್ಲ ಕಚೇರಿಗಳಲ್ಲಿ ಕನ್ನಡ ಅನುಷ್ಠಾನಕ್ಕೆ ಬರಬೇಕೆಂದು ರಾಜ್ಯಸರ್ಕಾರ ಆದೇಶ ಹೊರಡಿಸಿತು. ಕ್ರಿ.ಶ. ೧೯೭೦ರಲ್ಲಿ ಕನ್ನಡ ಆಡಳಿತ ಭಾಷಾ ಸಮಿತಿಯನ್ನು ರಚಿಸಿ, ಅದರ ಸಲಹೆಗಳನ್ನು ಕಾರ್ಯಗತ ಮಾಡಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿತು. ಕ್ರಿ.ಶ. ೧೯೭೨ರಿಂದ ಜಿಲ್ಲಾಮಟ್ಟದ ಕಚೇರಿಗಳಲ್ಲಿ, ಕ್ರಿ.ಶ. ೧೯೭೮ರಿಂದ ಸಚಿವಾಲಯವೂ ಸೇರಿದಂತೆ ಆಡಳಿತದ ಎಲ್ಲ ಹಂತಗಳಲ್ಲಿ ಕನ್ನಡವನ್ನು ಜಾರಿಗೊಳಿಸಬೇಕೆಂಬ ಆದೇಶವನ್ನು ಹೊರಡಿಸಿತು. ಸರಕಾರದ ಈ ಆದೇಶಗಳನ್ನು ಅನುಷ್ಠಾನಕ್ಕೆ ತರಲು 'ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ'ವನ್ನು ಸ್ಥಾಪಿಸಿತು. ಕ್ರಿ.ಶ. ೧೯೮೩ರಲ್ಲಿ 'ಕನ್ನಡ ಕಾವಲು ಸಮಿತಿ'ಯನ್ನು ರಚಿಸಿ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವಲ್ಲಿ ಉಂಟಾಗುವ ಅಡೆತಡೆ, ನ್ಯೂನತೆಗಳನ್ನು ಈ ಸಮಿತಿ ಹುಡುಕಿ ಪರಿಹಾರ ಸೂಚಿಸುತ್ತಿತ್ತು. ಕ್ರಿ.ಶ. ೧೯೮೩ರಲ್ಲಿ 'ಕನ್ನಡ ಆಡಳಿತ ಭಾಷಾ ಕಾವಲು ಸಮಿತಿ' ಮತ್ತು ಕ್ರಿ.ಶ. ೧೯೮೭ರಲ್ಲಿ ಕನ್ನಡ ಕಾವಲು ಮತ್ತು ಗಡಿ ಸಲಹಾ ಸಮಿತಿ'ಯನ್ನು, ಕ್ರಿ.ಶ. ೧೯೯೦ರಲ್ಲಿ ಕನ್ನಡ ಅಭಿವೃದ್ಧಿ ಮಂಡಳಿಯನ್ನು, ಕ್ರಿ.ಶ. ೧೯೯೫ರಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರಗಳನ್ನು ರಚಿಸಿ ಒಟ್ಟಾರೆಯಾಗಿ ಆಡಳಿತದಲ್ಲಿ ಕನ್ನಡವನ್ನು ಜಾರಿಗೆ ತರಲು ಸರ್ಕಾರ ಶ್ರಮಿಸಿತು.



ವರದಿ : ವಿಜಯ ಕರ್ನಾಟಕ, ೦೪.೧೧.೨೦೦೪, ಪು. ೪

ಶ್ರೀ ಅಣವೀರಪ್ಪಾ ಸಿದ್ದಪ್ಪ ಮುಗಳಿ ಎಂಬುವರಿಂದ ೩೫ ರೂಪಾಯಿಗಳನ್ನು ಸಂದಾಯಿಸಿಕೊಂಡು ಕ್ರಿ.ಶ. ೨೦೦೫ರಲ್ಲಿ ಭೂದಾಖಲೆಗಳ ಸಹಾಯಕ ನಿರ್ದೇಶಕರು ಸೇಡಂ, ಉಪವಿಭಾಗ ಸೇಡಂ ಇವರು ಎಲೇರಾಜೋಳ ಗ್ರಾಮದ ನಕ್ಷೆಯನ್ನು ನೀಡಿದ್ದರು. ಇದು ನಿಜಾಂ ಅರಸರ ಕಾಲದ ಉರ್ದು ಭಾಷೆಯಲ್ಲಿ ರಚನೆಗೊಂಡ ನಕ್ಷೆಯಾಗಿದ್ದು, ಇಂದಿಗೂ ಇದನ್ನೇ ಕರ್ನಾಟಕ ಸರಕಾರದ ಇಲಾಖೆಗಳು ಜಾರಿಯಲ್ಲಿರಿಸಿ ಕೊಂಡಿದೆ. ಇದನ್ನು ನೋಡಿದರೆ ಇವರು ಇಂದಿಗೂ ಹೈದರಾಬಾದ್ ನಿಜಾಂನ ಆಡಳಿತದಲ್ಲಿರುವಂತೆ ಕಂಡುಬರುತ್ತಿದೆ. ಇಂದಾದರೂ ಇಂತಹ ಈ ಉರ್ದು ಭಾಷೆಯ ಆಡಳಿತವನ್ನು ಬದಲಾಯಿಸಿ ಇಲ್ಲೆಲ್ಲ ಆಡಳಿತದಲ್ಲಿ ಕನ್ನಡವನ್ನು ಜಾರಿಗೊಳಿಸಬೇಕು.

ಇಷ್ಟೆಲ್ಲಾ ಸಮಿತಿ, ಇಲಾಖೆಗಳನ್ನು ರಚಿಸಿ ಕನ್ನಡವನ್ನು ಆಡಳಿತ ಭಾಷೆಯಾಗಿ ಕಂಡುಕೊಳ್ಳುವಲ್ಲಿ ನಾವು ಇವತ್ತಿಗೂ ವಿಫಲರಾಗಿದ್ದೇವೆ. ಇದಕ್ಕೆ ಸರಕಾರದಷ್ಟೇ ನಾವು ಜವಾಬ್ದಾರರಾಗಿದ್ದೇವೆ. ಕೇವಲ ಸರ್ಕಾರಿ ಕಚೇರಿಗಳ ಬೋರ್ಡು, ವಾಹನಗಳ ನೋಂದಣಿ ಸಂಖ್ಯೆಗಳಲ್ಲಿ ಕನ್ನಡವನ್ನು ಜಾರಿಗೆ ತರಲು ಶ್ರಮಿಸುವುದರಲ್ಲಿ ಅರ್ಥವಿಲ್ಲ. ಕನ್ನಡಕ್ಕಾಗಿ ದುಡಿಯುತ್ತಿರುವ ಅನೇಕ ಸಂಘ-ಸಂಸ್ಥೆ, ವೇದಿಕೆ ಮುಂತಾದವು ಗಳು ಈ ಹೋರಾಟದಲ್ಲಿ ಏಕೆ ಎಡವುತ್ತಿವೆ? ಹುಟ್ಟಿಕೊಂಡ ಸಂಘ-ಸಂಸ್ಥೆ, ವೇದಿಕೆ, ಸಮಿತಿಗಳು ಸ್ವಲ್ಪ ದಿನಗಳಲ್ಲೇ ಒಡೆದು ಹೋಗುತ್ತಿರುವುದೇಕೆ? ಅವುಗಳಲ್ಲಿನ ಯಾವ ಕಾರಣಗಳು ಈ ಒಗ್ಗಟ್ಟನ್ನು ಮುರಿಯುತ್ತಿವೆ. ಇವುಗಳ ಹೋರಾಟಗಳಿಗೆ ನಾವು ಒಟ್ಟಾಗಿ ಏಕೆ ಬೆಂಬಲ ವ್ಯಕ್ತಪಡಿಸುತ್ತಿಲ್ಲ ಎನ್ನುವ ಪ್ರಶ್ನೆಗಳ ಉತ್ತರಗಳಲ್ಲಿ ಕನ್ನಡದ ಸ್ಥಿತಿಗತಿಯನ್ನು ನೋಡಬಹುದು.

೫.೫.೨.೨. ಕನ್ನಡ ಪರ ಸಂಘಟನೆಗಳಲ್ಲಿ ಕಂಡುಬರುವ ಸಮಗ್ರ ಕರ್ನಾಟಕದ ಇಚ್ಛಾಶಕ್ತಿ ಕೊರತೆ: ಮೈಸೂರು ಕರ್ನಾಟಕ, ಕೊಡಗು ಪ್ರಾಂತ್ಯ, ಮುಂಬಯಿ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಉತ್ತರ ಕರ್ನಾಟಕ ಎಂಬ ಭಾಗಗಳಾಗಿ ಕರ್ನಾಟಕ ಇವತ್ತು ಹರಿದು ಹಂಚಿಹೋಗುತ್ತಿದೆ. ಈ ಎಲ್ಲ ಕಡೆ ಕನ್ನಡದ ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ಕನ್ನಡಕ್ಕಾಗಿ, ಕನ್ನಡ ನಾಡಿಗಾಗಿ, ಕನ್ನಡಿಗರಿಗಾಗಿ ಹೋರಾಟಗಳನ್ನು ಮಾಡುತ್ತಿದ್ದೇವೆ. ಆದರೆ ಒಂದು ಪ್ರದೇಶದವರಿಗೆ ಅವರ ಸಮಸ್ಯೆಗಳು ಮುಖ್ಯವಾಗುತ್ತಿವೆಯೇ ಹೊರತು ಸಮಗ್ರ ಕರ್ನಾಟಕದ, ಸಮಗ್ರ ಕನ್ನಡಿಗರ, ಸಮಸ್ಯೆಗಳು ಮುಖ್ಯವಾಗುತ್ತಿಲ್ಲ. ಮೈಸೂರು ಪ್ರದೇಶದ ಕನ್ನಡ ಸಂಘ-ಸಂಸ್ಥೆ, ಸಮಿತಿ, ವೇದಿಕೆಗಳಿಗೆ ಕಾವೇರಿ ನದಿ ಸಮಸ್ಯೆ ಮುಖ್ಯವಾಗುತ್ತದೆಯೆ ಹೊರತು, ಉತ್ತರ ಕರ್ನಾಟಕದಲ್ಲಿನ ಕೃಷ್ಣಾ, ಭೀಮಾ ನದಿಗಳ ಸಮಸ್ಯೆ ಮುಖ್ಯವಾಗುತ್ತಿಲ್ಲ. ಇಂತಹ ಈ ಹೋರಾಟಗಳನ್ನು ನಾವು ಮಾಡುತ್ತಿದ್ದೇವೆ. ಇವುಗಳನ್ನು ಪಟ್ಟಿ ಮಾಡಿ ಹೇಳುವುದಾದರೆ, ಬೆಂಗಳೂರನ್ನು ಮುಖ್ಯವಾಗಿರಿಸಿಕೊಂಡು ಅಲ್ಲಿನ ಕನ್ನಡ ಪರ ಸಂಘಟನೆಗಳು ಕಾವೇರಿ ನದಿ ನೀರಿನ ಹಂಚಿಕೆಯ ಹೋರಾಟ, ಅನ್ಯಭಾಷಿಕರ ವಲಸೆಯ ವಿರುದ್ಧ ಹೋರಾಟ, ಅನ್ಯಭಾಷಿಕ ಚಿತ್ರ ಬಿಡುಗಡೆ ತಡೆಯ ಹೋರಾಟ, ಉದ್ಯೋಗದಲ್ಲಿ ಕನ್ನಡಿಗರಿಗೆ ಪ್ರಾತಿನಿಧ್ಯದ ಹೋರಾಟಗಳನ್ನು ಮುಖ್ಯವಾಗಿಸಿಕೊಂಡಿವೆ. ಈ ಕಾರಣಗಳನ್ನು ಮುಂದಿಟ್ಟುಕೊಂಡು ಹೋರಾಡುತ್ತಿರುವುದನ್ನು ನಾವು ಪ್ರಶಂಸಿಸಬೇಕು. ಆದರೆ, ಇನ್ನುಳಿದ ಬೇರೆ ಪ್ರದೇಶಗಳಲ್ಲಿನ ಹೋರಾಟಗಳಿಗೆ ಈ ಸಂಘಟನೆಗಳು ಬೆಂಬಲ ವ್ಯಕ್ತಪಡಿಸಿದರೂ ಸಕ್ರಿಯವಾಗಿ ಭಾಗವಹಿಸುತ್ತಿಲ್ಲ. ಈ ಸಂಘಟನೆಗಳಿಗೆ ಕರ್ನಾಟಕ, ಸಮಗ್ರ ಕನ್ನಡ ಎಂಬ ತತ್ವ ಸಿದ್ಧಾಂತಗಳೇ ಇಲ್ಲವೆಂಬಂತಿವೆ.

ಸಮಗ್ರ ಕರ್ನಾಟಕ ಎಂಬುವುದರಲ್ಲಿ ಸಂಘ ಸಂಸ್ಥೆಗಳು ನಿಶ್ಕ್ರೀಯವಾಗಿರುವುದಕ್ಕೆ ಈ ಕೆಳಗಿನ ಅಂಶವು ಉದಾಹರಣೆಯಾಗಿದೆ.

(1) **ಗಡಿಯಲ್ಲಿ ಪೊಲೀಸ್ ಬಿಗಿ ಬಂದೋಬಸ್ತ್**

ಗುಲ್ಬರ್ಗ, ಆ. 15– ನಾರಾಯಣ ಪೇಟದಲ್ಲಿ ಮಕ್ತಲ್ ಶಾಸಕ ನರಸಿರೆಡ್ಡಿ ಸೇರಿದಂತೆ ಒಂಬತ್ತು ಪ್ರಮುಖರ ಕೊಲೆ ಹಿನ್ನೆಲೆಯಲ್ಲಿ ಗುಲ್ಬರ್ಗ ಜಿಲ್ಲಾ ಗಡಿ ಪ್ರದೇಶಗಳಲ್ಲಿ ಭಾರಿ ಪೊಲೀಸ್ ಬಂದೋಬಸ್ತ್ ಮಾಡಲಾಗಿದೆ.

ಸೋಮವಾರ ಹಲವು ಆಡಿಗಳಲ್ಲಿ ಸಮಾರಂಭ ಮುಗಿಸಿಕೊಂಡು ಹೊರಟಿದ್ದ ಶಾಸಕರು ಸೇರಿದಂತೆ 9 ಜನ ಪ್ರಮುಖರ ಮೇಲೆ ಹಾಡು ಹಗಲೇ ಜನರ ಮಧ್ಯೆಯೇ ಗುಂಡಿನ ದಾಳಿ ನಡೆಸಿದ ನಕ್ಸಲೀಯರ ಗುಂಪು ನಂತರ ಕೈಬಾಂಬ್ ಎಸೆದು ಪರಾರಿಯಾಯಿತು. ಈ ದುರ್ಘಟನೆಯಲ್ಲಿ ಎಲ್ಲರೂ ಸಾವನ್ನಪ್ಪಿದ್ದಾರೆ.

ಗುಲ್ಬರ್ಗ ಜಿಲ್ಲೆಗೆ ಹೊಂದಿಕೊಂಡಿರುವ ಆಂಧ್ರದ ಗಡಿಯಲ್ಲಿ ಬರುವ ನಾರಾಯಣಪೇಟದಲ್ಲಿ ಈ ದುರ್ಘಟನೆ ಸಂಭವಿಸಿದ್ದರ ಹಿನ್ನೆಲೆಯಲ್ಲಿ ಮುಂಜಾಗ್ರತಾ ಕ್ರಮವಾಗಿ ಎಲ್ಲ ಗಡಿ ಪ್ರದೇಶಗಳಲ್ಲಿ ಸಾಕಷ್ಟು ಪೊಲೀಸ ಬಂದೋಬಸ್ತ್ ಮಾಡಲಾಗಿದೆ ಎಂದು ಎಸ್.ಪಿ. ಡಾ. ರಾಮಚಂದ್ರರಾವ್ ತಿಳಿಸಿದರು.

▶ 9ನೇ ಪುಟ

(2) **ಬಿಗಿ ಬಂದೋಬಸ್ತ್**

ಮೊದಲ ಪುಟದಿಂದ

ಯಾದಗಿರಿ ಮತ್ತು ಸುರಪುರ ತಾಲೂಕು ಪೊಲೀಸ ಅಧಿಕಾರಿಗಳಿಗೆ ಜಾಗ್ರತರಾಗಿರುವಂತೆ ಸೂಚನೆ ನೀಡಲಾಗಿದೆ. ಗುಲ್ಬರ್ಗದಿಂದ ಕರ್ನಾಟಕ ರಾಜ್ಯ ಸಶಸ್ತ್ರ ಮೀಸಲು ಪಡೆಯ ತುಕಡಿಗಳನ್ನು ಗಡಿ ಪ್ರದೇಶಗಳಿಗೆ ರವಾನಿಸಲಾಗಿದೆ.

ಗಡಿ ಪ್ರದೇಶದಿಂದ ಕರ್ನಾಟಕಕ್ಕೆ ಬರುವ ಎಲ್ಲ ವಾಹನಗಳನ್ನು ಕಟ್ಟುನಿಟ್ಟಾಗಿ ತಪಾಸಿಸಿ ಒಳಗೆ ಬಿಡಬೇಕು ಎಂದು ಎಸ್.ಪಿ. ಅವರು ಸಿಬ್ಬಂದಿಗೆ ಕಟ್ಟುನಿಟ್ಟಿನ ಎಚ್ಚರಿಕೆ ನೀಡಿದ್ದಾರೆ. ಅವಶ್ಯ ಬಿದ್ದಲ್ಲಿ ಮತ್ತಷ್ಟು ಪೊಲೀಸ ಬಲವನ್ನು ಗಡಿ ಪ್ರದೇಶಗಳಲ್ಲಿ ಮತ್ತು ಗಡಿಗೆ ಹೊಂದಿಕೊಂಡಿರುವ ಅರಣ್ಯ ಪ್ರದೇಶಕ್ಕೆ ರವಾನಿಸಲು ಸಿದ್ಧವಿರುವುದಾಗಿ ಅವರು ಹೇಳಿದರು.

ಗಡಿ ಪ್ರದೇಶದಲ್ಲಿಯೂ ಸಹ ಬಿಗುವಿನ ವಾತಾವರಣ ಉಂಟಾಗಿದ್ದರಿಂದ ಪೊಲೀಸ ಕಾವಲನ್ನು ಹಾಕಲಾಗಿದೆ. ನಾರಾಯಣಪೇಟ ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳಿಗೆ ಸಮೀಪ ಇರುವುದರಿಂದ ಹಿಂಸಕೃತ್ಯ ಎಸಗಿದವರು ಕರ್ನಾಟಕದೊಳಗೆ ನುಸುಳಿದರೆ ಹೇಗೆ ಎಂಬ ಪ್ರಶ್ನೆಯೂ ಇರುವುದರಿಂದ ಪೊಲೀಸ ಕಾವಲು ಬಲವಾಗಿದೆ.

ವರದಿ : ಸಂಯುಕ್ತ ಕರ್ನಾಟಕ, ೧೨.೦೮.೨೦೦೪, ಪು. ೬

ಬೆಂಗಳೂರಿನಲ್ಲಿ ಅನ್ಯಭಾಷೆಯ ಚಲನಚಿತ್ರಗಳನ್ನು ಪ್ರದರ್ಶಿಸುವುದರ ವಿರುದ್ಧ ದೊಡ್ಡ ಮಟ್ಟದಲ್ಲಿ ಬೀದಿಗಿಳಿದು ಹೋರಾಟ ಮಾಡಲಾಗುತ್ತದೆ. ಪರರಾಜ್ಯಗಳಲ್ಲಿ ಕನ್ನಡ ಚಿತ್ರಗಳು ಪ್ರದರ್ಶಿಸಲ್ಪಡುತ್ತಿದ್ದರೆ ನಮ್ಮಲ್ಲಿ ಪರಭಾಷೆಯ ಚಿತ್ರಗಳನ್ನು ಪ್ರದರ್ಶಿಸುವುದರಲ್ಲಿ ತಪ್ಪಿಲವೆಂದೆನಿಸುತ್ತದೆ. ಇತ್ತೀಚೆಗೆ ಆಂಧ್ರದ ರಾಜಧಾನಿ ಹೈದರಾಬಾದಿನಲ್ಲಿ ೫೦ ದಿನಗಳವರೆಗೆ ಕನ್ನಡ ಚಿತ್ರವೊಂದು ಪ್ರದರ್ಶನ ಕಂಡಿತು. ಇದನ್ನು ತೆಲುಗು ಚಿತ್ರ ವಿತರಕರೊಬ್ಬರು ಕನ್ನಡ ಚಿತ್ರ ಪ್ರದರ್ಶನಗೊಳಿಸುವುದರಲ್ಲಿ ಶ್ರಮವಹಿಸಿದ್ದರು. ನಮ್ಮ ಕನ್ನಡದ ಚಿತ್ರಗಳು ಪರರಾಜ್ಯಗಳಲ್ಲಿ ಬಿಡುಗಡೆಗೊಂಡಂತೆ, ಪರಭಾಷಾ ಚಿತ್ರಗಳು ನಮ್ಮಲ್ಲಿ ಬಿಡುಗಡೆ ಗೊಂಡರೆ ಮಾತ್ರ ನಾವು ಹುರಿದು ಬಿದ್ದು, ನಮ್ಮ ಭಾಷೆ, ನಮ್ಮ ಸಂಸ್ಕೃತಿಗಳ ಮೇಲೆ ಅವು ಕೆಟ್ಟ ಪ್ರಭಾವ ಬೀರುತ್ತವೆ ಎಂದರೆ ಅದು ಅರ್ಥವಿಲ್ಲದ ಮಾತು.

ಈ ಅಧ್ಯಯನದ ವ್ಯಾಪ್ತಿಗೊಳಪಡುವ ಪ್ರದೇಶ ದ್ವಿಭಾಷಿಕ ಪ್ರದೇಶದಲ್ಲಿದ್ದು ಇಲ್ಲಿ ಕನ್ನಡ, ತೆಲುಗು, ಹಿಂದಿ ಭಾಷಾ ಚಿತ್ರಗಳು ಪ್ರದರ್ಶನಗೊಳ್ಳುತ್ತವೆ. ಇವು ನಮ್ಮ ಕನ್ನಡ ಭಾಷೆಯಲ್ಲಿಲ್ಲವೆಂದು ಇವುಗಳಿಗೆ ವಿರುದ್ಧವಾಗುವ ಬದಲು, ಕನ್ನಡ ಚಲನಚಿತ್ರಗಳನ್ನು ಉತ್ಕೃಷ್ಟ ಮಟ್ಟದಲ್ಲಿ ತಯಾರಿಸಬೇಕು. ಇಂತಹ ಜನರ ಮನದಾಳದಲ್ಲಿ ಉಳಿವಂತಹ ಚಿತ್ರ ನಿರ್ಮಿಸಿದರೆ ಕನ್ನಡ ಚಲನಚಿತ್ರಗಳನ್ನು ಬಿಟ್ಟು ಪರಭಾಷಾ ಚಿತ್ರಗಳನ್ನು ಖಂಡಿತ ಯಾರು ನೋಡುವುದಿಲ್ಲ. ಕನ್ನಡ ಚಿತ್ರಗಳಲ್ಲಿ ಕಂಡುಬರುವ ಕೊರತೆಯನ್ನು ತೆಲುಗು, ಹಿಂದಿ ಮತ್ತಿತ್ತರ ಭಾಷೆಯ ಚಿತ್ರಗಳು ಇಲ್ಲಿನ ಗಡಿಭಾಗದ ಜನಗಳಿಗೆ ತುಂಬಿಕೊಡುತ್ತಿವೆ.

ಕಾವೇರಿ ನದಿ ನೀರಿಗಾಗಿ ಹೋರಾಡುವ ಸರ್ಕಾರ ಮತ್ತು ಸರ್ಕಾರೇತರ ಸಂಘ-ಸಂಸ್ಥೆಗಳು ಎಂಥ ಹೋರಾಟಗಳಿಗೂ ಅಣಿಯಾಗುತ್ತವೆ. ಈ ಹೋರಾಟಕ್ಕೆ ಮುಂಬಯಿ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಹೆಚ್ಚಿನ ಬೆಂಬಲ ವ್ಯಕ್ತವಾಗುವುದಿಲ್ಲ. ಇದಕ್ಕೆ ಹಳೇ ಮೈಸೂರಿನ ನೀತಿಗಳೇ ಕಾರಣ. ಕರ್ನಾಟಕ, ಕನ್ನಡ, ಕನ್ನಡಿಗರೆಂದರೆ ಕೇವಲ ಮೈಸೂರಿನವರೆಂದು ತಿಳಿದದ್ದೇ ಇದಕ್ಕೆ ಕಾರಣವಿರಬಹುದು. ಕೇವಲ ಕರ್ನಾಟಕಕ್ಕೆ ಮಾತ್ರ ಕಾವೇರಿ ನದಿ ನೀರಿನ ಸಮಸ್ಯೆ ಮಾತ್ರವಿಲ್ಲ. ಕೃಷ್ಣಾ ನದಿಯ ಆಲಮಟ್ಟಿ ಸಮಸ್ಯೆ ಎದುರಾದಾಗ ಹಳೇ ಮೈಸೂರಿನ ಹೋರಾಟಗಾರರು ಕೃಷ್ಣಾ ನದಿ ನಮಗೆ ಸಂಬಂಧಿಸಿದ್ದಲ್ಲವೆಂಬ ನಿಲುವು ತಾಳಿದ್ದು, ಕಾವೇರಿ ನ್ಯಾಯ ಮಂಡಳಿಯಿಂದ ಇಂಟಿರಿಯಂ ಆರ್ಡರ್ ಬಂದಾಗ ಬೆಂಗಳೂರಿನಲ್ಲಿ ದಂಗೆಗಳೇ ಆದವು. ಆದರೆ ಆಲಮಟ್ಟಿ ಆಣೆಕಟ್ಟಿನ ಎತ್ತರ ಹೆಚ್ಚಿಸುವ ಸಂದರ್ಭದಲ್ಲಿ ಆಂಧ್ರ ಸರ್ಕಾರ ಕೋರ್ಟಿಗೆ ಆಣೆಕಟ್ಟಿನ ಎತ್ತರ ಏರಿಸಬಾರದೆಂದು ತೀರ್ಪು ತೆಗೆದುಕೊಂಡು ಬಂದಾಗ ಈ ತೀರ್ಪಿನ ವಿರುದ್ಧ ಸರ್ಕಾರ ಮತ್ತು ಬೆಂಗಳೂರನ್ನು ಕೇಂದ್ರವಾಗಿರಿಸಿಕೊಂಡಿರುವ ಸಂಘಟನೆಗಳು ಮತ್ತು ಕನ್ನಡ ಹೋರಾಟಗಾರರು ಪ್ರತಿಭಟನೆಯನ್ನು ಮಾಡಲಿಲ್ಲ. ಈ ಭಾಗದ ಪ್ರತಿಯೊಬ್ಬರು ಈ ತೀರ್ಪಿನ ವಿರುದ್ಧ ಪ್ರತಿಭಟಿಸಿದ್ದು ಎಲ್ಲರಿಗೂ ಗೊತ್ತಿರುವ ವಿಷಯವೇ. ಆಲಮಟ್ಟಿ ಆಣೆಕಟ್ಟಿನ ಎತ್ತರವಿದ್ದುದು ೫೧೯ ಮೀಟರ್ ಅದನ್ನು ೫೨೫ ಮೀಟರ್‌ಗೆ ಎತ್ತರಿಸಿದರೆ ಈ ಭಾಗದ ಸುಮಾರು ೬-೭ ಜಿಲ್ಲೆಗಳು ಸಂಪೂರ್ಣ ನೀರಾವರಿ ಸೌಲಭ್ಯಕ್ಕೊಳಗಾಗುತ್ತಿದ್ದವು. ಕೇವಲ ೬ ಮೀಟರ್ ಎತ್ತರ ಎತ್ತರಿಸಬೇಕಾದರೆ ನಮಗೆ ಇವತ್ತು ಈ ಅವಕಾಶ ನೀಡಲಾಗುತ್ತಿಲ್ಲ. ಈ ಕೋರ್ಟು ತೀರ್ಪಿನ ವಿರುದ್ಧ ಇಲ್ಲಿನ ರೈತರು, ಮಠಾಧೀಶರು, ರಾಜಕೀಯ ಧುರೀಣರು ಪಕ್ಷಭೇದ ಮರೆತು ಹೋರಾಟ

ರೂಪಿಸಿದಾಗ ಮೈಸೂರಿನ ಕೆಲವೇ ಕೆಲವು ನಿಷ್ಠಾವಂತ ಹೋರಾಟಗಾರರು ಈ ಹೋರಾಟದಲ್ಲಿ ಪಾಲ್ಗೊಂಡರು. ಅವರಲ್ಲಿ ರೈತಸಂಘದ ಪ್ರೊ. ಎಂ.ಡಿ. ನಂಜುಂಡಸ್ವಾಮಿ, ಜಾಣಗೆರೆ ವೆಂಕಟರಾಮಯ್ಯ, ಟಿ.ಎ. ನಾರಾಯಣಗೌಡರು ಮುಖ್ಯರಾಗಿದ್ದರು. ಈ ಹೋರಾಟದ ಮುಖಂಡತ್ವವನ್ನು 'ಹೈದರಾಬಾದ್-ಕರ್ನಾಟಕ ಪ್ರತ್ಯೇಕ ರಾಜ್ಯ' ಸಂಘಟನೆಯ ವೈಜನಾಥ ಪಾಟೀಲರು ವಹಿಸಿಕೊಂಡಿದ್ದರು. ಉಳಿದಂತೆ ಮತ್ಯಾವ ಹಳೆಮೈಸೂರಿನ ಹೋರಾಟಗಾರರ ಸಂಘ-ಸಂಸ್ಥೆ, ಸಮಿತಿ, ವೇದಿಕೆಗಳ ಬೆಂಬಲ ಈ ಹೋರಾಟಕ್ಕೆ ಸಿಗದೆ, ಆಲಮಟ್ಟಿ ಹೋರಾಟ ವಿಫಲವಾಯಿತು. ಅಂತೆಯೇ ಇಂತಹ ಅನೇಕ ಹೋರಾಟಗಳು ಈ ಭಾಗದಲ್ಲಿ ಒಗ್ಗಟ್ಟಿಲ್ಲದೆ ವಿಫಲತೆಯನ್ನು ಕಂಡಿವೆ.

# ಆಲಮಟ್ಟಿಯಿಂದ ರಾಜಧಾನಿಗೆ ನೀರು

ಬೆಂಗಳೂರು, ಆ. 16– ನಗರದ ಸುತ್ತಮುತ್ತಲ ಪ್ರದೇಶಗಳಲ್ಲಿನ ಕುಡಿಯುವ ನೀರಿನ ಸಮಸ್ಯೆ ನಿವಾರಿಸಲು ಆಲಮಟ್ಟಿ ಜಲಾಶಯದಿಂದ ನೀರು ತರಲು ಯೋಜನೆ ರೂಪಿಸಲಾಗುತ್ತಿದೆ ಎಂದು ಬೆಂಗಳೂರು ಉಸ್ತುವಾರಿ ಜವಾಬ್ದಾರಿ ಹೊಂದಿರುವ ಸಚಿವ ಕಟ್ಟಾ ಸುಬ್ರಹ್ಮಣ್ಯ ನಾಯ್ಡು ತಿಳಿಸಿದ್ದಾರೆ.

ಇಂದಿಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಚೆನ್ನೈ ನಗರಕ್ಕೆ ೪೯೦ ಕಿ.ಮೀ. ದೂರದ ತೆಲುಗುಗಂಗಾ ಯೋಜನೆಯಿಂದ ನೀರು ಪೂರೈಸಬಹುದಾದರೆ ಅದಕ್ಕಿಂತ ಕಡಿಮೆ ದೂರದಲ್ಲಿರುವ ಆಲಮಟ್ಟಿಯಿಂದ ಬೆಂಗಳೂರಿಗೆ ಕುಡಿಯುವ ನೀರನ್ನು ತರುವುದಕ್ಕೆ ಯಾವುದೇ ಸಮಸ್ಯೆ ಉಂಟಾಗದು ಎಂದು ಅಭಿಪ್ರಾಯಪಟ್ಟರು.

ಬೆಂಗಳೂರು ನಗರ ಹಾಗೂ ಸುತ್ತಮುತ್ತಲಿನ ಪ್ರದೇಶಗಳಿಗೆ ಅವಶ್ಯವಿರುವ ಪ್ರಮಾಣದ ನೀರನ್ನು ಕಾವೇರಿಯಿಂದ ಒದಗಿಸುವುದು



ಅಸಾಧ್ಯ. ಈ ಹಿನ್ನೆಲೆಯಲ್ಲಿ ಆಲಮಟ್ಟಿಯಿಂದ ಮಳೆಗಾಲದಲ್ಲಿ ವ್ಯರ್ಥವಾಗಿ ಹರಿದುಹೋಗುವ ೪೦ ಟಿಎಂಸಿ ನೀರನ್ನು ಬೆಂಗಳೂರಿಗೆ ಕುಡಿಯುವ ನೀರಾಗಿ ಪೂರೈಕೆ ಮಾಡಲು ಕ್ರಮ ಕೈಗೊಳ್ಳಲಾಗುವುದು. ಈ ನಿಟ್ಟಿನಲ್ಲಿ ಈಗಾಗಲೇ ಯೋಜನೆ ಸಿದ್ಧವಾಗುತ್ತಿದೆ. ಕೇವಲ ಬೆಂಗಳೂರಿಗೆ ಮಾತ್ರವಲ್ಲ, ಈ ಯೋಜನಾ ಮಾರ್ಗದುದ್ದಕ್ಕೂ ಬರುವ ಹಳ್ಳಿ ಹಾಗೂ ಪಟ್ಟಣಗಳಿಗೂ ಕುಡಿಯುವ ನೀರು ಪೂರೈಸಲಾಗುವುದು ಎಂದು ಹೇಳಿದರು.

ಆಲಮಟ್ಟಿಯಿಂದ ಪೈಪ್ ಮೂಲಕ ಕುಡಿಯುವ ನೀರನ್ನು ಪೂರೈಸುವ ಈ ಯೋಜನೆ ಅನುಷ್ಠಾನದಿಂದ ಬೆಂಗಳೂರು ಹಾಗು ಸುತ್ತಮುತ್ತಲಿನ ಪ್ರದೇಶಗಳ ಕುಡಿಯುವ ನೀರಿನ ಸಮಸ್ಯೆ ಬಗೆಹರಿಯುವ ವಿಶ್ವಾಸವಿದೆ. ಕೋಲಾರ, ದೇವನಹಳ್ಳಿ, ನೆಲಮಂಗಲ, ಮಾಗಡಿ, ಆನೇಕಲ್ ಸೇರಿದಂತೆ ಪ್ರಮುಖ ಪಟ್ಟಣಗಳಿಗೂ ಆಲಮಟ್ಟಿಯಿಂದ ಕುಡಿಯುವ ನೀರು ಪೂರೈಸುವ ಯೋಜನೆ ಸಿದ್ಧವಾಗುತ್ತಿದೆ. ಮುಖ್ಯಮಂತ್ರಿಗಳು ಶೀಘ್ರದಲ್ಲೇ ಈ ಯೋಜನೆಯನ್ನು ಪ್ರಕಟಿಸಲಿದ್ದಾರೆ ಎಂದು ಸಚಿವ ಕಟ್ಟಾ ನುಡಿದರು.

ಡಿಸೆಂಬರ್ ೧೫ರೊಳಗೆ ಕಾವೇರಿ ನಾಲ್ಕನೇ ಹಂತದ ಕುಡಿಯುವ ನೀರು ಯೋಜನೆ ಕಾಮಗಾರಿಗೆ ಚಾಲನೆ ನೀಡಲಾಗುವುದು. ತೊರೆಕಾಡನಹಳ್ಳಿ ಬಳಿಯಿಂದ ಹೆಚ್ಚುವರಿಯಾಗಿ ೫೦೦ ಎಂಎಲ್‌ಡಿ ನೀರು ತರುವ ೩,೩೮೪ ಕೋಟಿ ರೂ. ಅಂದಾಜಿನ ಯೋಜನೆಗೆ ಅನುಮತಿ ದೊರೆತಿದೆ. ಜಪಾನ್ ಅಂತಾರಾಷ್ಟ್ರೀಯ ಸಹಕಾರ ಬ್ಯಾಂಕ್ ಈ ಯೋಜನೆಗೆ ಆರ್ಥಿಕ ನೆರವು ನೀಡಲು ತಾತ್ವಿಕ ಒಪ್ಪಿಗೆ ನೀಡಿದೆ. ಶೇ. ೧ರ ಬಡ್ಡಿದರದಲ್ಲಿ ನೀಡಲಾಗುವ ಈ ಸಾಲವನ್ನು ಮರುಪಾವತಿ ಮಾಡಲು ೫ ವರ್ಷ ಕಾಲಾವಕಾಶವಿದೆ. ಕಾಮಗಾರಿ ಆರಂಭಗೊಂಡ ಎರಡು ವರ್ಷಗಳಲ್ಲಿ ಪೂರ್ಣಗೊಳ್ಳಲಿದೆ ಎಂದು ಅವರು ವಿವರಿಸಿದರು. ನಗರದ ಸುತ್ತಮುತ್ತಲಿನ ಕೆರೆಗಳ ಸಂರಕ್ಷಣೆ, ಕಲುಷಿತ ನೀರಿನ ಶುದ್ಧೀಕರಣಕ್ಕೆ ೫,೨೩೮ ಕೋಟಿ ರೂಗಳ ಮತ್ತೊಂದು ಯೋಜನೆ ಸಿದ್ಧಪಡಿಸಲಾಗಿದೆ. ನರ್ಮ್ ಯೋಜನೆಯಡಿ ಕೆ.ಆರ್. ಪುರ ಮತ್ತು ಮಹದೇವಪುರ ನಗರಸಭೆ ವ್ಯಾಪ್ತಿಯಲ್ಲಿ ಪೈಪ್‌ಲೈನ್ ಅಳವಡಿಕೆ ಮತ್ತು ಒಳಚರಂಡಿ ಯೋಜನೆಗೂ ಅನುಮೋದನೆ ದೊರೆತಿದೆ. ೨೦೧೧ರ ವೇಳೆಗೆ ಯೋಜನೆ ಅನುಷ್ಠಾನಗೊಳ್ಳಲಿದೆ ಎಂದು ಕಟ್ಟಾ ಸುಬ್ರಹ್ಮಣ್ಯ ನಾಯ್ಡು ವಿಶ್ವಾಸ ವ್ಯಕ್ತಪಡಿಸಿದರು.

**ವರದಿ : ಸಂಯುಕ್ತ ಕರ್ನಾಟಕ, ೧೭.೦೮.೨೦೦೮, ಪು. ೫**

ಇಷ್ಟಲ್ಲದೇ ಕ್ರಿ.ಶ. ೨೦೦೮ರ ಆಗಸ್ಟ್ ತಿಂಗಳಲ್ಲಿ ಯಡಿಯೂರಪ್ಪ ಸರ್ಕಾರದ ಕಟ್ಟಾ ಸುಬ್ರಹ್ಮಣ್ಯಂ ಅವರು ಆಲಮಟ್ಟಿಯಿಂದ ಬೆಂಗಳೂರಿಗೆ ಕುಡಿಯುವ ನೀರನ್ನು ತರಲಾಗುತ್ತದೆ ಎಂಬ ಹೇಳಿಕೆಯನ್ನು ಕೊಟ್ಟರು. ಇವರಿಗೆ ಬೆಂಗಳೂರು ಮುಖ್ಯವಾಗುತ್ತದೆಯೇ ಹೊರತು ಉತ್ತರ ಕರ್ನಾಟಕ ಮುಖ್ಯವಾಗುವುದಿಲ್ಲ. ಆಲಮಟ್ಟಿಯಿಂದ ಬೆಂಗಳೂರಿಗೆ ನೀರು ಒಯ್ಯಲು ಪಡಬೇಕಾದ ಕಷ್ಟಕ್ಕೆ ಬದಲಾಗಿ ಏನೂ ಕಷ್ಟವಿಲ್ಲದೆ ಇಲ್ಲಿನ ಸುಮಾರು ೭ ಜಿಲ್ಲೆಗಳಿಗೆ ಸಂಪೂರ್ಣ ಕುಡಿಯುವ ನೀರು ಒದಗಿಸಬಹುದು. ಬಿಸಿಲಿನ ಬೇಗೆಯಿಂದ ನರಳುತ್ತಿರುವ ಇಲ್ಲಿನ ಜನರ ದಣಿವಿಗೆ ಪರಿಹಾರ ಕಂಡುಕೊಳ್ಳುವುದು ಇವರಿಗೆ ಮುಖ್ಯವಾಗುತ್ತಿಲ್ಲ.

೫.೫.೨.೩. ಕರ್ನಾಟಕ ಆಂಧ್ರ ಗಡಿಭಾಗದ ಸಂಪರ್ಕ ಭಾಷೆಗಳಾಗಿ ಹಿಂದಿ ಮತ್ತು ತೆಲುಗು : ಇಲ್ಲಿನ ಇನ್ನೊಂದು ಮುಖ್ಯವಾದ ಅಂಶವನ್ನು ನೋಡುವುದಾದರೆ ಅದು ಹಿಂದಿ ಮತ್ತು ತೆಲುಗು ಭಾಷೆಯ ಸಮಸ್ಯೆ, ಇತ್ತೀಚೆಗೆ ಬೆಂಗಳೂರಿನಲ್ಲಿ ಕರ್ನಾಟಕ ರಕ್ಷಣಾ ವೇದಿಕೆಯವರು ಸೆಪ್ಟೆಂಬರ್ ೧೪, ೨೦೦೭ರಂದು ಹಿಂದಿ ವಿರೋಧಿ ದಿನವನ್ನಾಚರಿಸಿ, ಕನ್ನಡಿಗರ ಮೇಲಿನ ಹಿಂದಿ ಹೇರಿಕೆಯನ್ನು ನಿಲ್ಲಿಸಲು ಹೋರಾಟ ಆರಂಭಿಸಿತು. ಕರ್ನಾಟಕ ರಕ್ಷಣಾ ವೇದಿಕೆಯವರ ಪ್ರಕಾರ ಒತ್ತಾಯಪೂರ್ವಕವಾಗಿ ಕನ್ನಡಿಗರ ಮೇಲೆ ಹಿಂದಿ ಭಾಷೆಯನ್ನು ಹೇರುತ್ತಿದ್ದಾರೆಂಬುದು ಇವರ ಈ ನಿಲುವನ್ನು ಸಮರ್ಥಿಸುವುದಾದರೆ ಇಂದು ಕರಾವಳಿಯಲ್ಲಿನ ತುಳು, ಕೊಂಕಣಿ, ಬೆಳಗಾವಿ ಗಡಿಯಲ್ಲಿನ ಮರಾಠಿ, ಆಂಧ್ರದ ಗಡಿಯಲ್ಲಿನ ತೆಲುಗು, ಚಾಮರಾಜಪೇಟೆ ಗಡಿಯಲ್ಲಿನ ತಮಿಳು ಭಾಷೆಗಳು ಕನ್ನಡದ ಮೇಲೆ ಒತ್ತಡವನ್ನು ಹೇರುತ್ತಿವೆ ಎಂದಾಗುತ್ತದೆ. ಕನ್ನಡಿಗರ ಮೇಲೆ ಈ ಭಾಷೆಗಳು ಯಾವತ್ತಿಗೂ ಒತ್ತಡ ಹೇರುತ್ತಿಲ್ಲ. ಅದಕ್ಕೆ ಬದಲಾಗಿ ನಾವೇ ಅವುಗಳನ್ನು ಬರಮಾಡಿಕೊಳ್ಳುತ್ತಿದ್ದೇವೆ. ಈ ಅಧ್ಯಯನ ವ್ಯಾಪ್ತಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಮುಸ್ಲಿಂ ಅರಸರ ಆಳ್ವಿಕೆಯ ಪ್ರಭಾವದಿಂದ ಉರ್ದು, ಹಿಂದಿ, ಮತ್ತು ಭೌಗೋಳಿಕವಾಗಿ ಕರ್ನಾಟಕ-ಆಂಧ್ರ ಗಡಿಗೆ ಹತ್ತಿಕೊಂಡಿರುವ ತೆಲುಗು ಭಾಷೆ ಇಲ್ಲಿನ ಜನರಿಗೆ ಪರಿಚಯವಾದುವು. ಇವತ್ತು ಹಿಂದಿ ಮತ್ತು ತೆಲುಗು ಭಾಷೆಗಳು ಇಲ್ಲಿನ ಜನರ ನಾಲಿಗೆಯ ಮೇಲೆ ಸರಳವಾಗಿ ಉಚ್ಚರಿಸಲ್ಪಡುತ್ತದೆ. ಇಲ್ಲಿನ ಜನರ ಸಂಪರ್ಕ ಭಾಷೆಯಾಗಿಯೂ ಇವು ಬಳಕೆಗೊಳ್ಳುತ್ತಿವೆ. ಹಳ್ಳಿಯ ಜನರು ಮೌಖಿಕವಾಗಿ ಈ ಭಾಷೆಗಳನ್ನು ಬಳಸುತ್ತಾರೆಂದರೆ ಅವು ಇವರಲ್ಲಿ ಬೆರೆತುಕೊಂಡಿವೆ ಎಂದರ್ಥ. ಹೀಗಾಗಿ ಹಿಂದಿ ಮತ್ತು ತೆಲುಗು ಭಾಷೆಗಳು ಇಲ್ಲಿನ ಕನ್ನಡಕ್ಕೆ ತೊಂದರೆ ಮಾಡುತ್ತಿಲ್ಲ. ಹಿಂದಿ ಮತ್ತು ತೆಲುಗು ಭಾಷೆಯನ್ನು ಇಲ್ಲಿ ಯಾರು ನಮ್ಮ ಭಾಷೆಯ ಮೇಲೆ ಒತ್ತಡ ಹೇರುತ್ತಿದೆ ಎಂದು ಭಾವಿಸುವುದಿಲ್ಲ. ಅಂದರೆ ನಾನು ಈ ಮೂಲಕ ಕಂಡುಕೊಂಡಿದ್ದು ಒಂದು ಪ್ರದೇಶದಲ್ಲಿ ಮಾತೃಭಾಷೆಯ ಜೊತೆಗೆ ಇನ್ನೊಂದು ಸಂಪರ್ಕ ಭಾಷೆ ಅವಶ್ಯವಾಗಿ ಬೇಕಾಗುತ್ತದೆ. ಉಳಿದವರಿಗೆ ಹಿಂದಿ ಮತ್ತು ತೆಲುಗು ಸಂಪರ್ಕ ಭಾಷೆ ಆಗುವುದಿಲ್ಲವೆಂದ ಮಾತ್ರಕ್ಕೆ ಕರ್ನಾಟಕ-ಆಂಧ್ರ ಗಡಿಪ್ರದೇಶದಲ್ಲಿರುವವರಿಗೂ ಬೇಡ ಎಂಬುದು ಸರಿಯಲ್ಲ. ಗುಲಬರ್ಗಾದ ಕನ್ನಡಿಗರು ಕನ್ನಡವನ್ನು ಮಾತೃಭಾಷೆಯಾಗಿ ಹೊಂದಿರುವುದರ ಜೊತೆಗೆ ಹಿಂದಿಯನ್ನು ಸಂಪರ್ಕ ಭಾಷೆಯಾಗಿ ಬಳಸುತ್ತಾರೆ. ಇದರಿಂದ ಕನ್ನಡಕ್ಕೆ ಯಾವತ್ತು ಕುತ್ತು ಬರುವುದಿಲ್ಲ.

• • •

ಯಾವುದೇ ಒಂದು ಪ್ರದೇಶಕ್ಕೆ ತನ್ನದೇ ಆದ ವೈಶಿಷ್ಟ್ಯವಿರುತ್ತದೆ. ಅದು ತನ್ನದೇ ಆದ ಸಾಂಸ್ಕೃತಿಕ ಅಂತಸತ್ವವನ್ನು ಹೊಂದಿರುತ್ತದೆ. ಚಾರಿತ್ರಿಕ ಪಲ್ಲಟಗಳನ್ನೊಳಗೊಂಡಿರುತ್ತದೆ. ಸಾಹಿತ್ಯ-ಜನಪದ-ಕಲೆ ಇತ್ಯಾದಿಗಳಿಗೆ ಕೊಡುಗೆಯನ್ನು ನೀಡುತ್ತಾ ಬಂದಿರುತ್ತದೆ. ರಾಜಕೀಯ ಆಯಾಮವಿರುತ್ತದೆ. ಈ ಎಲ್ಲ ನೆಲೆಗಳ ಮೂಲಕ ಒಂದು ಪ್ರಾದೇಶಿಕ ವ್ಯವಸ್ಥೆ ಮೂಲ ಅಸ್ಮಿತೆಯನ್ನು(Identity) ಉಳಿಸಿ ಕೊಂಡಿರುತ್ತದೆ. ಈ ಅಸ್ಮಿತೆ ಉಳಿಸಿಕೊಂಡೇ ಪ್ರದೇಶವು ಸದ್ಯದ ಸ್ಥಿತಿಗತಿಗೆ ಪೂರಕವಾಗಿರುತ್ತದೆ. ಹಾಗೂ ಆ ಪ್ರದೇಶದ ಹಿಂದುಳಿದಿರುವಿಕೆಗೂ ಪಾರಂಪರಿಕ ಕಾರಣಗಳಿರುತ್ತವೆ ಎಂಬುದು ನಿರ್ವಿವಾದ.

ಹೈದ್ರಾಬಾದ್-ಕರ್ನಾಟಕ ಎಂಬ ಪದ ಕಿವಿಗೆ ಬಿದ್ದ ತಕ್ಷಣ ನೆನಪಿಗೆ ಬರುವುದೆಂದರೆ ಹಿಂದುಳಿದ ಪ್ರದೇಶ ಎಂಬ ಭಾವನೆ. ಈ ಭಾವನೆ ಬೆಳೆಯುವುದರಲ್ಲಿ ಯಾವುದೇ ಸಂದೇಹವಿಲ್ಲ. ಇಂತಹ ಹಿಂದುಳಿದಿರುವಿಕೆಯೇ ಹಾಗೂ ರಾಜಕೀಯ ಆಡಳಿತದ ನಿರ್ಲಕ್ಷ್ಯವೇ 'ಪ್ರಾದೇಶಿಕತೆಯೆಂಬುದು ತನ್ನನಲ್ಲಿ ಪ್ರತಿನಿಧಿಸಿಕೊಳ್ಳುವ ತನ್ನ ಆಗುಹೋಗುಗಳಿಗೆ ಬೇಡಿಕೆಗಳನ್ನು ಇಡುವ ಹಾಗೂ ಕೇಂದ್ರೀಕೃತ ವಲಯಕ್ಕೆ ಒಂದು ರೀತಿಯ Counter-Argument ನೀಡುವ ವ್ಯವಸ್ಥೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಹೈದ್ರಾಬಾದ್-ಕರ್ನಾಟಕವೂ ಸಹ ಇಡಿಯಾಗಿ ಕರ್ನಾಟಕ ಎಂದು ಕೇಂದ್ರೀಕೃತ ವಲಯದ ಆರ್ಥಿಕ ಅಭಿವೃದ್ಧಿಗೆ ಪ್ರತಿಯಾಗಿ, ಭಿನ್ನವಾದ ಘಟಕವಾಗಿ ನಿಲ್ಲುತ್ತದೆ. ಹೈದ್ರಾಬಾದ್-ಕರ್ನಾಟಕಕ್ಕೆ ತನ್ನದೇ ಆದ ಬೇಡಿಕೆಗಳಿವೆ. ಪ್ರಾದೇಶಿಕ ಸಮಸ್ಯೆಗಳಿವೆ. ಈ ಪ್ರದೇಶ ಕೇವಲ ಆರ್ಥಿಕವಾಗಿ ಹಿಂದುಳಿದಿಲ್ಲ. ಇಲ್ಲಿನ ಜನರಿಗೆ ರಾಜಕೀಯ ಹಿತಾಸಕ್ತಿಯೂ ಬೇಕಾಗಿದೆ. 'ಕರ್ನಾಟಕ' ಎಂಬುದು ಕೇವಲ ಕಾವೇರಿ ಅಲ್ಲ. ಅದು ಕೃಷ್ಣಭೀಮಾ'ನೂ ಹೌದು ಎಂಬುದಾಗಿದೆ.

ಈ ಹೈದ್ರಾಬಾದ್-ಕರ್ನಾಟಕವು ಹಿಂದುಳಿದ ಪ್ರದೇಶವೆಂಬುದು ಸಾಮಾನ್ಯ. ಆದರೆ ಕೊನೆಯಲ್ಲಿ ರುವ ಕರ್ನಾಟಕದ ಗಡಿಯ ಪರಿಸ್ಥಿತಿಯಂತೂ ಇನ್ನು ಶೋಚನೀಯವಾಗಿದೆ. ಆಂಧ್ರಕ್ಕೆ ಹೊಂದಿಕೊಂಡಿರುವ ಈ ಅಧ್ಯಯನ ವ್ಯಾಪ್ತಿಯ ಪ್ರದೇಶವು ಕರ್ನಾಟಕ ಸರ್ಕಾರದಿಂದ ಯಾವುದೇ ಸೌಲಭ್ಯಗಳನ್ನು ಪಡೆಯದೇ ದುಸ್ತರ ಸ್ಥಿತಿಯಲ್ಲಿದೆ. ಈ ಕಾರಣದಿಂದ 'ಕರ್ನಾಟಕ-ಆಂಧ್ರಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿಗತಿ' ಎಂಬ ಈ ಅಧ್ಯಯನಕ್ಕೆ ಮಹತ್ವ ಬಂದಿದೆ ಎನ್ನಬಹುದು.

'ಸ್ಥಿತಿಗತಿ' ಎಂಬುದನ್ನು ವಿವರಿಸಲು ಕೇವಲ ಒಂದು ಅಧ್ಯಯನ ಕ್ಷೇತ್ರದಿಂದ ಪ್ರವೇಶಿಸಲು ಸಾಧ್ಯವಿಲ್ಲ. ಅದು ಪ್ರಸ್ತುತತೆಯ ಅಧ್ಯಯನವಾಗಿರುವುದರಿಂದ ವಿಷಯವನ್ನು ಕುರಿತು ಅದು ಸಾಹಿತ್ಯವನ್ನು

ಒಳಗೊಂಡಿರಬಹುದು. ಚರಿತ್ರೆಯನ್ನು ಒಳಗೊಂಡಿರಬಹುದು, ಆರ್ಥಿಕ, ರಾಜ್ಯಶಾಸ್ತ್ರಗಳನ್ನು ಒಳಗೊಂಡಿರಬಹುದು. ಆದರೆ ಕೇವಲ ಒಂದು ಅಥವಾ ಎರಡು ಅಧ್ಯಯನ ಕ್ಷೇತ್ರಗಳ ಮೂಲಕ ಒಂದು ಸಮೂಹದ, ಒಂದು ಜನವರ್ಗದ ಇಲ್ಲವೇ ಒಂದು ಪ್ರದೇಶದ ಸ್ಥಿತಿಗತಿಗಳನ್ನು ಅಧ್ಯಯನಕ್ಕೊಳಪಡಿಸುವುದು ಅಷ್ಟೊಂದು ಉಚಿತವಾಗಿರುವುದಿಲ್ಲ. ಕೇವಲ ಒಂದು ಅಂಶದಿಂದ ಆ ಪ್ರದೇಶದಲ್ಲಿನ ಜನರ ಸ್ಥಿತಿಗತಿಗಳ ಏರಿಳಿತಗಳನ್ನು ಸಮಗ್ರವಾಗಿ ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಸ್ಥಿತಿಗತಿ ಎಂಬುದು ಸಾಂಸ್ಕೃತಿಕ, ಚಾರಿತ್ರಿಕ, ಮೌಖಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಾಗೂ ಸಾಹಿತ್ಯಗಳಂತಹ ಅನೇಕ ಅಧ್ಯಯನ ಕ್ಷೇತ್ರಗಳ ಪೂರಕ ಪರೀಕ್ಷೆಗಳಿಗೆ ಒಳಪಡುತ್ತದೆ.

ಹಾಗಾಗಿ ಅಧ್ಯಯನದ ಮೊದಲ ಅಧ್ಯಾಯದಲ್ಲಿ ಹೇಳಿರುವಂತೆ ಅಧ್ಯಯನದ ಉದ್ದೇಶಕ್ಕನು ಸಾರವಾಗಿ 'ಕರ್ನಾಟಕ-ಆಂಧ್ರಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ'ಯ ಅಧ್ಯಯನ ಒಟ್ಟಾರೆಯಾಗಿ ಅಂತರ್‌ಶಿಸ್ತಿಯ ಅಧ್ಯಯನದಲ್ಲಿ ತನ್ನ ಹರವನ್ನು ತೆರೆದುಕೊಂಡಿದೆ.

ಪ್ರಸ್ತುತವಾಗಿ ಈ ಅಧ್ಯಯನ ಕೈಗೊಂಡಾಗ ಎದುರಾದ ಕೆಲವು ಪ್ರಮುಖ ಪ್ರಶ್ನೆಗಳಾದ ೧. ಚರಿತ್ರೆ ಮತ್ತು ಭಾಷೆಗಳಿಂದ ಕನ್ನಡ ನಾಡನ್ನು ಕಟ್ಟಲು ಸಾಧ್ಯವೆ?, ೨. ಭೌಗೋಳಿಕ ಗಡಿಗಳನ್ನು ಪರಿಗಣಿಸಿ ಕನ್ನಡ ನಾಡನ್ನು ಕಟ್ಟಲು ಸಾಧ್ಯವೆ? ಎಂದಾಗ ಹಿಂದಿನ ಗಡಿ ಇಂದಿಲ್ಲ, ಇಂದಿನ ಗಡಿ ನಾಳೆ ಇರುವುದೇ? ೩. ಇಂದಿನ ನಮ್ಮ ಮಕ್ಕಳಿಗೆ ನಾವು ಕರ್ನಾಟಕ ಎಂಬುದಾಗಿ ಹೇಳಿಕೊಟ್ಟಿರುವುದು ಸಮಂಜಸವೆ? ೪. ಮಾತೃಭಾಷೆ ಆಧಾರದ ಮೇಲೆ ಇವತ್ತು ನಾವು ಕನ್ನಡ ನಾಡನ್ನು ಕಟ್ಟಲು ಸಾಧ್ಯವೇ? ಅಥವಾ ಈ ನಿಲುವನ್ನು ಬದಲಿಸಿಕೊಳ್ಳಬೇಕೆ? ಹಾಗೂ ಕನ್ನಡಿಗರೆಂದರೆ ಯಾರು? ಕನ್ನಡಿಗರನ್ನು ಗುರುತಿಸುವಲ್ಲಿ ಕನ್ನಡ ಭಾಷೆಯನ್ನು ಪರಿಗಣಿಸಿದರೆ ಸಮೃದ್ಧ ಕರ್ನಾಟಕ ಕಟ್ಟುವಲ್ಲಿ ಅನ್ಯಭಾಷಿಕರ ಪಾತ್ರ ಏನು? ಎಂಬು ಪ್ರಶ್ನೆಗಳಿಗೆ ಉತ್ತರವನ್ನು 'ಕರ್ನಾಟಕ-ಆಂಧ್ರಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ'ಯ ಅಧ್ಯಯನ ಉತ್ತರ ನೀಡುತ್ತದೆ.

ಈ ಮುಂಚೆ ಚರಿತ್ರೆ ಮತ್ತು ಭಾಷೆಗಳಿಂದ ಭೌಗೋಳಿಕ ಗಡಿಗಳನ್ನು ಪರಿಗಣಿಸಿ, ಮಾತೃಭಾಷೆಯ ಆಧಾರದ ಮೇಲೆ, ಕನ್ನಡ ನಾಡನ್ನು ಮತ್ತು ಕನ್ನಡಿಗರನ್ನು ಗುರುತಿಸಬಹುದಾಗಿತ್ತು. ಆದರೆ ಪ್ರಸ್ತುತ ಸಂದರ್ಭದಲ್ಲಿ ಈ ಮೇಲಿನ ನಿಲುವುಗಳನ್ನು ಸ್ವಲ್ಪ ಬದಲಾಯಿಸಿಕೊಳ್ಳುವುದು ಇಂದಿನ ಅನಿವಾರ್ಯತೆಯಾಗಿದೆ. ಕರ್ನಾಟಕದಲ್ಲಿನ ನಾವು ಕನ್ನಡಿಗರಾಗುವುದರ ಜೊತೆಗೆ ಏಕೀಕರಣದ ನಂತರ ನಮ್ಮ ಭೌಗೋಳಿಕ ಗಡಿಗಳಿಂದ ಹೊರಗುಳಿದ ಕನ್ನಡಿಗರೆಲ್ಲರೂ ನಮ್ಮಂತೆ ಕನ್ನಡಿಗರು. ಅದರಂತೆ ಕನ್ನಡ ಮಾತೃಭಾಷೆಯನ್ನು ಹೊಂದಿದವರೆಲ್ಲ ಕನ್ನಡಿಗರು. ಈಗಾಗಲೇ ಕಾರಣಾಂತರಗಳಿಂದ ನಮ್ಮ ರಾಜ್ಯದಲ್ಲಿರುವ ಅನ್ಯ ಮಾತೃಭಾಷಿಕರನ್ನು ಕನ್ನಡಿಗರೆಂದು ಪರಿಗಣಿಸಿ ಮಾನಸಿಕವಾಗಿ, ಸಾಂಸ್ಕೃತಿಕವಾಗಿ ಕನ್ನಡಿಗರಾಗುವಂತೆ ಅವರನ್ನು ಪ್ರೇರೇಪಿಸಬೇಕು.

ಈ ಮೇಲಿನ ಅಂಶಗಳನ್ನೇ ಈ ಅಧ್ಯಯನ ವಿಷಯ ವಸ್ತುವನ್ನಾಗಿಸಿಕೊಂಡು ಕರ್ನಾಟಕ-ಆಂಧ್ರಗಡಿ ಭಾಗದಲ್ಲಿ ಕನ್ನಡಿಗರ ಮತ್ತು ತೆಲುಗರ ಸೌಹಾರ್ದತೆಯನ್ನು ಅಲ್ಲಿನ ಚರಿತ್ರೆ, ಧಾರ್ಮಿಕ ಕಾರಣಗಳು, ಜನಪದ ದೈವಾಚಾರಣೆ, ಜನಪದ ಸಾಹಿತ್ಯ ಹಾಗೂ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿ ಮತ್ತು ಕ್ಷೇತ್ರಕಾರ್ಯದ ಮಾಹಿತಿಯಿಂದ ಕಂಡುಕೊಂಡ ಕನ್ನಡ ಮತ್ತು ತೆಲುಗರ ಪರಿಕಲ್ಪನೆ, ಕರ್ನಾಟಕ, ಕನ್ನಡ, ಕನ್ನಡಿಗ ಎಂಬುದರ ಪರಿಕಲ್ಪನೆ, ಗಡಿಭಾಗದ ಕನ್ನಡಿಗರ ಮೇಲಿರುವ ಒತ್ತಡಗಳು ಹಾಗೂ ಇಲ್ಲಿನ ಜನರ ಧ್ವನಿಯಲ್ಲಿ ಅಡಗಿರುವ ಪ್ರತ್ಯೇಕತೆ, ಪ್ರತ್ಯೇಕ ರಾಜ್ಯದ ಬೇಡಿಕೆ - ಈ ಎಲ್ಲ ಪ್ರಮುಖಾಂಶಗಳನ್ನು "ಕರ್ನಾಟಕ-ಆಂಧ್ರಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿಗತಿ"ಯ ಅಧ್ಯಯನ ಮುಂದಿಡುತ್ತಿದೆ.

ಈ ಅಧ್ಯಯನದಿಂದ ಕಂಡುಕೊಳ್ಳುವುದೇನೆಂದರೆ ಕರ್ನಾಟಕ-ಆಂಧ್ರದ ಗಡಿ, ಚಾರಿತ್ರಿಕ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದರು. ಪ್ರಸ್ತುತ ಸಂದರ್ಭದಲ್ಲಿ ಇಲ್ಲಿನ ಚಾರಿತ್ರಿಕ ಅವಶೇಷಗಳನ್ನು ನಿರ್ಲಕ್ಷಿಸಲಾಗಿದೆ. ಇದರಿಂದಾಗಿ ಮುಂದಿನ ಪೀಳಿಗೆಗೆ ಚಾರಿತ್ರಿಕ ಸಂಗತಿಗಳನ್ನು ವಿವರಿಸುವಲ್ಲಿ ಸ್ಥಳೀಯರು ಎಡವುತ್ತಿದ್ದಾರೆ. ಬೇರೆ ಬೇರೆ ರಾಜಮಹಾರಾಜರ ಆಳ್ವಿಕೆಯಲ್ಲಿ ಜೈನ, ವೈಷ್ಣವ, ವೀರಶೈವ ಧರ್ಮಗಳು ಇಲ್ಲಿ ಬೆಳೆದು ಬಂದದ್ದು ಇವತ್ತಿಗೂ ಕಂಡು ಬರುತ್ತವೆ. ಒಟ್ಟಾರೆಯಾಗಿ ಧರ್ಮ ಧರ್ಮಗಳ ನಡುವೆ ಸೌಹಾರ್ದತೆ ಬೆಳೆದಿರುವುದಕ್ಕೆ ಇಲ್ಲಿನ ದೈವಗಳು ಮತ್ತು ಧಾರ್ಮಿಕ ತಾಣಗಳು ಪ್ರಮುಖ ಪಾತ್ರವಹಿಸುತ್ತವೆ. ಸಾಹಿತ್ಯಕವಾಗಿ ಕವಿರಾಜಮಾರ್ಗದಿಂದ ಇಂದಿನವರೆಗೆ ಕನ್ನಡ ಮತ್ತು ತೆಲಗು ಸಾಹಿತ್ಯಗಳು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೊಡಕೊಳ್ಳುವಿಕೆ ನಡೆಸಿಕೊಂಡು ಬಂದಿವೆ. ಮೌಖಿಕ ಸಾಹಿತ್ಯ ಎರಡು ಭಾಗದ ಜನರಲ್ಲಿ ಹಾಸುಹೊಕ್ಕಾಗಿದೆ. ಅಲ್ಲದೇ ಪ್ರಾಚೀನ ಕವಿಗಳು (ಗಜಾಂಕುಶ) ಕನ್ನಡ ಮತ್ತು ತೆಲಗುಗಳೆರಡರಲ್ಲಿಯು ಪ್ರಸಿದ್ಧರಾಗಿದ್ದರು ಎಂಬುದು ಗೊತ್ತಾಗುತ್ತದೆ. ಇಂತಹ ಸಾಹಿತ್ಯಿಕ ಹರಿವನ್ನು ಮುಂದುವರೆಸಿಕೊಂಡು ಬಂದ ತತ್ವಪದಕಾರರು ಕನ್ನಡ ಮತ್ತು ತೆಲುಗು ಭಾಷೆಗಳೆರಡರಲ್ಲೂ ತತ್ವಪದಗಳನ್ನು ರಚಿಸಿ, ಗಡಿಭಾಗದಲ್ಲಿ ನೆಲೆಸಿ, ಗಡಿಯಲ್ಲಿನ ಕನ್ನಡಿಗರ ಮತ್ತು ತೆಲುಗರ ಮಧ್ಯೆ ಸಾಹಿತ್ಯಕ ಸೌಹಾರ್ದತೆಯನ್ನು ನಿರ್ಮಿಸಿದ್ದಾರೆ.

ಎಲ್ಲ ಕಡೆ ಇರುವಂತೆ ಈ ಗಡಿಭಾಗದ ಜನರು ಜೀವನಾವರ್ತನ ಆಚರಣೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಗರ್ಭಾವಸ್ಥೆ ಮಗುವಿನ ಜನನ, ಋತುಮತಿ, ವಿವಾಹ, ಶವಸಂಸ್ಕಾರ ಮತ್ತು ಸೂತಗಳ ಆಚರಣೆಗಳಲ್ಲಿ ಎಲ್ಲ ಧರ್ಮದವರು ಸಾಮಾನ್ಯವಾಗಿ ಒಂದೇ ರೀತಿಯ ಪದ್ಧತಿಗಳನ್ನು ಅಳವಡಿಸಿಕೊಂಡಿದ್ದಾರೆ. ಮುಸ್ಲಿಂ ಧರ್ಮದವರು ಕೆಲವೊಂದು ಆಚರಣೆಗಳನ್ನು ಬೇರೆ ರೀತಿಯಲ್ಲಿ ನಡೆಸಿಕೊಂಡು ಬಂದರು. ಉಳಿದೆಲ್ಲ ಧರ್ಮಗಳೊಂದಿಗಿನ ಆಚರಣೆಗಳಲ್ಲಿ ಮುಸ್ಲಿಮರು ಸೌಹಾರ್ದತೆಯನ್ನು ಬೆಳೆಸಿಕೊಂಡು ಬಂದಿರುವುದಕ್ಕೆ ಉದಾಹರಣೆಗಳೆಂದರೆ, ಹಿಂದೂಗಳ ಮದುವೆಯಲ್ಲಿ ಮುಸ್ಲಿಮರು,

ಮುಸ್ಲಿಮರ ಮದುವೆ ಯಲ್ಲಿ ಹಿಂದೂಗಳು, ಹಿಂದೂಗಳ ಧಾರ್ಮಿಕ ಆಚರಣೆಗಳಲ್ಲಿ ಮುಸ್ಲಿಮರು, ಮುಸ್ಲಿಮರ ಮೊಹರಂ ಆಚರಣೆಗಳಲ್ಲಿ ಹಿಂದೂಗಳು, ವೀರಭದ್ರ ದೇವರ ಜಾತ್ರೆಯಲ್ಲಿ ಮುಸ್ಲಿಮರು, ಯಾಕುಬಸಾಬ ಸಂತನ ಉರುಸ್ಸಿನಲ್ಲಿ ಹಿಂದುಗಳು ಭಾಗವಹಿಸುತ್ತಿರುವರು.

ಭಾವನಾತ್ಮಕವಾಗಿ ಕರ್ನಾಟಕ-ಆಂಧ್ರಗಡಿಭಾಗದಲ್ಲಿ ಕನ್ನಡಿಗರು ಮತ್ತು ತೆಲುಗರು ಹತ್ತಿರ ವಾಗಿದ್ದಾರೆ. ಪ್ರಸ್ತುತ ಭೌತಿಕ ಅಂಶಗಳಲ್ಲಿ ಈ ಸೌಹಾರ್ದತೆ ತನ್ನ ಗಟ್ಟಿತನವನ್ನು ಕಳೆದುಕೊಳ್ಳುತ್ತಿದೆ. ಇದಕ್ಕೆ ಕರ್ನಾಟಕ ಸರಕಾರದ ವಿಫಲತೆ ಮತ್ತು ಆಂಧ್ರ ಸರಕಾರದ ಸಫಲತೆ ಕಾರಣವಾಗಿದೆ. ಈ ಗಡಿಭಾಗದಲ್ಲಿ ವಾಸಿಸುವ ಕನ್ನಡಿಗರು ಎಲ್ಲ ರೀತಿಯಲ್ಲಿ ಆಡಳಿತಾತ್ಮಕವಾಗಿ ಅಲಕ್ಷ್ಯಕ್ಕೆ ಒಳಗಾಗಿದ್ದಾರೆ. ಇವರ ಅಭಿವೃದ್ಧಿಗೆ ಕೇಂದ್ರ ಸರಕಾರವಾಗಲಿ, ಕರ್ನಾಟಕ ಹಾಗೂ ಆಂಧ್ರ ಸರಕಾರಗಳಾಗಲಿ ಅಥವಾ ಸ್ಥಳೀಯ ಸಂಘ-ಸಂಸ್ಥೆಗಳಾಗಲಿ ಯಾವುದೇ ರೀತಿಯ ಅಭಿವೃದ್ಧಿ ಕೆಲಸಗಳನ್ನು ಇಲ್ಲಿ ಮಾಡಿರುವುದಿಲ್ಲ.

ಈ ಗಡಿಭಾಗದ ಪ್ರಾಥಮಿಕ ಸೌಲಭ್ಯಗಳ ಹಿನ್ನೆಲೆಗಳಲ್ಲಿ ಚರ್ಚಿಸುವಾಗ ಇಲ್ಲಿ ಸರಿಯಾದ ರಸ್ತೆಗಳಿರುವುದಿಲ್ಲ, ಕುಡಿಯುವ ನೀರಿನ, ಪ್ರಾಥಮಿಕ ಆರೋಗ್ಯ ಕೇಂದ್ರ, ಗ್ರಾಮ ನೈರ್ಮಲ್ಯೀಕರಣ, ಪೌಷ್ಠಿಕ ಆಹಾರದ ಕೊರತೆ - ಹೀಗೆ ಹತ್ತಾರು ಸಮಸ್ಯೆಗಳು ಎದ್ದು ಕಾಣುತ್ತವೆ. ಈ ಸಮಸ್ಯೆಗಳಿಂದಾಗಿ ಜನರು ತಮಗಿದ್ದ ಚೂರು-ಪಾರು ಆಸ್ತಿಪಾಸ್ತಿಯನ್ನೆಲ್ಲ ಬಿಟ್ಟು ಬೇರೆ ಕಡೆ ಬದುಕಲು ಮತ್ತು ತಮ್ಮ ಮೂಲಭೂತ ಅವಶ್ಯಕತೆಗಳ ಪೂರೈಕೆಗಾಗಿ ಆಂಧ್ರದ ಕಡೆ ಹೋಗುತ್ತಿದ್ದಾರೆ.

ಚಾರಿತ್ರಿಕ ಕಾಲದಲ್ಲಿ ಉತ್ತಮ ಶೈಕ್ಷಣಿಕ ಚಟುವಟಿಕೆಗಳಿಗೆ ಹೆಸರಾಗಿದ್ದ ಈ ಭಾಗ ಮುಸ್ಲಿಮರ ಮತ್ತು ಪ್ರಸ್ತುತ ಸಂದರ್ಭದಲ್ಲಿ ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆ ಎಂಬ ಮುದ್ರೆ ಒತ್ತಿಕೊಂಡಿದೆ. ಇವತ್ತು ಈ ಗಡಿಭಾಗದಲ್ಲಿ ಕೇವಲ ಒಂದಾದರೂ ಉತ್ತಮ ಸೌಲಭ್ಯಗಳಿಂದ ಕೂಡಿದ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲದಿರುವುದು ಕಂಡುಬರುತ್ತದೆ. ಇದರಿಂದಾಗಿ ಎಸ್.ಎಸ್.ಎಲ್.ಸಿ. ಮತ್ತು ವೃತ್ತಿಪರ ಶಿಕ್ಷಣ ಪಡೆಯುವಲ್ಲಿ ಇಲ್ಲಿನ ವಿದ್ಯಾರ್ಥಿಗಳು ವಿಫಲರಾಗುತ್ತಿದ್ದಾರೆ. ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ಇಲ್ಲಿನ ಸ್ಥಳೀಯರಿಗೆ ಕನ್ನಡ ಭಾಷೆ, ಕನ್ನಡ ನಾಡಿನ ಬಗ್ಗೆ ಪ್ರೀತಿ ಕಾಳಜಿ ಕಂಡು ಬರುವುದಿಲ್ಲ. ನವೆಂಬರ್ ತಿಂಗಳಲ್ಲಿ ನಡೆಸುವ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಕರ್ನಾಟಕ-ಕನ್ನಡ-ಕನ್ನಡಿಗ ಎಂಬುದರ ಬಗ್ಗೆ ಮಾತನಾಡುವ ಗಣ್ಯರು ಸ್ಥಳೀಯರ ಮನ ಮುಟ್ಟುವಲ್ಲಿ ವಿಫಲರಾಗಿದ್ದಾರೆ.

ಇಂತಹ ಹತ್ತಾರು ಸಮಸ್ಯೆಗಳಿಂದಾಗಿ ಈ ಭಾಗದ ಜನರ ಜೀವನವೇ ಒಂದು ರೀತಿಯಲ್ಲಿ ಡೋಲಾಯಮಾನದ ಸ್ಥಿತಿಯಲ್ಲಿದೆ. ಇಲ್ಲಿನ ಜನರ ಬಹುದಿನಗಳ ಬೇಡಿಕೆಯಾದ ವಿಶೇಷ ರಾಜ್ಯದ (೩೭೧ ಪರಿಚ್ಛೇದ) ಬೇಡಿಕೆಯು ಕನಸಾಗಿಯೇ ಉಳಿದಿದೆ. ಈ ರೀತಿಯ ಸಮಸ್ಯೆಗಳಿಗೆ ಒಳಗಾಗುವ ಪ್ರದೇಶಗಳಿಗೆ ಸರಕಾರ ವಿಶೇಷ ಸೌಲಭ್ಯಗಳನ್ನು ನೀಡಬೇಕು. ಈಗಾಗಲೇ ನಿಜಾಂ ಸಂಸ್ಥಾನದಲ್ಲಿದ್ದ ಮತ್ತು ಈಗ ಮಹಾರಾಷ್ಟ್ರದಲ್ಲಿರುವ ವಿಧರ್ಭ ಮತ್ತು ಆಂಧ್ರದಲ್ಲಿನ ತೆಲಂಗಾಣ ಪ್ರಾಂತ್ಯಗಳಿಗೆ ಅಲ್ಲಿನ

ಸರಕಾರಗಳು ವಿಶೇಷ ಪ್ರದೇಶಗಳೆಂದು ಗುರುತಿಸಿ ಅನೇಕ ಸವಲತ್ತುಗಳನ್ನು ನೀಡಿದ್ದಾರೆ. ಹೀಗಿರುವಾಗ ಇವುಗಳಂತೆ ನಿಜಾಂ ಸಂಸ್ಥಾನದ ಭಾಗವಾಗಿದ್ದ ಈ ಪ್ರದೇಶವನ್ನು ನಮ್ಮ ಸರಕಾರ ಗುರುತಿಸುತ್ತಿಲ್ಲ. ಇದಕ್ಕೆ ಇಲ್ಲಿಯ ರಾಜಕಾರಣಿಗಳ, ಬುದ್ಧಿಜೀವಿಗಳ, ಹೋರಾಟಗಾರರ ನಿರ್ಲಜ್ಜತನ ಕಾರಣವಾಗಿದೆ.

ಒಟ್ಟಾರೆಯಾಗಿ 'ಕರ್ನಾಟಕ-ಆಂಧ್ರಗಡಿಭಾಗದಲ್ಲಿರುವ ಕನ್ನಡಿಗರ ಸ್ಥಿತಿ-ಗತಿ'ಯು ಪ್ರಾಕೃತಿಕವಾಗಿ, ಚಾರಿತ್ರಿಕವಾಗಿ, ಧಾರ್ಮಿಕವಾಗಿ, ಸಾಹಿತ್ಯಕವಾಗಿ, ಸಾಮಾಜಿಕವಾಗಿ ಅಭಿವೃದ್ಧಿ ಕಂಡಿದ್ದರು. ಶೈಕ್ಷಣಿಕವಾಗಿ, ಆರ್ಥಿಕವಾಗಿ ಮತ್ತು ಕನ್ನಡ ನಾಡುನುಡಿ ಪೂಜಿಸುವಲ್ಲಿ ಅಭಿವೃದ್ಧಿ ಕಾಣದೆ ಹೋಗಿದೆ ಎಂಬ ನಿಲುವನ್ನು ಈ ಅಧ್ಯಯನ ಹೊರಹಾಕುತ್ತದೆ.

• • •

# ೧. ಗ್ರಂಥಸೂಚಿ


೧. ಅಮರೇಶ ನುಗಡೋಣಿ, ಹೈದರಾಬಾದ್ ಕರ್ನಾಟಕದ ಹಾಡು ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೩.

೨. ಅಲ್ಲಾಳ ಎಲ್.ಬಿ.ಕೆ., ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಶ್ರೀ ರಾಮಲಿಂಗೇಶ್ವರ ತರುಣ ಸಂಘ, ೧೯೯೩.

೩. ಆನಂದ ಮೂರ್ತಿ ಜಿ.ವಿ., ತತ್ವಪದಕಾರರು, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೬.

೪. ಆರ್ವಿಯಸ್ ಸುಂದರಂ, ಆಂಧ್ರಪ್ರದೇಶದ ಜಾನಪದ, ನ್ಯಾಷನಲ್ ಬುಕ್ ಟ್ರಸ್ ಆಫ್ ಇಂಡಿಯಾ, ದೆಹಲಿ.

೫. ಎನ್ಕೆ, ಉತ್ತರ ಕರ್ನಾಟಕದ ರಂಗಭೂಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೬. ಕಡತೋಟದ ಎಂ.ಆರ್., ಧರ್ಮ, ಸಂಸ್ಕೃತಿ, ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧.

೭. ಕಲ್ಬುರ್ಗಿ ಎಂ.ಎಂ., ಉತ್ತರ ಕರ್ನಾಟಕದ ಜನಪದ, ಶಾರದಾ ಪುಸ್ತಕಾಲಯ, ಧಾರವಾಡ, ೧೯೭೮.

೮. ಕುಮಾರ ಡಿ.ಎಸ್., ಶ್ರೀ ಕೂಡ್ಲೂರ ಬಸವಲಿಂಗರ ತತ್ವಪದಗಳು, ಶ್ರೀ ಶರಣ ಪ್ರಕಾಶನ, ಕಲಬುರ್ಗಿ, ೧೯೯೪.

೯. ಕೃಷ್ಣ ಪರಮೇಶ್ವರ ಭಟ್ಟ, ಕನ್ನಡ ಮತ್ತು ತೆಲಗು ದ್ವಿಭಾಷಿಕತೆಯ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.

೧೦. ಕೃಷ್ಣರಾವ್ ಎಂ., ಕನ್ನಡ ತೆಲಗು ಸಂಬಂಧ ಸಾಹಿತ್ಯ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೦.

೧೧. ಗುಂಡಪ್ಪ ಡಿ.ವಿ., ಸಂಸ್ಕೃತಿ, ಕರ್ನಾಟಕ ಪ್ರಕಾಶನ, ಮೈಸೂರು, ೧೯೬೯.

೧೨. ಗೋಪಾಲ್‌ರಾವ್ ಹೇಜೀಬ್, ಹೈದರಾಬಾ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ, ೨೦೦೧.

೧೩. ಚಂದ್ರಶೇಖರ ಕಂಬಾರ, ಕನ್ನಡ ಜಾನಪದ ವಿಶ್ವಕೋಶ (ಸಂಪುಟ ೧ ಮತ್ತು ೨), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫.

೧೪. ಚಿದಾನಂದಮೂರ್ತಿ ಎಂ., ಗ್ರಾಮೀಣ, ಬಾಪ್ಕೋ ಪ್ರಕಾಶನ, ಬೆಂಗಳೂರು, ೧೯೭೭.

೧೫. ಜವರೇಗೌಡ ದೇ., ಕನ್ನಡ ಸಂಸ್ಕೃತಿ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೬. ತಿಪ್ಪೇರುದ್ರ ಸ್ವಾಮಿ ಎಚ್., ಕನ್ನಡದಲ್ಲಿ ಕೈವಲ್ಯ ಸಾಹಿತ್ಯ, ಚಿತ್ರರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ, ಇಲಕಲ್ಲು, ೧೯೮೩.

೧೭. ದೀಕ್ಷಿತ್ ಜಿ.ಎಸ್., ಕರ್ನಾಟಕ ಪರಂಪರೆ, ಸಾಹಿತ್ಯ ಸಂಸ್ಥೆ ಮತ್ತು ಅಭಿವೃದ್ಧಿ ಇಲಾಖೆ, ೧೯೭೦.

೧೮. ದುರ್ಗಾದಾಸ್ ಕೆ.ಆರ್., ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಸಮತಾ ಪ್ರಕಾಶನ, ಬೆಳಗಾವಿ, ೧೯೯೬.

೧೯. ನಾರಾಯಣ ಕೆ.ವಿ., ಮತ್ತೇ ಭಾಷೆಯ ಸುತ್ತ ಮುತ್ತ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೨.

೨೦. ಪ್ರಭು ಖಾನಾಪುರೆ, ಮುಸ್ಲಿಂ ತತ್ವಪದಕಾರರು, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮.

೨೧. ಬರಗೂರು ರಾಮಚಂದ್ರಪ್ಪ, ಕನ್ನಡಾಭಿಮಾನ, ಅಂಕಿತ ಪುಸ್ತಕ, ಬೆಂಗಳೂರು.

೨೨. ಬಸವರಾಜ ಕಲ್ಗುಡಿ, ಮಧ್ಯಕಾಲೀನ ಅನುಭವ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮.

೨೩. ಬಸವರಾಜ ಪೋಲೀಸ್ ಪಾಟೀಲ್, ಹೈದ್ರಾಬಾದ್ ಕರ್ನಾಟಕದ ಜನಪದ ಸಾಹಿತ್ಯ, ಅಮರ ಪ್ರಕಾಶನ, ಗುಲಬರ್ಗಾ ೨೦೦೦.

೨೪. ಬಸವರಾಜ ಮಲಶೆಟ್ಟಿ, ಉತ್ತರ ಕರ್ನಾಟಕದ ಬಯಲಾಟಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೩.

೨೫. ಬಸವರಾಜ ಸಬರದ, ಗುಲಬರ್ಗಾ ಜಿಲ್ಲೆಯ ಅನುಭಾವಿ ಕವಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೨೬. ಬಿರಾದಾರ ಮ.ಗು., ಜಾನಪದ ಜೀವಾಳ, ಪುಸ್ತಕ ಅಕಾಡೆಮಿ, ಗುಲಬರ್ಗಾ, ೧೯೮೨.

೨೭. ಭಟ್.ಜಿ.ಎಸ್., ಪ್ರಾಚೀನ ಭಾರತದಲ್ಲಿಯ ಜನಜೀವನ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೮೪.

೨೮. ಬೆಟಗೇರಿ ಕೃಷ್ಣಶರ್ಮ, ಕರ್ನಾಟಕ ಜನಜೀವನ, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೧.

೨೯. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ, ಮಾತಾ ಮಾಣಿಕೇಶ್ವರಿ, ಶ್ರೀಮಾತೆ ಮಾಣಿಕೇಶ್ವರಿ ಪ್ರಸಾದ ನಿಲಯ ಟ್ರಸ್ಟ್, ನೆಹರು ಗಂಜ್, ಗುಲಬರ್ಗಾ, ೧೯೯೪.

೩೦. ಮಹಾದೇವಪ್ಪ ಬಿ., ಮೋಟ್ನಳ್ಳಿ ಹಸನ ಸಾಹೇಬ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬.

೩೧. ಮಹಾದೇವಯ್ಯ ಪಿ., ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೨. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ - ಕರ್ನಾಟಕದ ರಾಜಕೀಯ ಚಳುವಳಿಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ, ೧೯೯೭.

೩೩. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ - ಕರ್ನಾಟಕದ ಸ್ವಾತಂತ್ರ ಚಳುವಳಿ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ, ೧೯೯೪.

೩೪. ರಹಮತ್ ತರೀಕೆರೆ, ಬಹು ಭಾಷಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೫. ರಾಮಚಂದ್ರೇಗೌಡ ಹಿ.ಶಿ., ಜಾನಪದ ಸಾಂಸ್ಕೃತಿಕ ಆಯಾಮಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮.

೩೬. ರಾಮೇಶ್ವರ ಎ.ಕೆ., ಅಚ್ಚಮಲ್ಲಿಗೆ ಹೂ, ಕವಿರಾಜಮಾರ್ಗ ಪ್ರಕಾಶನ, ಗುಲಬರ್ಗಾ, ೧೯೯೬.

೩೭. ರುಕ್ಮುದ್ದೀನ್ ಸಾಹೇಬ, ಅಪರೋಕ್ಷ ಜ್ಞಾನ-ಜ್ಯೋತಿ, ಶ್ರೀ ಶರಣ ಪ್ರಕಾಶನ, ಕಲಬುರ್ಗಿ, ೧೯೯೭.

೩೮. ಲಕ್ಕಪ್ಪಗೌಡ ಎಚ್.ಜೆ., ಮಲೆನಾಡು ಜಾನಪದ, ಮೈಸೂರು ವಿಶ್ವವಿದ್ಯಾಲಯ, ಬಿ.ಆರ್. ಪ್ರಾಜೆಕ್ಟ್, ಮೈಸೂರು, ೧೯೮೩.

೩೯. ಶಂಕರಭಟ್ ಡಿ.ಎನ್., ಕನ್ನಡ ಭಾಷೆಯ ಕಲ್ಪಿತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೪೦. ಶಂಬಾ ಜೋಶಿ, ಕನ್ನಡ ಸಂಸ್ಕೃತಿ ಪೂರ್ವ ಪೀಠಿಕೆ (ಭಾಗ-೨), ಶಾರದಾ ಪುಸ್ತಕಾಲಯ, ಧಾರವಾಡ, ೧೯೬೬.

೪೧. ಶಂಬಾ ಜೋಶಿ, ಕನ್ನಡ ನುಡಿಯ ಜೀವಾಳ, ಶಾರದಾ ಪುಸ್ತಕಾಲಯ, ಧಾರವಾಡ, ೧೯೭೩.

೪೨. ಶಂಬಾ ಜೋಶಿ, ಕನ್ನಡ ನುಡಿಯ ಹುಟ್ಟು, ನಿರಕ್ತ ಮಾಧವ ಬಲ್ಲಾಳ ಗ್ರಂಥ, ಧಾರವಾಡ, ೧೯೩೭.

೪೩. ಶಿವಕುಮಾರ ಸ್ವಾಮಿ ಸಿ.ಎಸ್., ಕರ್ನಾಟಕದ ಜಾತ್ರೆಗಳು, ಬಿ.ಆರ್. ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೪. ಶಿವರುದ್ರಪ್ಪ ಜಿ.ಎಸ್., ಕರ್ನಾಟಕ ಜಾನಪದ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೦.

೪೫. ಸಂಗಮೇಶ ಸವದತ್ತಿಮಠ, ಭಾಷಾಲೇಖ, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ೧೯೯೯.

೪೬. ಸತ್ಯನಾಥ ಟಿ.ಎಸ್., ಕನ್ನಡ ಜಾನಪದ ಕೆಲವು ಮುಖಗಳು, ಶಾರದಾ ಪ್ರಕಾಶನ, ಬೆಂಗಳೂರು, ೧೯೮೮.

೪೭. ಸ್ವಾಮಿ ಎಸ್.ಜಿ., ಕೂಡಲೂರು ಬಸವಲಿಂಗಪ್ಪ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬.

೪೮. ಸಿದ್ಧಲಿಂಗಯ್ಯ, **ಗ್ರಾಮ ದೇವತೆಗಳು**, ಮೂಲ ಭಾರತಿ ಪ್ರಕಾಶನ, ಬೆಂಗಳೂರು, ೧೯೯೭.

೪೯. ಸುಂಕಾಪುರ ಎಂ.ಎಸ್., **ಕರ್ನಾಟಕ ಭಾರತಿ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬.

೫೦. ಹನುಮಂತರಾವ್ ಬಿ. ದೊಡ್ಡಮನಿ, **ಸುಕ್ಷೇತ್ರ ಘತ್ತರಗಿ**, ಶಾಂತಕುಮಾರ ಪ್ರಕಾಶನ, ಮಲ್ಲಾಬಾದ್, ೨೦೦೩.

೫೧. ಹರಿಶ್ಚಂದ್ರ ದಿಗ್ಸಂಗಿಕರ್, **ದಲಿತ ತತ್ತ್ವಪದಕಾರ ಜಂಬಗಿ ಶರಣ**, ಅಭಯ ಪ್ರಕಾಶನ, ಗುಲಬರ್ಗಾ, ೨೦೦೩.

• • •

## ೨. ವಕ್ತೃಗಳ ಸೂಚಿ

| ಕ್ರ.ಸಂ. | ವಕ್ತೃಗಳ ಹೆಸರು | ಊರು | ತಾಲ್ಲೂಕು | ವಯಸ್ಸು | ಶಿಕ್ಷಣ | ಉದ್ಯೋಗ |
|---|---|---|---|---|---|---|
| ೦೧. | ಮೊಗಲಪ್ಪ ಕಾನಾಗಡ್ಡಿ | ಕಾನಾಗಡ್ಡಿ | ಸೇಡಂ | ೩೨ | ೭ನೇ | ವ್ಯವಸಾಯ |
| ೦೨. | ಹಣಮಂತಪ್ಪ ನಾಟಿಕಾರ | ಮುಧೋಳ | ಸೇಡಂ | ೩೦ | ೧೦ನೇ | ಕಿರಾಣಿ ವ್ಯಾಪಾರ |
| ೦೩. | ಕಾಶಪ್ಪ ಬುಗ್ಗಪ್ಪ | ಕಡಚರ್ಲಾ | ಸೇಡಂ | ೩೮ | ಅನಕ್ಷರಸ್ಥ | ವ್ಯವಸಾಯ |
| ೦೪. | ಮ. ಖಾಜಾ ಹುಸೇನ್ | ಕಡತಾಲ | ಸೇಡಂ | ೩೦ | ಎಂ.ಎ. | ಉಪನ್ಯಾಸಕರು |
| ೦೫. | ಶರಣಪ್ಪಾ ಪರಿಗೇಡ | ಕಡಚರ್ಲಾ | ಸೇಡಂ | ೩೦ | ಎಂ.ಎ. | ಉಪನ್ಯಾಸಕರು |
| ೦೬. | ಅಶೋಕ ಮದನಾ | ಮದನಾ | ಸೇಡಂ | ೨೮ | ಬಿ.ಎ. | ವಿದ್ಯಾರ್ಥಿ |
| ೦೭. | ಬಸವರಾಜ ಕಟ್ಟಿಮನಿ | ಕೋಲಕುಂದಾ | ಸೇಡಂ | ೨೮ | ಬಿ.ಎ. | ವಿದ್ಯಾರ್ಥಿ |
| ೦೮. | ಜಯಪ್ರಕಾಶ ರೆಡ್ಡಿ | ಕೋಲಕುಂದಾ | ಸೇಡಂ | ೨೮ | ಬಿ.ಎ. | ವ್ಯವಸಾಯ |
| ೦೯. | ನಾಗರಾಜ ಕುಂಬಾರ | ಕೋಲಕುಂದಾ | ಸೇಡಂ | ೨೮ | ಬಿ.ಎಡ್. | ಶಿಕ್ಷಕರು |
| ೧೦. | ಶಿವರಾಜ ಆವಂಟಿ | ಕೋಲಕುಂದಾ | ಸೇಡಂ | ೨೮ | ಬಿ.ಎ. | ಕೃಷಿ ವ್ಯಾಪಾರಿಗಳು |
| ೧೧. | ನಾಗರಾಜ ಮುಗಳಿ | ಕೋಲಕುಂದಾ | ಸೇಡಂ | ೩೩ | ಬಿ.ಎ. | ವ್ಯವಸಾಯ |
| ೧೨. | ಮಲ್ಲನಗೌಡ ರೆಡ್ಡೆ | ನಾಚವಾರ | ಸೇಡಂ | ೩೮ | ಪಿ.ಯು.ಸಿ. | ವ್ಯವಸಾಯ |
| ೧೩. | ಮಾರೆಮ್ಮ | ದ್ಯಾವನೂರ | ಸೇಡಂ | ೩೦ | ಅನಕ್ಷರಸ್ಥೆ | ಕೂಲಿ ಕೆಲಸ |
| ೧೪. | ಮಾಹಂತಯ್ಯ ಸ್ವಾಮಿ | ಕೋಲಕುಂದಾ | ಸೇಡಂ | ೩೫ | ೧೦ನೇ | ಅರ್ಚಕರು |
| ೧೫. | ಶಿವಶರಣಪ್ಪ ಬಳಗಾರ | ಕೋಲಕುಂದಾ | ಸೇಡಂ | ೪೦ | ೧೦ನೇ | ರೇಷನ್ ಅಂಗಡಿ |
| ೧೬. | ಖಾಜಾ ಸಾಬ | ಯಾನಾಗುಂದಿ | ಸೇಡಂ | ೫೫ | ಅನಕ್ಷರಸ್ಥ | ಮುಲ್ಲಾ |
| ೧೭. | ಬಸವಲಿಂಗಪ್ಪ | ಕೋಲಕುಂದಾ | ಸೇಡಂ | ೪೦ | ೭ನೇ | ಪೂಜಾರಿ |
| ೧೮. | ಸಾಯಬಣ್ಣ | ಕೋಲುಕುಂದಾ | ಸೇಡಂ | ೨೮ | ಅನರಕ್ಷಸ್ಥ | ವ್ಯವಸಾಯ |
| ೧೯. | ನಟರಾಜ | ತುಮಕುಂಟ | ಚಿಂಚೋಳಿ | ೩೦ | ಎಂ.ಎ. | ವ್ಯಾಪಾರ |

| ಕ್ರ.ಸಂ. | ವಕ್ತೃಗಳ ಹೆಸರು | ಊರು | ತಾಲ್ಲೂಕು | ವಯಸ್ಸು | ಶಿಕ್ಷಣ | ಉದ್ಯೋಗ |
|---|---|---|---|---|---|---|
| ೨೦. | ಬುಗ್ಗಪ್ಪ | ಐನೋಳಿ | ಚಿಂಚೋಳಿ | ೩೦ | ಎಂ.ಎ. | ಶಿಕ್ಷಕ |
| ೨೧. | ಶಿವಶರಣಪ್ಪ | ಗಾರಂಪಳ್ಳಿ | ಚಿಂಚೋಳಿ | ೩೦ | ಬಿ.ಎ. | ವಿದ್ಯಾರ್ಥಿ |
| ೨೨. | ಗುರಪಾದ | ಚಂದಾಪುರ | ಚಿಂಚೋಳಿ | ೪೦ | ಪಿ.ಯು.ಸಿ. | ವಾಹನ ಚಾಲಕ |
| ೨೩. | ಗ್ಯಾನಪ್ಪ ಬಡಿಗೇರ | ಚಿಂಚೋಳಿ | ಚಿಂಚೋಳಿ | ೩೫ | ೧೦ನೇ | ಬಡಿಗತನ |
| ೨೪. | ಸಿದ್ಧರಾಮಪ್ಪರೆಡ್ಡಿ | ಚಿತ್ತಾಪುರ | ಚಿತ್ತಾಪುರ | ೩೦ | ೧೦ನೇ | ವ್ಯವಸಾಯ |
| ೨೫. | ಸುನೀಲ ಮುಜಗೊಂಡೆ | ಮಣ್ಣೂರು | ಅಫಜಲಪುರ | ೩೫ | ಬಿ.ಎ. | ಗುತ್ತಿಗೆದಾರರು |
| ೨೬. | ಸಂಗಯ್ಯ ಸ್ವಾಮಿ | ಘುತ್ತರಗಿ | ಅಫಜಲಪುರ | ೫೫ | ಅನಕ್ಷರಸ್ಥ | ಪೂಜಾರಿ |
| ೨೭. | ಮಾಳಿಂಗರಾಯ | ಮೈಲಾರ | ಯಾದಗೀರ | ೩೮ | ೧೦ನೇ | ಪೂಜಾರಿ |
| ೨೮. | ನರಸಮ್ಮ ಕಣಿಕಲ್ಲ | ಎಲೇರಿ | ಯಾದಗೀರ | ೩೮ | ಅನಕ್ಷರಸ್ಥ | ಕೂಲಿ ಕೆಲಸ |
| ೨೯. | ಮಲಕಪ್ಪ | ಗುರಮಿಠಕಲ್ | ಯಾದಗೀರ | ೩೫ | ಅನಕ್ಷರಸ್ಥ | ಕೂಲಿಕಾರ |
| ೩೦. | ನಂದಕುಮಾರ ಮಾದರ | ಪುಟಪಾಕ | ಯಾದಗೀರ | ೩೫ | ೭ನೇ | ವ್ಯಾಪಾರ |
| ೩೧. | ರುಕ್ಮಿಣಿ ಡಾಕಂ | ಗಾಜರಕೋಟ | ಯಾದಗೀರ | ೪೦ | ಅನಕ್ಷರಸ್ಥ | ಮನೆಗೆಲಸ |
| ೩೨. | ಶರಣಪ್ಪಾ ಮದನಾ | ಗಾಜರಕೋಟ | ಯಾದಗೀರ | ೩೩ | ೧೦ನೇ | ಕೃಷಿ ಇಲಾಖೆ |
| ೩೩. | ದೇವೇಂದ್ರಪ್ಪ | ಯರಗೋಳ | ಯಾದಗೀರ | ೩೦ | ಎಂ.ಎ. | ಶಿಕ್ಷಕ |
| ೩೪. | ಭೀಮಣ್ಣ ಕಟ್ಟೀಮನಿ | ಯಾದಗೀರ | ಯಾದಗೀರ | ೪೫ | ಅನಕ್ಷರಸ್ಥ | ಹಣ್ಣಿನ ವ್ಯಾಪಾರ |
| ೩೫. | ಶರಣಪ್ಪ ಕಟ್ಟೀಮನಿ | ಯಾದಗೀರ | ಯಾದಗೀರ | ೪೦ | ಅನಕ್ಷರಸ್ಥ | ಹಣ್ಣಿನ ವ್ಯಾಪಾರ |
| ೩೬. | ದೇವೇಂದ್ರಪ್ಪ | ಮೈಲಾರ | ಯಾದಗೀರ | ೩೨ | ಅನಕ್ಷರಸ್ಥ | ಗೋಂದಲಿಗರು |
| ೩೭. | ಶರಣಬಸಪ್ಪ | ಗಾಜರಕೋಟ | ಯಾದಗೀರ | ೩೮ | ೧೦ನೇ | ಕಿರಾಣಿ ಅಂಗಡಿ |
| ೩೮. | ಮೊಗಲಪ್ಪ | ಹತ್ತಿಕುಣಿ | ಯಾದಗೀರ | ೩೫ | ಬಿ.ಎ. | ವ್ಯವಸಾಯ |
| ೩೯. | ಮಲ್ಲವ್ವ | ಕಡಚರ್ಲಾ | ಸೇಡಂ | ೨೫ | ಅನಕ್ಷರಸ್ಥ | ಕೂಲಿ ಕೆಲಸ |
| ೪೦. | ದುರಗವ್ವ | ಯಾದಗೀರ | ಯಾದಗೀರ | ೪೦ | ಅನಕ್ಷರಸ್ಥ | ದೇವದಾಸಿ |

• • •



ಕೋಲಕುಂದಾ ಗ್ರಾಮದಲ್ಲಿನ ಈರೋಡ್ಯಾ ಶಿಲ್ಪಗಳು (ನಾಗದೇವತೆ).



ಮುಧೋಳ ಗ್ರಾಮದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿರುವ
ಚಾರಿತ್ರಿಕ ಅವಶೇಷಗಳು.



ಸೇಡಂನ ಪಂಚಲಿಂಗೇಶ್ವರ ದೇವಾಲಯ.



ಆಡಕಿ ಗ್ರಾಮದ ಶಿವಲಿಂಗೇಶ್ವರ ದೇವಸ್ಥಾನದ ಮೇಲ್ಭಾವಣಿ.



ಕಡಚರ್ಲಾ ಗ್ರಾಮದಲ್ಲಿನ ವೀರಗಲ್ಲು.



ಮೇದಕ್ ಗ್ರಾಮದ ಭೂತನಾಥೇಶ್ವರ ದೇವಸ್ಥಾನದ ವಾಸ್ತುಶಿಲ್ಪ.



ಗಾಜರಕೋಟದ ರಾಚಪ್ಪಯ್ಯ, ಕಡ್ಲಪ್ಪಯ್ಯ ಮಠ.



ಯಾಕಂಬರಿಯಲ್ಲಿನ ಕ್ಷೇಮಲಿಂಗೇಶ್ವರ ದೇವಸ್ಥಾನ ಹಾಗೂ ಯಾಕುಬ್‌ಸಾಬ್ ದರ್ಗಾ.



ಯಾನಗುಂದಿಯ ಮಾಣಿಕೇಶ್ವರಿ ದೇವಸ್ಥಾನ ಮತ್ತು ಮೌಲಾಲಿ ದರ್ಗಾ.



ಗುರುಮಠಕಲ್ಲಿನ ಶಾಂತವೀರ ಮಠದ ರಥೋತ್ಸವದಲ್ಲಿ ನೆರೆದ ಭಕ್ತ ಸಮೂಹ.



ವೀರಭದ್ರ ದೈವದ ಆರಾಧನೆಗೆ ಹೊರಡುತ್ತಿರುವ ಪುರುವಂತಿಕೆಯವರು.



ವೀರಭದ್ರ ಉತ್ಸವದಲ್ಲಿ ದೀರ್ಘದಂಡ ನಮಸ್ಕಾರ ಹಾಕುತ್ತಿರುವ ಭಕ್ತ.



ಸೋದರ ಮಾವನಿಂದ ಜವಳ(ಹುಟ್ಟುಕೂದಲು) ತೆಗೆಸುವ ಕಾರ್ಯಕ್ರಮ.



ಮುಸ್ಲಿಂ ಸಮುದಾಯದ ಮಗುವಿನ ನಾಮಕರಣ ಕಾರ್ಯಕ್ರಮ.



ಋತುಮತಿಯಾದ ಹುಡುಗಿಯಿಂದ ನೆರವೇರಿಸುವ ಗಂಗೆಪೂಜೆ.



ಮದುವೆಯ ಸಂದರ್ಭದಲ್ಲಿ ಬಳೆಯಿಡಿಸುವ ಕಾರ್ಯಕ್ರಮ.



ಮದುವೆಯ ಮುಂಚಿನ ಬೀಸುಕಲ್ಲಿನ ಪೂಜೆ.



ವಧುವಿಗೆ ಎಣ್ಣೆಹಚ್ಚಿ ನೀರೆರೆಯುವ ಕಾರ್ಯ.



ಕುರುಕಂಟಾದ ಗಣಿಯಿಂದ ವ್ಯಾಪಾರಕ್ಕಾಗಿ
ಸಾಗಿಸುತ್ತಿರುವ ಹಾಸುಕಲ್ಲುಗಳು .



ಕೊಂಚಾವರಂನಲ್ಲಿನ ಕನ್ನಡ - ತೆಲುಗು ಮಾಧ್ಯಮದ
ಪ್ರಾಥಮಿಕ ಶಾಲೆ.



ಸೇಡಂ ವಾಸುದತ್ತಾ ಸಿಮೆಂಟ್ ಕಾರ್ಖಾನೆ ಹಾಗು ಹೊರ
ಆವರಣದಲ್ಲಿರುವ ಕಾರ್ಮಿಕರ ಮನೆಗಳು.



ಗಡಿಭಾಗದ ಜನರು ಹೈದ್ರಾಬಾದ್ ನಗರಕ್ಕೆ ಗುಳೆ
ಹೋಗುತ್ತಿರುವುದು.




ಆಂಧ್ರದ ರಸ್ತೆಗೆ ಹೋಲಿಸಿದಾಗ ಕರ್ನಾಟಕ ಗಡಿಭಾಗದ
ರಸ್ತೆಯ ದುಸ್ಥಿತಿ.



ಮುಧೋಳ ಗ್ರಾಮದ ಹೊರವಲಯದಲ್ಲಿರುವ ಮೂಲಭೂತ
ಸೌಲಭ್ಯ ವಂಚಿತ ಆಶ್ರಯ ಮನೆಗಳು.

